# ಕನ್ನಡ ಅನುಭಾವ ಸಾಹಿತ್ಯದಲ್ಲಿ ಜ್ಞಾನದ ನಿರ್ವಚನ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)

ಸಂಶೋಧಕರು
ಪ್ರಿಯದರ್ಶಿನಿ

ಮಾರ್ಗದರ್ಶಕರು
ಡಾ. ವೀರೇಶ ಬಡಿಗೇರ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ




ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೯

# ಕನ್ನಡ ಅನುಭಾವ ಸಾಹಿತ್ಯದಲ್ಲಿ ಜ್ಞಾನದ ನಿರ್ವಚನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ(ಪಿಎಚ್.ಡಿ) ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಪ್ರಿಯದರ್ಶಿನಿ

ಮಾರ್ಗದರ್ಶಕರು

ಡಾ. ವೀರೇಶ ಬಡಿಗೇರ
ಪ್ರಾಧ್ಯಾಪಕರು



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

೨೦೧೯

## ಮಾರ್ಗದರ್ಶಕರ ದೃಢೀಕರಣ ಪತ್ರ

ಪ್ರಿಯದರ್ಶಿನಿ ಅವರು ನನ್ನ ಮಾರ್ಗದರ್ಶನದಲ್ಲಿ **'ಕನ್ನಡ ಅನುಭಾವ ಸಾಹಿತ್ಯದಲ್ಲಿ ಜ್ಞಾನದ ನಿರ್ವಚನ'** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**

**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೪|೬|೧೮

## ಸಂಶೋಧಕರ ಪ್ರಮಾಣ ಪತ್ರ

**'ಕನ್ನಡ ಅನುಭಾವ ಸಾಹಿತ್ಯದಲ್ಲಿ ಜ್ಞಾನದ ನಿರ್ವಚನ'** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ **ಡಾ.ವೀರೇಶ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಪ್ರಿಯದರ್ಶಿನಿ
ಸಂಶೋಧನಾ ವಿದ್ಯಾರ್ಥಿನಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 14/06/2019

## ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಪ್ರೇರಣೆ, ವ್ಯಾಪ್ತಿ, ಸ್ವರೂಪ, ವಿಧಾನ

**ಪ್ರಸ್ತಾವನೆ**

ಜ್ಞಾನದ ಸಂಕಥನ ಎನ್ನುವುದು ಸಾರ್ವತ್ರಿಕವೂ ಅಲ್ಲ. ಸಾರ್ವಕಾಲಿಕವೂ ಅಲ್ಲ. ಸ್ಥಿರವೂ ಅಲ್ಲ. ಕಾಲ, ದೇಶ, ವ್ಯಕ್ತಿ, ಸಮುದಾಯಗಳಿಗೆ ಅನುಗುಣವಾಗಿ ಅದು ಕೂಡಿ ರೂಪುದಾಳುತ್ತಾ ಬಂದಿದೆ. ಆದರೆ ಜ್ಞಾನದ ಸಂಕಥನದ ಕುರಿತು ಚರ್ಚಿಸುವಾಗ, ಅದನ್ನು ಸ್ಥಗಿತ ಹಾಗೂ ಬದಲಾಗದ ಮಾದರಿಗಳೊಂದಿಗೆ ಇಟ್ಟು ನೋಡುತ್ತಾ ಬರಲಾಗಿದೆ. ನನ್ನ ಅಧ್ಯಯನವು ಜ್ಞಾನವನ್ನು ಕಲಿಕೆಯ ಬಾಹ್ಯರೂಪಿ ಮತ್ತು ಸ್ಥಿರಸ್ವರೂಪಿ ನೆಲೆಗಳಿಗಿಂತ ಭಿನ್ನವಾಗಿ ಪ್ರಕ್ರಿಯಾಸ್ವರೂಪಿ ನೆಲೆಯಲ್ಲಿ ಪರಿಭಾವಿಸುವ ಹವಣಿಕೆಯುಳ್ಳದ್ದಾಗಿದೆ.

ಅಲ್ಲಮಪ್ರಭುವಿನಿಂದ, ಅರಿಸ್ಟಾಟಲ್‌ವರೆಗೆ ಇಂದಿನ ತನಕವೂ ಅನೇಕ ಚಿಂತಕರು ನಿರ್ದಿಷ್ಟ ಭಾಷೆಯೊಂದರಲ್ಲಿ ನಿಷ್ಪನ್ನಗೊಳ್ಳುವ ಜ್ಞಾನ ಹಾಗೂ ಅದರ ಮಿತಿ ಮತ್ತು ಸಾಧ್ಯತೆಗಳ ಬಗೆಗೆ ನಿರಂತರವಾಗಿ ಚರ್ಚಿಸುತ್ತಲೇ ಬಂದಿದ್ದಾರೆ. ಇಂತಹ ತಿಳುವಳಿಕೆಯ ಹಿಂದಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿನ್ಯಾಸಗಳ ಬಗೆಗೂ ಅನೇಕರು ಬೆಳಕು ಚೆಲ್ಲಿದ್ದಾರೆ. ಅನೇಕ ಸಾಮಾನ್ಯ ಸಂಗತಿಗಳಿಂದ ನಿಷ್ಪನ್ನಗೊಳ್ಳುವ ಜ್ಞಾನ ಸಮಕಾಲೀನ ರಾಜಕೀಯ ಹಾಗೂ ಧಾರ್ಮಿಕ ಪ್ರಭಾವಕ್ಕೆ ಒಳಗಾಗಿರುತ್ತದೆ. ಆ ಎಚ್ಚರದಲ್ಲಿ ನನ್ನ ಒಟ್ಟು ಅಧ್ಯಯನದ ರೂಪುರೇಷಗಳನ್ನು ಕಟ್ಟಿಕೊಂಡಿದ್ದೇನೆ.

ಅನುಭಾವ ಪರಂಪರೆಯಲ್ಲಿ ಅನುಭಾವ ಎನ್ನುವುದು ತಿಳುವಳಿಕೆ ಎನ್ನುವ ವಿಶಾಲಾರ್ಥದಲ್ಲಿ ಬಳಕೆಯಾಗುತ್ತದೆ. 'ಜ್ಞಾನದ ಅತ್ಯುನ್ನತ ಶಿಖರವೇ ಅನುಭಾವ'. ಭೌತಿಕ ಜಗತ್ತನ್ನೂ ಮನುಷ್ಯ ಸಹಜ ಮಿತಿಗಳನ್ನು ಮೀರಿದ್ದು. ಅದೊಂದು ಆತ್ಮವಿಕಸನ ಆತ್ಮವಿದ್ಯೆ. 'ವ್ಯಕ್ತಿ ತನ್ನ ಅರಿವಿನಿಂದ ಮತ್ತು ಅದರ ಆಚರಣೆಯಿಂದ ಪಡೆದ ಅನುಭವವನ್ನು ನಿರ್ದೇಶಿಸುವುದೇ' ಅನುಭಾವ. ಇದಕ್ಕೆ ಬಹುಮುಖ್ಯವಾಗಿ ಬೇಕಾದದ್ದು ಸ್ವಅರಿವು ಮತ್ತು ಒಳ ಎಚ್ಚರ.

ಈ ಅನುಭಾವ ಮಾರ್ಗ ಕೇವಲ ಒಬ್ಬ ವ್ಯಕ್ತಿಯ ಮನಸ್ಸಿನಲ್ಲಿ ನಿರ್ಮಿತವಾದ ಬೇಕು ಬೇಡಗಳ ಸಿದ್ಧಾಂತದ ಹೊರೆಯಲ್ಲ, ಹಲವು ಚೇತನಗಳು ತಮ್ಮ ಸತತ ಸಾಧನೆಯಿಂದ, ಬದುಕಿ, ಬಾಳಿ, ಸಾಧಿಸಿ ತೋರಿಸಿದ ಜೀವಂತ ಶಕ್ತಿ. ಈ ಅನುಭಾವದ ಸ್ಥಿತಿಗೆ ತಲುಪಲು ಅನುಭಾವಿಗಳು ಅರಿವು

ಮತ್ತು ಆಧ್ಯಾತ್ಮದೆಡೆಗೆ ಸಾಗುತ್ತಾರೆ. ಈ ಪರಿಪೂರ್ಣತ್ವವನ್ನು ಸಾಧಿಸಲು ಕ್ರಿಯಾ ಜ್ಞಾನ ಮತ್ತು ಅರಿವು ಮುಖ್ಯ. ಕನ್ನಡದ ಎಲ್ಲಾ ಅನುಭಾವಿಗಳು ಜ್ಞಾನವನ್ನು ನಡೆ, ನುಡಿ, ಅರಿವು, ಆಚಾರ, ಜ್ಞಾನ, ತಿಳಿವಳಿಕೆ, ವಿವೇಕ, ಕ್ರಿಯೆ, ಕಾಯಕ, ಕೌಶಲ್ಯ, ಅರ್ಪಣೆ, ವಿಚಾರ, ಭಾವ, ಭಕ್ತಿ, ಬೆಳಕು, ಸಂಸ್ಕೃತಿ, ಸತ್ಯ, ಶುದ್ಧ, ಶೀಲ, ವ್ರತ ಮುಂತಾದ ಪರಿಭಾಷೆಗಳಲ್ಲಿ ವಿವರಿಸಿದ್ದಾರೆ. ಜ್ಞಾನದ ದರ್ಶನ, ಜ್ಞಾನದ ವಿವಿಧ ಮಜಲುಗಳು, ಅಕ್ಷರ ವಿದ್ಯೆಯ ವೈಫಲ್ಯ, ಸ್ವಾನುಭವ ಜ್ಞಾನದ ಸಾಫಲ್ಯವನ್ನು ಲೋಕದರ್ಶನ ಮಾಡಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ವಿವಿಧ ಪರಿಭಾಷೆಗಳಲ್ಲಿ ಮತ್ತು ವಚನ, ಕೀರ್ತನೆ, ತತ್ವಪದಗಳಲ್ಲಿ ನಮ್ಮ ದಾರ್ಶನಿಕರು ಅಕ್ಷರ ವಿದ್ಯೆಗಿಂತ ಭಿನ್ನವಾಗಿ ವಿವರಿಸಿದ್ದಾರೆ. ಅದರಲ್ಲೂ ಕಾಯಕ ಜೀವಿಗಳಾದ ಶರಣ-ಶರಣೆಯರು ಈ ಪರಿಭಾಷೆಗಳನ್ನು ತಮ್ಮ ಕಾಯಕ ಪರಿಭಾಷೆಗಳ ಜೊತೆ ಕಸಿಗೊಳಿಸಿಕೊಂಡಿದ್ದಾರೆ. ದಾಸರು ಭಕ್ತಿ ಮಾರ್ಗವನ್ನು ಬಳಸಿಕೊಂಡರೆ, ತತ್ವಪದಕಾರರು ತೋಂಡೀ ಪರಂಪರೆಯನ್ನು ಹುರಿಗೊಳಿಸಿ ಹಾಗೆ ಪ್ರತ್ಯಕ್ಷಾನುಭವದ ಹಿನ್ನೆಲೆಯಲ್ಲಿ ಹುರಿಗೊಂಡ ಜ್ಞಾನದ ಸತ್ಯದ ನೆಲೆಗಳನ್ನು ಹುಡುಕುವುದು ನನ್ನ ಉದ್ದೇಶವಾಗಿದೆ.

**೧.೧. ಅಧ್ಯಯನದ ಉದ್ದೇಶ ಹಾಗೂ ಪ್ರೇರಣೆ**

ಜ್ಞಾನ ಮೀಮಾಂಸೆ ಎಂಬುದು ತತ್ವಶಾಸ್ತ್ರದ ಒಂದು ಶಾಖೆಯಾಗಿದ್ದು, ಜ್ಞಾನದ ಕುರಿತು ಅಧ್ಯಯನ ಮಾಡುವುದಾಗಿದೆ. ಜ್ಞಾನ ಎನ್ನುವುದು ಒಂದು ವಿಶೇಷವಾದ ಮಾನಸಿಕ ಕ್ರಿಯೆ ಅಥವಾ ಸಾಮರ್ಥ್ಯವಾಗಿದೆ. ಇದನ್ನು ಅರಿವು, ಬುದ್ಧಿ, ತಿಳಿವಳಿಕೆ, ಸ್ವಧರ್ಮ, ಸ್ವಭಾವ, ಅನುಭವ ಎಂದು ವಿವಿಧಾರ್ಥಗಳಲ್ಲಿ ಕರೆಯಲಾಗಿದೆ. ಸಾಮಾನ್ಯವಾಗಿ ಮಾನವ ತನ್ನ ಮೂಲ ಉಗಮದಿಂದ ಪ್ರತಿನಿತ್ಯವು ಪ್ರತ್ಯಕ್ಷ, ಪರೋಕ್ಷ, ಪ್ರಜ್ಞಾಪೂರಕ ಹಾಗೂ ಅಪ್ರಜ್ಞಾಪೂರಕವಾಗಿ ಗಳಿಸಿದ ಅಥವಾ ಸಂಪಾದಿಸಿದ ಅನುಭವಗಳ ಒಟ್ಟು ಮೊತ್ತವೇ ಜ್ಞಾನ ಎನ್ನಲಾಗಿದೆ.

ಈ ಜ್ಞಾನದ ಮೂಲ ಎಂದರೆ ಜ್ಞಾನದ ಆಕರಗಳು ಅಥವಾ ನಾವು ಅನುಸರಿಸುವ ಮಾರ್ಗಗಳು. ನಾವು ಪ್ರತಿನಿತ್ಯ ವಿವಿಧ ಮೂಲಗಳಿಂದ ಒಂದಲ್ಲ ಒಂದು ರೀತಿಯಲ್ಲಿ ನಿರಂತರವಾಗಿ ಜ್ಞಾನ ಪಡೆಯುತ್ತಲೇ ಇರುತ್ತೇವೆ. ಅದು ಪ್ರಕೃತಿಯಿಂದ ಆಗಿರಬಹುದು ಅಥವಾ ಇನ್ನಾವುದೇ ಮೂಲದಿಂದ ಆಗಿರಬಹುದು. ನಾವು ಓದುವ ಪುಸ್ತಕದಿಂದ, ನೋಡುವ ನೋಟಗಳಿಂದ, ಗ್ರಂಥಗಳಿಂದ, ಹಿರಿಯರ ಮಾತುಗಳಿಂದ, ಚರ್ಚೆಗಳಿಂದ ಹಾಗೂ ಅನುಭವದಿಂದ ಜ್ಞಾನ ಪಡೆಯುತ್ತೇವೆ. ದಾರ್ಶನಿಕರೆಲ್ಲರೂ ಜ್ಞಾನದ ಮೂಲವನ್ನು 'ಪ್ರತ್ಯಕ್ಷ ಪ್ರಮಾಣ' ಎಂದು ಕರೆದಿದ್ದಾರೆ. ಪ್ರತ್ಯಕ್ಷವಾಗಿ ಪಡೆದ ಜ್ಞಾನ ಹೆಚ್ಚು ಅನುಭವಗಮ್ಯವೂ ಮತ್ತು ವಿಶ್ವಾಸಪೂರ್ಣವೂ ಆಗಿರುತ್ತದೆ.

ವಚನಕಾರರು ಕಾಯಕದ ಪರಿಭಾಷೆಯ ಮೂಲಕ ಅವರ ಜ್ಞಾನದ ದೃಷ್ಟಿಧೋರಣೆಗಳನ್ನು ಅಭಿವ್ಯಕ್ತಿಸಿದ್ದಾರೆ. ಅವರಿಗೆ ಕಾಯಕವೆಂದರೆ ಬದುಕು, ಬದುಕು ಎಂದರೆ ಕಾಯಕ. ಶರಣರು ನುಡಿದು ಸೂತಕಿಗಳಲ್ಲ, ನೆಡೆದು ಪಾತಕಿಗಳಲ್ಲ. ಅಂತರಂಗ-ಬಹಿರಂಗ ಆತ್ಮಸಂಗದ ಅನುಸಂಧಾನಿಗಳು. ಅಂತರಂಗ ಬಹಿರಂಗದ ಹೊಂದಾಣಿಕೆ ಹಾಗೂ ಮೀರುವಿಕೆಯ ನೆಲೆಗಳೇ ಅವರಲ್ಲಿ ಅರಿವಿನ ಸಂಗತಿಗಳಾಗಿವೆ.

'ಕ್ರಿಯೆ ಮರೆದಲ್ಲಿ ಅರಿವು ಹೀನವಾಗಿಪ್ಪುದು......' ಎನ್ನುವ ಶರಣರ ಮಾತು, ಕ್ರಿಯೆ ಮತ್ತು ಅರಿವು ಅಂದರೆ ಶ್ರಮ ಮತ್ತು ಜ್ಞಾನ. ಇವು ಒಂದಕ್ಕೊಂದು ಹೊಂದಿಕೊಂಡು ನೆಡೆದಾಗ ಅದು ಪೂರ್ಣ ಬದುಕಿಗೆ ಕಾರಣವಾಗುತ್ತದೆ. ಕ್ರಿಯೆಯನ್ನು ಮರೆತು ಅರಿವು ಎಂದರೆ ಶ್ರಮವನ್ನು ಗೌರವಿಸದ, ಶ್ರಮದೊಳಗೆ ಒಂದಾಗದ ಜ್ಞಾನ..... ಅದು ಹೀನವಾಗುವಂಥದ್ದು. 'ಅಂತರಂಗದಲ್ಲಿ ಅರಿವಾದೊಡೇನೋ ಬಹಿರಂಗದಲ್ಲಿ ಕ್ರೀ ಇಲ್ಲದನ್ನಕ್ಕ'. 'ಅಂತರಂಗದ ಅರಿವು ಬಹಿರಂಗದ ಕ್ರಿಯೆ ಕೂಡಲ ಸಂಗಯ್ಯನಲ್ಲಿ ಸಂಗಮವಾದುದು. ಸರ್ವೇಂದ್ರಿಯ ಕ್ರಿಯೆಯೇ ಜ್ಞಾನ. ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವುದು, ಕ್ರಿಯೆ ಎಂದರೆ ತಿಳಿಯುವಂತೆ ಮಾಡುವುದು.

'ಅರಿತು ಅರಿತವನಾಗು ಅರಿಯದಿದ್ದವನಾಗು
ಕೊಟ್ಟು ಕೊಟ್ಟವನಾಗು ಕೊಡದೆ ಇದ್ದವನಾಗು'

ಇಲ್ಲಿ ಅರಿವು ಹೇಗಿರಬೇಕು. ಅರಿತವನು ಹೇಗಿರಬೇಕು ಎಂಬುವುದನ್ನು ಕುರಿತು ಹೇಳಲಾಗಿದೆ. ಅರಿಯಬೇಕು ಅರಿತ ಮೇಲೆ ಅರಿಯದವನಂತಿರಬೇಕು. ಅಂದರೆ ಅರಿವು ಅಹಂಕಾರವಾಗಬಾರದು. ಅರಿವು ಅನ್ನವಾಗಬೇಕು. ವ್ಯಕ್ತಿತ್ವವನ್ನು ಬೆಳಗಿಸುವ ಜೀವದ್ರವ್ಯವಾಗಬೇಕು. ಈ ವಿಕಾಸಗತಿ ಅರಿವು ಪರಂಪರೆಯಾಗುವ ಪ್ರಕ್ರಿಯಾಸ್ವರೂಪದ್ದು.

೧೬ನೇ ಶತಮಾನವನ್ನು ಕನ್ನಡ ನಾಡಿನ ಚರಿತ್ರೆಯಲ್ಲಿ ಅನುಭಾವ ಸಾಹಿತ್ಯದ ಎರಡನೇ ಘಟ್ಟ ಎನ್ನಬಹುದು. ೧೫-೧೬ನೇ ಶತಮಾನ ವಿಜಯನಗರ ಸಾಮ್ರಾಜ್ಯದ ಸಮೃದ್ಧಿಯ ಕಾಲದಲ್ಲಿ ಭಕ್ತಿಯ ಮೂಲಕ ವೈರಾಗ್ಯವನ್ನು, ವಿರಕ್ತಿಯನ್ನು ಭೋಧಿಸುವ ದಾಸಪಂಥ ಕಾಣಿಸಿಕೊಂಡಿತು. ಸಾಮ್ರಾಜ್ಯದ ಈ ಏರಿನಲ್ಲಿ ಭೋಗಾಸಕ್ತ, ಸುಖಲೋಲುಪ್ತರಾದ ಜನತೆಯ ಅಂಧಃಪತನದ ಅರಿವು ವಿಚಾರವಂತರ ಹೊಸ ಎಚ್ಚರಿಕೆಗೆ ಕಾರಣವಾಗಿರಬೇಕು. ಈ ಎಚ್ಚರ ದಾಸರ ಹಾಡುಗಳಲ್ಲಿ ವ್ಯಕ್ತವಾಗುತ್ತದೆ.

'ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ' ಎಂದರು ದಾಸರು. ಮನುಷ್ಯ ಜನ್ಮ ಅಮೂಲ್ಯ. ಇದು ಪ್ರಾಣಿ ಜೀವನಕ್ಕಿಂತ ಭಿನ್ನವಾದ ಸಂಸ್ಕೃತಿ, ಬದುಕಿನ ಸುಖದುಃಖಗಳಿಗೆ ತೀವ್ರವಾಗಿ ಸಂವೇದಿಸಬಲ್ಲ ಮನಸ್ಸು, ಭಾವನೆಗಳಿಗೆ ಸ್ಪಂದಿಸುವ ಹೃದಯ, ನುಡಿದೊಡನೆಯೇ ಮಾಣಿಕ್ಯದ ದೀಪ್ತಿಯಾಗಬಲ್ಲ ಮಾತು, ಆತ್ಮೀಯತೆಯ ಗಾಳಿ ಗಂಧವನ್ನು ಸುತ್ತಲೂ ಹರಡಿ ಬದುಕನ್ನು ಹಗುರ ಮಾಡಬಲ್ಲ ನಗು, ಸಂಗೀತ, ಸಾಹಿತ್ಯ, ಕಲೆಯನ್ನು ಆಸ್ವಾದಿಸಿ ಆನಂದಿಸಬಲ್ಲ ಅವಕಾಶ ಮಾನವ ಜನ್ಮಕ್ಕೆ ಇದೆ.

ಹರಿದಾಸರು ತಮ್ಮ ಕೀರ್ತನೆಗಳ ಮೂಲಕ ಭಕ್ತಿಯ ಪರಿಕಲ್ಪನೆಯನ್ನು ಕುರುಡು ನಂಬಿಕೆಯ, ಮೌಢ್ಯದ ಬಿಗಿ ಮುಷ್ಟಿಯಿಂದ ಬಿಡಿಸಿದರು. ಅವರ ಕೀರ್ತನೆಗಳು ಜನರ ದಿನದಿನದ ಅನುಭವಗಳಿಗೆ ನಾಲಿಗೆಯಾದವು. ಆಧ್ಯಾತ್ಮ ವಿದ್ಯೆಯ ಸಂಪರ್ಕದಿಂದ ವಂಚಿತರಾಗಿದ್ದ ಜನರನ್ನು ಅವು ಪ್ರಭಾವಿಸಿದವು. ನಿತ್ಯ ಬದುಕಿನಲ್ಲಿ ಸಜ್ಜನಿಕೆಯನ್ನು, ಸಾತ್ವಿಕತೆಯನ್ನು, ಸಭ್ಯತೆಯನ್ನು ಸಮಾಧಾನವನ್ನು ಉದ್ದೀಪಿಸುವ ಮೂಲಕ ಹೊಸದೊಂದು ಸುಸಂಸ್ಕೃತ ಸಮಾಜದ ನಿರ್ಮಾಣದಲ್ಲಿ ಕ್ರಿಯಾತ್ಮಕವಾಗಿ ದಾಸರ ಕೀರ್ತನೆಗಳು ತೊಡಗಿಸಿಕೊಂಡಿವೆ.

ಸಮಾಜ ಶಾಂತಿಯುತವಾಗಿ ಸುವ್ಯವಸ್ಥಿವಾಗಿರಬೇಕಾಗಿದ್ದರೆ, ಧರ್ಮ, ನೀತಿ, ನಿಯಮ ದೈವಪ್ರಜ್ಞೆ ಅಗತ್ಯವೆಂದು ಹರಿದಾಸರು ನಂಬಿದ್ದರು. ಅವರ ದೃಷ್ಟಿಯಲ್ಲಿ ನೀತಿ, ನಡತೆ, ಶೀಲ, ಸದ್ಗುಣಗಳೇ ಸಮಾಜದ ಬದುಕಿನ ಪೋಷಕ ದ್ರವ್ಯಗಳು. ಹಾಗೂ ಸತ್ಯ, ಅಹಿಂಸೆ, ವಿಶ್ವಾಸ, ತ್ಯಾಗ, ಉಪಕಾರ ಬುದ್ಧಿ, ಸಹನೆ ಪರಸ್ಪರ ಗೌರವ ಭಾವನೆ ಈ ಮೌಲ್ಯಗಳೇ ಉತ್ತಮ ಸಮಾಜದ ಬುನಾದಿ. 'ತಲ್ಲಣಿಸದಿರು ಕಂಡ್ಯ ತಾಳು ಮನವೇ' ಎಂದು ಪ್ರೀತಿಯ ಸಾಂತ್ವನ ನೀಡುತ್ತಲೇ ತಾಳುವಿಕೆಗಿಂತ ತಪವೂ ಇನ್ನಿಲ್ಲ ಎಂದು ವಿವೇಕದ ಮಾರ್ಗವನ್ನು ತೋರಿದರು. 'ಸತ್ಯವಂತರ ಸಂಘವಿರಲು ತೀರ್ಥವೇತಕೆ' ಎಂದು ಹೇಳಿದ ಅವರು ಉತ್ತಮ ಜ್ಞಾನ ವ್ಯವಸ್ಥೆಯ ನಿರ್ಮಾಣಕ್ಕೆ ಪ್ರೇರಕ ಶಕ್ತಿಯಾದರು.

'ಜಪವ ಮಾಡಿದರೇನು, ತಪವ ಮಾಡಿದರೇನು ಮನಶುದ್ಧಿ ಇಲ್ಲದನಕ್ಕ', 'ಓದುವುದು ವೇದ ಹಾಕುವುದು ಗಾಳ', 'ಮಂಡೆ ಬೋಳಾದರೇನು ಮನಶುದ್ಧಿಯಿಲ್ಲವೊ', 'ಚಿತ್ತಶುದ್ಧಿ ಇಲ್ಲದವ ಅವ ಜ್ಞಾನಿಯೇ', 'ತೀರ್ಥವನ್ನು ಪಿಡಿದವರೆಲ್ಲ ತಿರುನಾಮಧಾರಿಗಳೇ'– ಕೇವಲ ಅರ್ಥವರಿಯದ ಆಚರಣೆಗೆ, ತೋರಿಕೆಗೆ ಬೆಲೆಕೊಡುವ ಡಾಂಬಿಕರನ್ನು ನೋಡಿ 'ನಗೆಯೂ ಬರುತಿದೆ ಎನಗೆ ನಗೆಯು ಬರುತಿದೆ, ಜಗದೊಳಿರುವ ಮನುಜರೆಲ್ಲ ಹಗರಣವ ಮಾಡುವುದು ಕಂಡು' ಎಂದು ವಿಡಂಬಿಸಿದ್ದಾರೆ.

ಹರಿದಾಸ ಸಾಹಿತ್ಯ ಜನಸಾಮಾನ್ಯರ ಭಾವನೆಗಳನ್ನು, ಸ್ವಾಭಾವಗಳನ್ನು, ಸಂಬಂಧ ಅನುಬಂಧವನ್ನು ಸೂಕ್ಷ್ಮವಾಗಿ ಗ್ರಹಿಸಿ ಅನಾವರಣಗೊಳಿಸುವುದರಿಂದ ಓದುಗರಲ್ಲಿ, ಹಾಡುವವರಲ್ಲಿ ಮತ್ತು ಕೇಳುವವರಲ್ಲಿ ಸಮಾನ ಭಾವ ತರಂಗಗಳೇಳುತ್ತವೆ.

'ಆಚಾರವಿಲ್ಲದ ನಾಲಿಗೆ ನಿನ್ನ
ನೀಚ ಬುದ್ಧಿಯ ಬಿಡು ನಾಲಿಗೆ
ವಿಚಾರವಿಲ್ಲದೆ ಪರರ ದೂಷಿಸುವುದಕ್ಕೆ
ಚಾಚಿಕೊಂಡಿರುವಂಥ ನಾಲಿಗೆ'
'ಹೆತ್ತ ತಾಯಿ ತಂದೆಗಳ ಚಿತ್ತವನೋಯಿಸಿ
ನಿತ್ಯದಾನವ ಮಾಡಿ ಫಲವೇನು'

ಇಂತಹ ಕೀರ್ತನೆಗಳನ್ನು ಮತ್ತೆ ಮತ್ತೆ ಕೇಳಿದಾಗ ನಮ್ಮೊಳಗನ್ನು ನಾವೇ ವಿಮರ್ಶಿಸಿ ಕೊಳ್ಳುವಂತಾಗುತ್ತದೆ. ಬುದ್ಧಿ, ಮನಸ್ಸುಗಳನ್ನು ಸರಿದಾರಿಗೆ ತರುವ ಪ್ರಯತ್ನದಲ್ಲಿ ತೊಡಗುತ್ತೇವೆ. ಹರಿದಾಸರು ಹಿರಿಯರ ಸ್ಥಾನದಲ್ಲಿ ನಿಂತು ತಿದ್ದಿ–ತೀಡಿ, ಬುದ್ಧಿ ಹೇಳುವ, ಆ ಮೂಲಕ ಸಮಾಜವನ್ನು ಸರಿದಾರಿಗೆ ತರುವ ಪ್ರಯತ್ನ ಮಾಡಿದ್ದಾರೆ.

ಹರಿದಾಸರು ಪ್ರಸ್ತಾಪಿಸಿರುವ ಸಾಮಾಜಿಕ ಪಿಡುಗುಗಳಲ್ಲಿ ಕುಲ, ಜಾತಿ, ಮತಗಳನ್ನು ಕುರಿತಂಥವು ಹೆಚ್ಚು ಕಡಿಮೆ ಐದುನೂರು ವರ್ಷಗಳ ಬಳಿಕವೂ, ಇಂದೂ ಅದೇ ಸ್ಥಿತಿಯಲ್ಲೇ ಇವೆ. ಈ

೨೧ನೆಯ ಶತಮಾನದಲ್ಲೂ ನಮಗೆ ಅರಗಿಸಿಕೊಳ್ಳಲು, ಮೀರಲು ಸಾಧ್ಯವಾಗಿಲ್ಲ. ಈ ನಿಟ್ಟಿನಲ್ಲಿ ಪ್ರಯತ್ನಗಳು ಮಾತ್ರ ಇನ್ನೂ ನಡೆಯುತ್ತಲೇ ಇದೆ.

'ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡ ಜಗಳವೇ ಲೇಸು'

ಅಜ್ಞಾನಿಗಳು, ಮೂಢರು, ಅವಿವೇಕಿಗಳ ಸಂಗ ಮಾಡಿದರೆ ಅಪಮಾನ ನಿಂದೆಗಳೂ ತಪ್ಪಿದ್ದಲ್ಲ. ಬೆಲ್ಲದಂತಹ ಮಾತುಗಳನ್ನಾಡಿ ಬೆನ್ನಿಗೆ ಚೂರಿ ಹಾಕುವ ಹಿತ ಶತ್ರುಗಳು. ಅಲ್ಲದೇ ಕಾಲಹರಣವೂ ಆಗುತ್ತದೆ. ಸುಜ್ಞಾನಿಗಳ ಕೂಡ ಜಗಳವಾಡಿದರೂ ಒಳ್ಳೆಯ ಉಪದೇಶ ಜೀವನದ ದಾರಿಗೆ ಬೆಳಕು ತೋರುವ ಮೌಲ್ಯಗಳನ್ನು ಅವರಿಂದ ಪಡೆದುಕೊಳ್ಳಬಹುದು. ಇದಕ್ಕೆ ಸಮನಾಗಿ 'ಸಗಣಿಯ ಜೊತೆ ಮುದ್ದಾಡುವುದಕ್ಕಿಂತ, ಗಂಧದ ಜೊತೆ ಜಗಳ ಕಾಯುವುದೇ ಲೇಸು'– ಎನ್ನುವ ಗಾದೆ ಬಳಸಬಹುದು.

ದಾಸರ ಅನೇಕ ರಚನೆಗಳು ಅಂದಿನ ಸಾಮಾಜಿಕ ವ್ಯವಸ್ಥೆಯನ್ನು ಕಟ್ಟಿಕೊಡುತ್ತವೆ. ಆ ಸಮಸ್ಯೆಗಳಿಗೆ ಮುಖಾಮುಖಿಯಾಗಿ ನಿಂತು ದಾಸರು ಪ್ರತಿಕ್ರಿಯಿಸುವ, ಪ್ರತಿಭಟಿಸುವ ನೆಲೆ, ಸ್ಥಾಪಿಸುವ ಮೌಲ್ಯಗಳು, ತಾತ್ವಿಕತೆಗಳು ಇಂದಿಗೂ ಪ್ರಸ್ತುತವಾಗಿರುವಲ್ಲಿಯೇ ದಾಸಸಾಹಿತ್ಯದ ಮಹತ್ವವಿದೆ.

ಅನುಭಾವ ಸಾಹಿತ್ಯದ ಮೂರನೇ ಘಟ್ಟ ತತ್ವಪದ ಸಾಹಿತ್ಯ. ತತ್ವಪದಗಳ ಮೂಲ ೧೨ನೇ ಶತಮಾನದ ವಚನಕಾರರ ಸ್ವರವಚನಗಳು ಎಂದು ಹೇಳಬಹುದು. ವಚನಕಾರರದ್ದು ಭಕ್ತಿ ಮಾರ್ಗವಾದರೆ, ತತ್ವಪದಕಾರರದು ಜ್ಞಾನಮಾರ್ಗ. ತತ್ವಪದಗಳಿಗೆ ಸ್ವರವಚನಗಳಿಗಿಂತ ಭಿನ್ನವಾದ ಹೊಸ ಜೀವ ನೀಡಿದವರು ನಿಜಗುಣ ಶಿವಯೋಗಿಗಳು. ಅವರ ಬಳಿಕ ಈ ಪರಂಪರೆ ಬತ್ತಿ ಹೋಯಿತೇನೋ ಅನಿಸಿತು. ಆದರೆ, ೧೭ನೇ ಶತಮಾನದಲ್ಲಿ ಇದು ಮತ್ತೆ ಪುಟಿಯಿತು. ಅಂದಿನಿಂದ ಇಂದಿನವರೆಗೆ ಜೀವಂತವಾಗಿದೆ.

ತತ್ವಪದಕಾರರು ವೇದ, ಶಾಸ್ತ್ರ, ಪುರಾಣಗಳನ್ನು ಓದಿ ಜ್ಞಾನ ಸಂಪಾದನೆ ಮಾಡಿದವರಲ್ಲ. ಬದಲಾಗಿ ಸ್ವಾನುಭವ ಸಾಧನೆಗಳಿಂದಲೇ ಕಲಿಯಲು ಹಾತೊರೆದವರು. ಅಕ್ಷರ ಮತ್ತು ವಿದ್ಯೆಗಳನ್ನು ಮಾರಾಟದ ವಸ್ತುವನ್ನಾಗಿಸಿದ ಪ್ರವೃತ್ತಿಗಳ ವಿರುದ್ಧ ಸಿಡಿದೆದ್ದವರು. ಬೌದ್ಧಿಕ ಕ್ರಿಯೆಗಿಂತ ಅಂತರಂಗದ ನಿಜಸುಖಕ್ಕೆ ಮಿಡಿದವರು.

'ಶಾಸ್ತ್ರ, ಪುರಾಣ ವೇದ ಆಗಮ
ಮಾಡಿ ಇಟ್ಟಾರೋ ಮುಂದೆ ಓದುದಕ
ನಿಲುಕದ ಮಾತಿಗೆ ನಿಗರ್‍ಯಾಡಿ ಸತ್ತಾರೋ'

ಎನ್ನುವ ಮಡಿವಾಳಪ್ಪನ ಮಾತುಗಳಂತೂ ಲಿಖಿತ ರೂಪದ ಜ್ಞಾನದ ಶೋಷಿತ ಮತ್ತು ನಿರ್ವೀರ್ಯ ನೆಲೆಗಳನ್ನು ನಿಷ್ಠುರವಾಗಿ ಖಂಡಿಸುತ್ತವೆ. ' ಬಾಯಿಲೊಂದು ಆಡ್ತೀರಿ, ಮನಸಿನೊಳಗೊಂದು ಮಾಡ್ತೀರಿ ಬರದಿಟ್ಟಿದ್ದು ಓದಿಕೊಂಡು ಭ್ರಾಂತಿಗೆಟ್ಟು ಹೋಗುತ್ತೀರಿ'– ಈ ಮಾತು ಆಧುನಿಕ ಮನುಷ್ಯನ ಅಕ್ಷರಿಕ ವಿದ್ಯೆ ಮತ್ತು ನಡವಳಿಕೆಗಳ ಮಧ್ಯ ಇರುವ ವಿಪರ್ಯಾಸವನ್ನು ಸೂಚಿಸುತ್ತದೆ.

ತತ್ವಪದಕಾರರು ಸಮಾಜದ ಭೌತಿಕ ಬದಲಾವಣೆಗಿಂತ ವ್ಯಕ್ತಿಯ ಆತ್ಮೋನ್ನತಿಯನ್ನು ಬಯಸಿದವರು. ಅದಕ್ಕಾಗಿ ಗುರುವಿನ ನೆರವನ್ನು ಉತ್ಕಟವಾಗಿ ಬಯಸಿದವರು. ' ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎನ್ನುವ ಮಾತು ಮನುಷ್ಯನ ನೈತಿಕತೆಯ ಪ್ರಶ್ನೆಯಾಗಿದೆ. ಗುರುವಿನೊಂದಿಗೆ ಸಲಿಗೆ, ಚರ್ಚೆ, ಮೌನ ಸಂಧಾನ, ತಲ್ಲಣಗಳು ತನ್ನತನದ ಹುಡುಕಾಟವೇ ಆಗಿತ್ತು. ಇವರಿಗೆ ಗುರುವಿನ ಭೌತಿಕ ಅಸ್ತಿತ್ವಕ್ಕಿಂತ, ಆಂತರಿಕ ಅಸ್ತಿತ್ವ ಮುಖ್ಯವಾಗಿತ್ತು.

'ವೇದ ಶಾಸ್ತ್ರಗಳ ಅನುದಿನ ಓದಿ
ಬಾಯಿ ಮಾಡತೀದಿ ಕಲಾಕಲಾ
ಗಾದೆಯ ಮಾತುಗಳಾಡುತ ಅನುದಿನ
ಏನು ಕಲಿತಿಯೋ ಛಲಾ ಛಲಾ'

ಅಕ್ಷರ ಬಲ್ಲ ಪಂಡಿತರು ಮತ್ತು ಅರಿವಿನ ಮೂಲದ ಅನುಭಾವಿಗಳ ನಡುವಿನ ತಿಕ್ಕಾಟ ಸಣ್ಣ ಪ್ರಮಾಣದ್ದಲ್ಲ. ಅಕ್ಷರಸ್ಥ ಜ್ಞಾನ ಅಮಾನವೀಯತೆಗೆ ಕಾರಣವಾದರೆ, ಅರಿವಿನಿಂದ ಪಡೆದ ಜ್ಞಾನ ಮಾನವೀಯತೆಗೆ ಕಾರಣವಾಗಿರುತ್ತದೆ. ವಸ್ತುರೂಪದ ಜ್ಞಾನಕ್ಕಿಂತ ಆತ್ಮಸಾಕ್ಷಾತ್ಕಾರ ಸ್ವರೂಪಿ, ನಿಜ ವಸ್ತುರೂಪಿ ಜ್ಞಾನದ ಮಹತ್ವವನ್ನು ಹೇಳುತ್ತಾನೆ. ಜ್ಞಾನವೂ ಬೆಳಸಿದಷ್ಟು ವೃದ್ಧಿಯಾಗುವಂಥದ್ದು, ಮುಗಿದು ಹೋಗುವಂತದ್ದಲ್ಲ. ಬದುಕಿನಿಂದ ಪಡೆದ ಜ್ಞಾನಕ್ಕಿಂತ ಓದಿನಿಂದ ಪಡೆದ ಜ್ಞಾನಕ್ಕೆ ಹೆಚ್ಚು ಮನ್ನಣೆಯಿರುವ ಇಂದಿನ ಸಂದರ್ಭದಲ್ಲಿ ಇಂಥ ಮಾತುಗಳು ಹೊಸ ಅಧ್ಯಯನಕ್ಕೆ ದಾರಿ ತೋರುತ್ತವೆ.

ಜ್ಞಾನವೊಂದು ಕೌಶಲ್ಯ ಇದ್ದಂತೆ ಅದೊಂದು 'ಒಳದನಿ' ಅಂದೊಂದು ಅಂತರ್ಜಲ. ನನ್ನ ನಾನರಿವ ಪರಿ. ಕೌಶಲ್ಯ ಸ್ವಾನುಭವ ಹಾಗೂ ಸಾಧನೆಗಳಿಂದ ಕಲಿಯುವಂತದ್ದು, ಅಕ್ಷರ ಬೌದ್ಧಿಕ ಕ್ರಿಯೆಯಾದರೆ, ಕೌಶಲ್ಯ ಅಂತರಂಗದ ಕ್ರಿಯೆ. ಕೌಶಲ್ಯ ಮತ್ತು ಬುದ್ಧಿ ಏಕೀಭವಿಸದ ಹೊರತು ಸೃಷ್ಟಿಶೀಲತೆ ಎನ್ನುವುದನ್ನು ಹುಟ್ಟಲು ಸಾಧ್ಯವಿಲ್ಲ.

ಪಾಶ್ಚಾತ್ಯ ಸಂಸ್ಕೃತಿ ನಮ್ಮನ್ನು ಮೋಹಿಸುವ ಮುಂಚೆ ನಮ್ಮ ದೇಶಿಯ ಸಂಸ್ಕೃತಿಯನ್ನು ರೂಪಿಸಿದ್ದ ಅಂಶಗಳನ್ನು ಈ ತತ್ವಪದಗಳಿಂದ ಗುರುತಿಸಬಹುದಾಗಿದೆ. ಅಂತೆಯೇ ಪಶ್ಚಿಮದ ಸಂಸ್ಕೃತಿಯ ದಾಳಿಗೆ ಸಿಕ್ಕು ತತ್ತರಿಸುತ್ತಿರುವ ಇಂದಿನ ನಮಗೆ ಅದನ್ನು ಪರಿಣಾಮಕಾರಿಯಾಗಿ ಎದುರಿಸುವ, ಅದರೊಂದಿಗೆ ಅರ್ಥಪೂರ್ಣ ಒಡಂಬಡಿಕೆ ಮಾಡಿಕೊಳ್ಳುವ ತಂತ್ರೋಪಾಯಗಳು ಇಲ್ಲಿ ಸಿಗಬಹುದಾಗಿದೆ.

ಸಾಮಾಜಿಕ ಅರಾಜಕತೆ, ರಾಜಕೀಯ ಅಸ್ಥಿರತೆ, ಪಂಡಿತ-ಪಾಮರ ಎನ್ನುವ ಬೇಧಕಲ್ಪನೆಗಳು ಜನರ ನೆಮ್ಮದಿಯನ್ನು ಹಾಳು ಮಾಡಿದವು. ಸಾಮಾಜಿಕ ಸ್ವಾಸ್ಥ್ಯ ಕನಸಿನ ಮಾತಾಗಿತ್ತು. ದೈಹಿಕವಾಗಿ ಹಾಗೂ ಮಾನಸಿಕವಾಗಿ ಜನ ಕುಸಿದು ಹೋಗಿದ್ದರು. ಅಂಥ ಹೊತ್ತಲ್ಲಿ ತತ್ವಪದಕಾರರು ತಮ್ಮ ಹಾಡುಗಳ ಮೂಲಕ ದುಗುಡಗೊಂಡ ಜನಸಮುದಾಯಗಳಲ್ಲಿ ಸಂತಸ ಮೂಡಿಸಿದರು. ಅಂಥ ಸಾಮಾಜಿಕ ಸಂದರ್ಭದಲ್ಲಿ ರೂಪಗೊಂಡಿದ್ದ ಜನವಿರೋಧಿ ಜ್ಞಾನದ ಸಂಕಥನಗಳ ಒಡಲಲ್ಲಿ ತಮ್ಮ ಸಹಜ ಚಿಂತನೆಗಳ ಮೂಲಕ ತಳಮಳ ಹುಟ್ಟಿಸಿದರು. ಹೊಸಜ್ಞಾನ ಮಾರ್ಗದ ಸೃಷ್ಟಿಗೆ ಕಾರಣರಾದರು.

ಆದ್ದರಿಂದ ಈ ಅನುಭಾವಿಗಳ ಅನುಭವದ ಹಿನ್ನಲೆಯಲ್ಲಿ ಜ್ಞಾನದ ಸ್ವರೂಪ, ಜ್ಞಾನದ ನೆಲೆಗಳು ಮತ್ತು ಬಗೆಗಳನ್ನು ಕುರಿತು ಅಧ್ಯಯನ ಮಾಡುವುದು ನನ್ನ ಅಧ್ಯಯನದ ಮುಖ್ಯ ಉದ್ದೇಶಿತ ಪ್ರೇರಣೆಗಳಲ್ಲಿ ಒಂದಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಕ್ರಿ.ಶ. ೧೨-೧೮ನೇ ಶತಮಾನದ ನಡುಗನ್ನಡ ಸಾಹಿತ್ಯವು ವಿಶಾಲ ವ್ಯಾಪ್ತಿಯನ್ನು ಹೊಂದಿದೆ. ಈ ಕಾಲಘಟ್ಟದಲ್ಲಿ ವಚನಸಾಹಿತ್ಯ, ಹರಿದಾಸ ಸಾಹಿತ್ಯ, ತತ್ವಪದ ಸಾಹಿತ್ಯ ಬೆಳೆದು ಬಂದಿದೆ. ಈ ಕಾಲಘಟ್ಟದ ಜ್ಞಾನವನ್ನು ಕುರಿತಾದಂತಹ ಸ್ಥಿತ್ಯಂತರಗಳನ್ನು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ಚಾರಿತ್ರಿಕ ಪರಿಪ್ರೇಕ್ಷ್ಯದಲ್ಲಿಟ್ಟು, ಜ್ಞಾನದ ವಿವಿಧ ನೆಲೆಗಳನ್ನು ಗ್ರಹಿಸುವುದು, ಆ ಮೂಲಕ ಇಂದಿನ ಸಂದರ್ಭದ ಸವಾಲುಗಳನ್ನು ದಾಟುವ ಪ್ರಕ್ರಿಯೆಯಾಗಿ ಅರಿವನ್ನು ಹೇಗೆ ಬಳಸಿಕೊಳ್ಳಬಹುದು, ಮತ್ತು ಜಗತ್ತಿನ ಜಡತ್ವಕ್ಕೆ ಜ್ಞಾನವು ಹೇಗೆ ಕ್ರಿಯಾಶೀಲತೆಯನ್ನು ಬೆಳೆಸಬಲ್ಲದು ಎನ್ನುವ ಹುಡುಕಾಟ ನನ್ನ ಅಧ್ಯಯನದ ವ್ಯಾಪ್ತಿಯಾಗಿದೆ. ಅದಕ್ಕಾಗಿ ಕನ್ನಡ ಅನುಭಾವ ಸಾಹಿತ್ಯದ ಪ್ರಧಾನ ಧಾರೆಗಳಾದ ವಚನ, ದಾಸ ಹಾಗೂ ತತ್ವಪದಕಾರರ ಅಭಿವ್ಯಕ್ತಿಯ ನೆಲೆಗಳನ್ನು ಈ ಅಧ್ಯಯನವು ತನ್ನ ವ್ಯಾಪ್ತಿಯನ್ನಾಗಿಸಿಕೊಂಡಿದೆ. ಅಂಶಿಕವಾಗಿ ಈ ಕಾಲದಲ್ಲಿ ಕಾಣುವ ಇತರೆ ಜ್ಞಾನದ ಮೀಮಾಂಸಾ ಪ್ರಕ್ರಿಯೆಗಳನ್ನು ಗಮನಿಸಿದ್ದೇನೆ. ಕಾರಣ ಸಮಕಾಲೀನ ಜ್ಞಾನ ಮೀಮಾಂಸೆಗಳ ಅರಿವಿಲ್ಲದ ಹೊರತು, ಉದ್ದೇಶಿತ ಜ್ಞಾನದ ನೆಲೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಅಂತಹ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

### ೧.೩. ಅಧ್ಯಯನದ ಸ್ವರೂಪ ಹಾಗೂ ವಿಧಾನ

೧. ಕನ್ನಡ ಅನುಭಾವ ಸಾಹಿತ್ಯದಲ್ಲಿ ಜ್ಞಾನದ ಸ್ವರೂಪ, ಜ್ಞಾನ ಪ್ರಸಾರಗೊಂಡ ಬಗೆಗಳನ್ನು ಗುರುತಿಸುವುದಾಗಿದೆ. ಜ್ಞಾನ ಮತ್ತು ಕ್ರಿಯೆಗಳು ಮನುಷ್ಯನ ಹುಸಿ ಮುಖವಾಡವನ್ನು ಕಳಚಿ ವ್ಯಕ್ತಿತ್ವ ವಿಕಸನಕ್ಕೆ ತೋರುವ ಮಾರ್ಗಗಳು ಯಾವವು? ಅನುಭಾವಿಗಳು ಕಂಡುಕೊಂಡು ಜ್ಞಾನ ಮಾರ್ಗಗಳ ಕುರಿತು ಅಧ್ಯಯನ ಮಾಡಿದ್ದೇನೆ.

೨. ಅಕ್ಕಮಹಾದೇವಿ, ಕಾಳವ್ವೆ, ನೀಲಮ್ಮನಂತಹ ಅನುಭಾವಿ ಮಹಿಳೆಯರು ಪುರುಷ ಕೇಂದ್ರಿತ ನಿಲುವುಗಳನ್ನು ಖಂಡಿಸುತ್ತಾ, ಅರಿವಿನ ಮೂಲಕ ವ್ಯಕ್ತಿತ್ವ ವಿಕಸನ ಮಾಡಿಕೊಳ್ಳುವ ಬಗೆಗಳನ್ನು ಶೋಧಿಸಲಾಗಿದೆ. ಪುರುಷ ನಿರ್ಮಿತ ಜ್ಞಾನದ ವ್ಯಾಖ್ಯಾನಗಳನ್ನು ಪಕ್ಕಕ್ಕಿರಿಸಿ, ಲೋಕದ ಅರಿವಿನ ಹುಡುಕಾಟದಲ್ಲಿ ಹೆಣ್ಣನ್ನು ವ್ಯಷ್ಟಿ ಸಮಷ್ಟಿಯ ಭಾಗವಾಗಿ ನೋಡುವುದರಿಂದ, ಜ್ಞಾನದ ಹುಡುಕಾಟ ಮತ್ತು ಮಾರ್ಗಗಳು ಹೆಚ್ಚು ಅರ್ಥ ಪಡೆದುಕೊಳ್ಳುತ್ತವೆ.

೩. ಅನಕ್ಷರಸ್ಥ ಸಮಾಜವು ಆತ್ಮವಿಶ್ವಾಸಿಯಾಗಿ, ಜ್ಞಾನಿಯಾಗಿ, ತನ್ನ ಸಂಕಟ ಮತ್ತು ಅಭದ್ರ ಸ್ಥಿತಿಯೊಳಗಿನಿಂದಲೇ ಪರ್ಯಾಯ ಜ್ಞಾನದ ನೆಲೆಗಳನ್ನು ಶೋಧಿಸಿಕೊಟ್ಟಿದೆ. ಈ ಅಜ್ಞಾತವಾಗಿ ಉಳಿದ ಜ್ಞಾನದ ನೆಲೆಗಳನ್ನು ಹುಡುಕುವುದು. ಹಾಗೂ ಅದನ್ನು ಪ್ರಾಯೋಗಿಕವಾಗಿ ಆಚರಣೆಗೆ ತರಬೇಕಾದುದು ಪ್ರಸ್ತುತದ ಅಗತ್ಯವಾಗಿದೆ.

೪. ದೇಶಿ ಸಂಸ್ಕೃತಿಯ ಮೇಲೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಆಧುನಿಕ ಶಿಕ್ಷಣವು ಅಕ್ಷರ ಜ್ಞಾನದ ಅಹಂಕಾರವನ್ನು ಬೆಳೆಸಿದೆ. ಇದರಿಂದ ಅಕ್ಷರಜ್ಞಾನ ಮತ್ತು ಅರಿವಿನ ಜ್ಞಾನದ ನಡುವಿನ ಸಂಘರ್ಷ ಮತ್ತು ತಿಕ್ಕಾಟಗಳನ್ನು ಹಾಗೂ ಉತ್ಪಾದನಾ ರಹಿತವಾದ ಬದುಕಿನ ನಿರ್ಭಾವುಕ ನೆಲೆಗಳನ್ನು ಕುರಿತು ವಿಸ್ತಾರವಾಗಿ ಅಧ್ಯಯನ ಮಾಡಿರುವುದು ಈ ಅಧ್ಯಯನದ ಮುಖ್ಯ ಕಾಳಜಿಯಾಗಿದೆ.

೫. ಈ ಅಧ್ಯಯನ ಬಹುಮುಖ್ಯವಾಗಿ ವಿಶ್ಲೇಷಣಾತ್ಮಕ ನೆಲೆಯದ್ದಾಗಿದೆ. ಮೌಖಿಕ ಹಾಗೂ ಲಿಖಿತ ಮಾಹಿತಿಗಳ ಸಂಗ್ರಹ, ಆಯ್ದ ಸಮಕಾಲೀನ ಶರಣ-ಸಂತ, ತತ್ವಪದಕಾರರ ಸಂದರ್ಶನ, ಕ್ಷೇತ್ರಕಾರ್ಯ, ದಾಖಲೀಕರಣದ ಅವಶ್ಯಕತೆಗಳೊಂದಿಗೆ ಜ್ಞಾನ ಮತ್ತು ಅರಿವಿನ ಪರಿಭಾಷೆಗಳು ಕಾಲದ ಏರಿಳಿತದಲ್ಲಿ ಪಡೆದುಕೊಂಡ ವಿವಿಧ ಅರ್ಥಗಳ ಶೋಧದ ನೆಲೆ ಇಲ್ಲಿ ಬಹುಮುಖ್ಯವಾಗಿದೆ.

**ಅಧ್ಯಾಯ – ಒಂದು:** ಅಧ್ಯಯನದ ಉದ್ದೇಶ, ಪ್ರೇರಣೆ, ವ್ಯಾಪ್ತಿ, ವಿಧಾನ, ಸ್ವರೂಪ

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನದ ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ – ಎರಡು:** ಕನ್ನಡ ಅನುಭಾವ ಸಾಹಿತ್ಯದ ಕುರಿತು ಇದುವರೆಗೂ ಬಂದಿರುವ ಕೃತಿಗಳು, ಲೇಖನಗಳು, ಪತ್ರಿಕಾ ಲೇಖನಗಳು, ಎಂ.ಫಿಲ್, ಪಿಎಚ್.ಡಿ. ಮಹಾಪ್ರಬಂಧಗಳ ಕುರಿತು ಸಮೀಕ್ಷೆ ಮಾಡಲಾಗಿದೆ. ಇಲ್ಲಿ ಬಹುಮುಖ್ಯವಾಗಿ ಅನುಭಾವಿ ಪಂಥಗಳಲ್ಲಿ ಜ್ಞಾನದ ಮೀಮಾಂಸೆಯ ಚಿಂತನೆಗಳು ಹಾಗೂ ಆತ್ಮಜ್ಞಾನದ ಸ್ವರೂಪವನ್ನು ಅರಿಯುವ ಪ್ರಯತ್ನವಿಲ್ಲದೆ ಮಾನವನ ಜ್ಞಾನವನ್ನು ತಾತ್ವಿಕ ತಳಹದಿಯ ಮೇಲೆ ಪರೀಕ್ಷಿಸುವ ಹಾಗೂ ತಾರ್ಕಿಕತೆ ಮತ್ತು ಅನುಭವ ಎರಡು ನೆಲೆಯಲ್ಲಿ ಜ್ಞಾನದ ಸಂಗತಿಗಳನ್ನು ಚರ್ಚೆ ಮಾಡಲಾಗಿದೆ.

**ಅಧ್ಯಾಯ – ಮೂರು:** ಜ್ಞಾನ ಮೀಮಾಂಸೆಯ ಪ್ರಾಚೀನ ನೆಲೆಗಳು

ಈ ಅಧ್ಯಾಯದಲ್ಲಿ ಜ್ಞಾನ ಮೀಮಾಂಸೆಯನ್ನು ಕುರಿತು ಭಾರತೀಯ ಹಾಗೂ ಕನ್ನಡ ಸಂಸ್ಕೃತಿಯಲ್ಲಿ ಬೌದ್ಧ, ಜೈನ, ವೈದಿಕ, ಅವಧೂತ, ನಾಥ, ಸಿದ್ಧ ಇತ್ಯಾದಿ ದರ್ಶನಗಳು ನಡೆಸಿದ ಚರ್ಚೆಗಳ ಹಿನ್ನಲೆಯಲ್ಲಿ ಒಂದು ಸಮಾಜದ ಮೂಲ ಘಟಕವೆನಿಸಿದ ಪ್ರತಿ ವ್ಯಕ್ತಿಯ ಆಂತರಿಕ ವಿಕಾಸದ ಮೂಲಕ, ಇಡೀ ಸಮೂಹದ ಬುದ್ಧಿಭಾವಗಳ ಸಮಾಧಾನ ಸ್ಥಿತಿಯ ಸ್ಥಾಪಕತ್ವಕ್ಕೆ ಪ್ರೇರಕವಾಗುವ ಈ ದರ್ಶನಗಳು ಒಂದು ಆದರ್ಶ ಬೆಳಕಿನ ಗುರಿಯನ್ನು ತಲುಪಲು, ಕಾಲಾನುಕ್ರಮದಲ್ಲಿ ನೂರಾರು ಮಾರ್ಗಗಳು, ಮಾಧ್ಯಮಗಳು ರೂಪಿತವಾಗಿರುವುದನ್ನು ಕಾಣಬಹುದು. ಇವುಗಳಲ್ಲಿ ಕೆಲವು ಆಯಾ ಮಾರ್ಗ ಪ್ರವರ್ತಕರ ದರ್ಶನದ ಬೆಳಕಿನಿಂದ ಹೊರಹೊಮ್ಮಿದುವಾದರೆ, ಮತ್ತೆ ಕೆಲವು ಆಯಾ ಕಾಲಸ್ಥಿತಿಯ ಅಗತ್ಯಗಳ ಒತ್ತಡದಿಂದ ನಿರ್ಮಾಣವಾದವು. ಕೆಲವು ಸಂದರ್ಭಗಳಲ್ಲಿ ಧರ್ಮಾಧಾರಿತ ಸಂಕೀರ್ಣ ಸಂಘರ್ಷಗಳಿಗೆ ಎಡೆಮಾಡಿಕೊಟ್ಟವು. ಅವಿದ್ಯೆಯ ಧ್ಯೋತಕವೆನ್ನುವಂತೆ ತೋರಿಬಂದವು. ಪೂರ್ವಗ್ರಹಪೀಡಿತರಾದೆ ಜಗತ್ತಿನ ಎಲ್ಲಾ ಶ್ರೇಷ್ಠ ಮನಸ್ಸುಗಳ ಮಿಡಿತಗಳನ್ನು,

ಧರ್ಮಗಳನ್ನು ಅಧ್ಯಯನ ಮಾಡಿದರೆ, ಎಲ್ಲಾ ಧರ್ಮಗಳು ಆತ್ಮಸಾಕ್ಷಾತ್ಕಾರಕ್ಕೆ ಅರಿವು, ಜ್ಞಾನವೇ ಪ್ರಧಾನ ಎಂದು ಸಾರುತ್ತವೆ. ಈ ಜ್ಞಾನದ ಸ್ವರೂಪ ಕ್ರಿ.ಶ. ೧೨-೧೮ನೇ ಶತಮಾನದ ಕನ್ನಡ ಅನುಭಾವ ಸಾಹಿತ್ಯದ ಮೇಲಾದ ಪ್ರಭಾವ, ಜ್ಞಾನ ಮೀಮಾಂಸೆಯ ಕುರಿತು ಬದಲಾದ ಹೊಳವುಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ.

**ಅಧ್ಯಾಯ – ನಾಲ್ಕು** : ವಚನ ಹಾಗೂ ಸ್ವರವಚನ ಸಾಹಿತ್ಯದಲ್ಲಿ ಜ್ಞಾನದ ಪರಿಕಲ್ಪನೆ

ಈ ಅಧ್ಯಾಯದಲ್ಲಿ ೧೨ನೇ ಶತಮಾನದ ವಚನಕಾರರು ಹಾಗೂ ಸ್ವರವಚನಕಾರರು ಸಾಮಾಜಿಕ, ಧಾರ್ಮಿಕ ಹಾಗೂ ಆಧ್ಯಾತ್ಮಿಕ ನೆಲೆಗಳ ಪರಿವರ್ತನೆಯ ಹರಿಕಾರರಾಗಿ, ಬತ್ತದ ಚೈತನ್ಯವಾಗಿ ಹೊಸ ಅಭಿವ್ಯಕ್ತಿ ಸಾಧ್ಯತೆಗಳನ್ನು ತಮ್ಮ ವಚನಗಳ ಮೂಲಕ ಪ್ರಕಟಿಸಿದ್ದಾರೆ. ಕಾಯಕ ಜೀವಿಗಳಾದ ಇವರು ಕಾಯ ಸಂಬಂಧದ ಲೌಕಿಕ ವಿವರಕ್ಕಿಂತ, ಕಾಯಕ ಸಂಬಂಧದ ಲೌಕಿಕ ವಿವರಗಳಲ್ಲಿ ಅರಿವಿನ ನೆಲೆಗಳನ್ನು ಗುರುತಿಸಿಕೊಂಡವರು. ಅರಿವೆಂಬುದೇ ಗುರು. 'ಕ್ರೀ ಇಲ್ಲದ ಅರಿವು ಹೀನವಪ್ಪುದು...' ಹೀಗಾಗಿ ಕ್ರಿಯೆ ಹಾಗೂ ಅರಿವು ಎರಡೂ ಒಂದು ಮಾಡಿ ಬದುಕನ್ನು ಕಟ್ಟಿಕೊಂಡರು. ಇವರು ಕಟ್ಟಿಕೊಂಡ ಈ ಬದುಕು ಕೇವಲ ಕ್ಷಣದ ಯೋಚನೆಯಲ್ಲಿ ಕಳೆದುಹೋಗುವ ಬದುಕಲ್ಲ. ಕ್ಷಣವನ್ನು ಗೆದ್ದಂತೆ ನಿತ್ಯವಾಗುವ ನಿರಂತರವಾಗುವ ನಡೆ. ವ್ಯಕ್ತಿ ಮಿತಿಯಲ್ಲಿ ಕುಬ್ಜವಾಗುವ ಅನುಭವ ಅಲ್ಲ. ಸಮಷ್ಠಿ ಹಿತದಲ್ಲಿ ವಿಸ್ತರಿಸಿಕೊಂಡ ಅನುಭಾವ. ಇದೇ ಶರಣರ ಆಧ್ಯಾತ್ಮ ಬದುಕಿನಲ್ಲಿ ಅರಳಿಕೊಂಡಿರುವ ಅರಿವಿನ ಬೆಡಗು. ಇಂತಹ ಭಿನ್ನವಾದ ಅರಿವಿನ ಧಾರೆಗಳಿಂದ ವ್ಯಕ್ತಿಯು ವ್ಯಕ್ತಿತ್ವದ ವಿಕಸನಕ್ಕೆ ಕಂಡುಕೊಂಡಿರುವ ಮಾರ್ಗಗಳನ್ನು ಹಾಗೂ ಅನುಭಾವಿ ಮಹಿಳೆಯರು ಪುರುಷಕೇಂದ್ರಿತ ನಿಲುವುಗಳನ್ನು ಖಂಡಿಸುತ್ತಾ ತಮ್ಮ ಅರಿವಿನ ಮೂಲಕ ಪ್ರತಿರೋಧವನ್ನು ಒಡ್ಡುವಾಗ ಇರಬೇಕಾದ ಸ್ಪಷ್ಟತೆ ಮತ್ತು ನೈತಿಕ ಎದೆಗಾರಿಕೆಯ ನಿಲುವುಗಳ ಮೂಲಕ ತಿಳಿವಳಿಕೆಯ ವಿವಿಧ ಮಾದರಿಗಳನ್ನು ಕಟ್ಟಿಕೊಡಲಾಗಿದೆ.

**ಅಧ್ಯಾಯ – ಐದು** : ಕೀರ್ತನೆ ಸುಳಾದಿ ಉಗಾಭೋಗಗಳಲ್ಲಿ ಜ್ಞಾನದ ಪರಿಕಲ್ಪನೆ

ಈ ಅಧ್ಯಾಯದಲ್ಲಿ ಭಕ್ತಿ ಪ್ರಧಾನವಾದ ದಾಸ ಸಾಹಿತ್ಯದಲ್ಲಿ ಸ್ಮರಣೆ, ಸಮರ್ಪಣೆಗಳ ಮೂಲಕ ಜ್ಞಾನವನ್ನು ಗಳಿಸಿಕೊಳ್ಳುವ ಪ್ರಕ್ರಿಯೆ ಕಂಡುಬರುತ್ತದೆ. ವಿಶ್ವದ ಮೂಲಭೂತ ಸತ್ಯದ ಅರಿವಿಗೆ ಭಕ್ತಿಮಾರ್ಗ ಒಂದೇ ಸುಲಭಮಾರ್ಗ ಎಂಬುದು ಇದರ ಮುಖ್ಯ ಭಾವವಾಗಿದೆ. ಭಕ್ತಿ ಪ್ರಾಪಂಚಿಕ ಸುಖಗಳಿಂದ ವಿಮುಖನಾಗುವ, ಬದುಕಿನ ಬಂಧನದಿಂದ ಬಿಡಿಸಿಕೊಂಡು ಮನಸ್ಸನ್ನು ಭಗವಂತನ ಕಡೆ ತಿರುಗಿಸುವುದು ಮತ್ತು ಹಾಗೇ ತಿರುಗಿಸಿ ಶಾಶ್ವತವಾದ ಸುಖದ ಕಡೆ ಜನಸಾಮಾನ್ಯರನ್ನು ಒಯ್ಯುವುದು ಈ ದಾಸಪಂಥದ ಮುಖ್ಯಗುರಿ. ವೈಯಕ್ತಿಕ ಮೋಕ್ಷದ ಸ್ವಾರ್ಥಕ್ಕೆ ಮಾತ್ರ ತಲ್ಲಣಿಸದೆ, ಇಡೀ ಒಂದು ಸಮಾಜದ ಉನ್ನತಿಗೆ ಪ್ರಯತ್ನಿಸಿದ ಈ ಭಕ್ತ ಪರಂಪರೆ ಸಂಗೀತದ ಮೂಲಕ ಭಗವಂತನ ಸಾಕ್ಷಾತ್ಕಾರಕ್ಕೆ ಪಾತ್ರವಾಗಿದೆ. ಅರ್ಪಣಾ ಭಾವದಿಂದ ಕುಲ, ಜಾತಿ, ಮತಗಳನ್ನು ಮೀರುವ ಮೂಲಕ ಸತ್ಯ, ಶುದ್ಧ ನಡೆಗೆ ದಾರಿ ತೋರಿತು ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಂಡಿದ್ದೇನೆ.

**ಅಧ್ಯಾಯ – ಆರು : ತತ್ವಪದ ಸಾಹಿತ್ಯದಲ್ಲಿ ಜ್ಞಾನದ ಪರಿಕಲ್ಪನೆ**

ಈ ಅಧ್ಯಾಯವು ಶಿಷ್ಟ ಸಾಹಿತ್ಯದಂತೆ ಕೇವಲ ಸಮಾಜದ ಮೇಲ್ವರ್ಗಗಳ ಓದಿಗೆ ಸೀಮಿತವಾಗದೇ, ಭಾರತೀಯ ಸಂಸ್ಕೃತಿಯ ಅತ್ಯಂತ ವಿಶಿಷ್ಟ ಅಭಿವ್ಯಕ್ತಿ ರೂಪವಾದ ಮೌಖಿಕ ಪರಂಪರೆ ಸ್ವರೂಪದ್ದಾಗಿದೆ. ತತ್ವಪದಗಳು ಹಾಡಿನ ಮೂಲಕ ಮಠಗಳು, ಗುಡಿಗಳು, ಅನುಭಾವ ಗೋಷ್ಠಿಗಳು, ಭಜನಾಮೇಳಗಳು ಹಳ್ಳಿಗಾಡಿನ ಮೂಲೆ ಮೂಲೆಗಳಲ್ಲಿ ಇಂದಿಗೂ ಕ್ರಿಯಾಶೀಲವಾಗಿದ್ದು, ಸಂಸ್ಕೃತಿ ಕೇಂದ್ರಗಳಾಗಿ ಬಹುದೊಡ್ಡ ಸಂಖ್ಯೆಯ ಅನಕ್ಷರಸ್ಥರಲ್ಲಿ ಸಂಸ್ಕೃತಿ ಪ್ರಸಾರ ಮಾಡುವ ಮಹತ್ವದ ಕೆಲಸ ಮಾಡುತ್ತಿವೆ. ಅಕ್ಷರದ ನೆರವಿಲ್ಲದೆಯೂ ಒಂದು ಜನಾಂಗ ಹೇಗೆ ತನ್ನ ಸಂಸ್ಕೃತಿಯನ್ನು ಅರ್ಥಪೂರ್ಣವಾಗಿ ಬೆಳಸಿಕೊಳ್ಳಬಹುದೆಂಬುದನ್ನು ತಿಳಿಯಲು ಪ್ರಯತ್ನಿಸಬಹುದಾಗಿದೆ. ಜಾತಿ–ಮತಗಳ ಎಲ್ಲೆ ಮೀರಿ, ಪ್ರೀತಿ ಅನುಕಂಪಗಳು ಎಲ್ಲದಕ್ಕಿಂತಲೂ ಎತ್ತರಕ್ಕೆ ನಿಲ್ಲುತ್ತವೆ ಎಂಬ ಅರಿವನ್ನು ಈ ಪರಂಪರೆಯ ಅಧ್ಯಯನದಿಂದ ಕಂಡುಕೊಂಡಿದ್ದೇನೆ.

**ಅಧ್ಯಾಯ – ಏಳು : ಆಧುನಿಕ ಸಂದರ್ಭದಲ್ಲಿ ಜ್ಞಾನದ ಪರಿಕಲ್ಪನೆ**

ಈ ಅಧ್ಯಾಯಲ್ಲಿ ಆಧುನಿಕ ಶೈಕ್ಷಣಿಕ ಚಿಂತಕರ ಚರ್ಚೆಗಳನ್ನು ವಿವೇಚಿಸುವುದು ಮತ್ತು ಕಾಲಾಂತರದಲ್ಲಿ ಜ್ಞಾನ ಪ್ರಸಾರದಲ್ಲಾದ ಬದಲಾವಣೆಗಳು, ಕ್ರಿಯಾಶೀಲತೆಯನ್ನು ನಿಷ್ಕ್ರೀಯೆಗೊಳಿಸುವಂತಹ ತಂತ್ರಜ್ಞಾನ ಪ್ರಣೀತ ಸಂಗತಿಗಳನ್ನು, ಮತ್ತು ಅಕ್ಷರ ಅರಿವಾಗಿ, ಅರಿವು ಅಹಂಕಾರವಾಗಿ ಯಾಂತ್ರಿಕ ಜೀವನ ಶೈಲಿಯನ್ನು ರೂಪಿಸುತ್ತಿರುವ ಇಂದಿನ ಆಧುನಿಕ ಶಿಕ್ಷಣದ ಪ್ರಭಾವ ಮತ್ತು ನಮ್ಮ ದೇಶೀ ಸಂಸ್ಕೃತಿಯ ಮೇಲಾಗುತ್ತಿರುವ ದುಷ್ಪರಿಣಾಮಗಳನ್ನು ಚರ್ಚಿಸುವುದು. ಹಾಗೂ ದೇಶಿ ಜ್ಞಾನ ಮಾದರಿಗಳು ಮತ್ತು ನೆಲದ ತಿಳುವಳಿಕೆ ಮೂಲಗಳನ್ನು ನಶಿಸುವಂತೆ ಮಾಡುತ್ತಿರುವ ತಂತ್ರಜ್ಞಾನ ಮಾದರಿಗಳ ದುಷ್ಪರಿಣಾಮಗಳ ಕುರಿತು ಈ ಅಧ್ಯಯನದಲ್ಲಿ ವಿಶ್ಲೇಷಿಸಿದ್ದೇನೆ.

**ಅಧ್ಯಾಯ–ಎಂಟು : ಅಧ್ಯಯನದ ಫಲಿತಗಳು**

ಈ ಅಧ್ಯಾಯದಲ್ಲಿ 'ಕನ್ನಡ ಅನುಭಾವ ಸಾಹಿತ್ಯದಲ್ಲಿ ಜ್ಞಾನದ ನಿರ್ವಚನ' ಎಂಬ ವಿಷಯದ ಒಟ್ಟು ಸಾರಾಂಶವನ್ನು ಹಾಗೂ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ನಿರೂಪಿಸಲಾಗಿದೆ. ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳು, ಲೇಖನಗಳು, ದಿನಪತ್ರಿಕೆಗಳು ಇತ್ಯಾದಿ ಪೂರಕ ಸಾಮಗ್ರಿಗಳನ್ನು ಕೊಡಲಾಗಿದೆ.

## ಅಧ್ಯಾಯ ಎರಡು

# ಅಧ್ಯಯನಗಳ ಸಮೀಕ್ಷೆ

ಪ್ರಾಚೀನ ಕಾಲದಿಂದಲೂ ಭಾರತೀಯ ಜ್ಞಾನ ಪರಂಪರೆ ಅನುಭವ ಜನ್ಯವಾದದ್ದಾಗಿದೆ. ಇಲ್ಲಿ ಶಿಕ್ಷಣ, ವಿದ್ಯೆ ಕೇವಲ ಉನ್ನತ ವರ್ಗದವರ ಕೈಯಲ್ಲಿದ್ದರೂ, ಎಲ್ಲಾ ಜಾತಿ, ವರ್ಗಗಳಲ್ಲಿ ಕುಶಲಕಲೆ ಮತ್ತು ಕಸುಬುಗಳ ಮೂಲಕ ವೃತ್ತಿ ಶಿಕ್ಷಣ ನೀಡುವ ಸೌಲಭ್ಯವಿತ್ತು. ಕಾಲಾಂತರದಲ್ಲಾದ ಬದಲಾವಣೆಯಿಂದ ವೃತ್ತಿಗಳು ತಮ್ಮ ಮೌಲ್ಯವನ್ನು ಕಳೆದುಕೊಂಡು, ಲಿಖಿತ ರೂಪಿ ಜ್ಞಾನ ಹೆಚ್ಚು ಮೌಲ್ಯ ಪಡೆದುಕೊಂಡಿತು. ಆದರೆ ಅನುಭಾವಿ ಪಂಥಗಳು ಜ್ಞಾನದ ಮಾಧ್ಯಮಗಳಾದ ಲಿಖಿತ ರೂಪಿ ಜ್ಞಾನದ ಆಕರಗಳನ್ನು ವಿರೋಧಿಸಿ, ಬದುಕಿಗೆ ಆಸರೆಯಾಗುವ ನಾನಾ ಕೌಶಲ್ಯಗಳನ್ನು ಜ್ಞಾನವೆಂದು ಒಪ್ಪಿಕೊಂಡವು. ವಚನಕಾರರು ಅವರ ವೃತ್ತಿ ಮೂಲದ ಶ್ರಮದ ಬದುಕಿನ ಜೊತೆಗೆ ತಮ್ಮನ್ನು ಗುರುತಿಸಿಕೊಂಡರೆ, ಹರಿದಾಸರು ಎಲ್ಲವನ್ನು ದೇವರಿಗೆ ಸರ್ಮಪಣೆ ಮಾಡುವ ಮೂಲಕ ಅದ್ವೈತವಾಗುವ ಬಗ್ಗೆ ಹೇಳುತ್ತಾರೆ. ತತ್ವಪದಕಾರರು ಸಂಸಾರ, ದೇಹದ ನಶ್ವರತೆಯನ್ನು ಹೇಳುತ್ತಾ, ಲೌಕಿಕದಲ್ಲಿದ್ದುಕೊಂಡೆ ಅದನ್ನು ಮೀರಿ ಬೆಳೆಯುವಂತೆ ಎಚ್ಚರಿಕೆ ನೀಡುತ್ತಾರೆ. ಕೇವಲ 'ಅಕ್ಷರ ವಿದ್ಯೆ'ಯನ್ನೇ ಪ್ರಧಾನವಾಗಿಟ್ಟುಕೊಂಡು, ಶ್ರಮ ಸಂಸ್ಕೃತಿಯನ್ನು ಅಪಮಾನಗೊಳಿಸುವಂತಹ ನೆಲೆಗಳನ್ನು ಅಲ್ಲಗಳೆದ ಅನುಭಾವಿ ಪಂಥಗಳು ದೇಹಶ್ರಮವನ್ನು ಗೌರವಿಸುವ ಮತ್ತು ಅವುಗಳನ್ನು ತಮ್ಮೊಳಗಿನ ಅರಿವಿನ ಮೂಲಕ ಬದುಕಿನೊಂದಿಗೆ ಬೆಸೆದುಕೊಂಡಿರುವುದನ್ನು ಕಾಣುತ್ತೇವೆ.

ಇಲ್ಲಿ ಪ್ರಮುಖವಾಗಿ ಅನುಭಾವಿ ಪಂಥಗಳಾದ ವಚನ, ದಾಸ, ತತ್ವಪದ ಸಾಹಿತ್ಯವನ್ನು ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕಾಯಕ, ಭಕ್ತಿ, ವೃತ್ತಿಮೌಲ್ಯಗಳ ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ಆದರೆ 'ಜ್ಞಾನ'ದ ಕುರಿತಂತೆ ಅಧ್ಯಯನಗಳು ನಡೆದಿರುವುದು ತುಂಬಾ ಕಡಿಮೆ. ಏಕೆಂದರೆ ಇಲ್ಲಿ 'ಜ್ಞಾನ' ಎಂಬ ಶಬ್ದವನ್ನು ಕೇವಲ ಮೆದುಳಿಗೆ ಸಂಬಂಧಿಸಿದಂತೆ ಬಳಸಲಾಗಿಲ್ಲ. ಅನುಭವವೆಂಬುದು ಇಡೀ ವ್ಯಕ್ತಿತ್ವವನ್ನು ಒಳಗೊಳ್ಳುವಂಥಹದ್ದಾಗಿದ್ದರಿಂದ, ಅಂತಹ ಜ್ಞಾನವನ್ನು ತಿಳುವಳಿಕೆ, ವಿವೇಕ ಎಂಬರ್ಥದಲ್ಲಿ ಬಳಸಿದ್ದೇನೆ. ಹಾಗಾಗಿ ಅನುಭಾವ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಬಂದಿರುವ ಕೃತಿಗಳು, ಲೇಖನಗಳು, ಎಂಫಿಲ್ ಹಾಗೂ ಪಿಎಚ್.ಡಿ ಮಹಾಪ್ರಬಂಧಗಳ ಸ್ವರೂಪವನ್ನು ಚರ್ಚೆಗೆ ಒಳಪಡಿಸುವ ಮೂಲಕ ಅವುಗಳಲ್ಲಿ ಅಡಗಿರಬಹುದಾದ ಜ್ಞಾನದ ಸ್ವರೂಪವನ್ನು ಶೋಧಿಸಿಕೊಳ್ಳುವುದು ಈ ಸಮೀಕ್ಷೆಯ ಮುಖ್ಯ ಉದ್ದೇಶವಾಗಿದೆ.

ಎಚ್. ತಿಪ್ಪೇರುದ್ರಸ್ವಾಮಿಯವರು 'ಶರಣರ ಅನುಭಾವ ಸಾಹಿತ್ಯ' ಎಂಬ ಕೃತಿಯನ್ನು ೧೯೬೩ ರಲ್ಲಿ ಪ್ರಕಟಿಸಿದ್ದಾರೆ. ಇದು ೧೯೯೮ ರ ಹೊತ್ತಿಗೆ ನಾಲ್ಕು ಮುದ್ರಣಗಳನ್ನು ಕಂಡಿದೆ. ಪ್ರಸ್ತುತ ಈ ಕೃತಿಯಲ್ಲಿ ವೇದಕಾಲದಿಂದ ವೀರಶೈವ ವಿಕಾಸದ ವರೆಗಿನ ಶೈವ ಪಂಥಗಳ ವಿವರಣೆ ಇದೆ. ಕಾಶ್ಮೀರಶೈವ, ತಮಿಳುಶೈವ ಸಿದ್ಧಾಂತ, ವೀರಶೈವ ದರ್ಶನಗಳ ತಾರತಮ್ಯದ ವಿವೇಚನೆ ಇದೆ. ಶರಣರ ವಿಚಾರಗಳನ್ನು ಪರೀಕ್ಷಿಸುವ, ಅವರ ಸಾಧನೆಗಳನ್ನು ತುಲನಾತ್ಮಕವಾಗಿ ವಿವೇಚಿಸುವ ಮೂಲಕ ಐದು ಅಧ್ಯಾಯಗಳಲ್ಲಿ ವಿಶ್ಲೇಷಿಸಿದ್ದಾರೆ. 'ಶರಣರ ವಿಚಾರಧಾರೆ' ಎಂಬ ಮೂರನೇ ಅಧ್ಯಾಯದಲ್ಲಿ ಶರಣರ ವ್ಯಕ್ತಿಸಾಧನೆ, ಬೋಧನೆ, ಸಮಾಜ ರಚನೆ, ಧಾರ್ಮಿಕ ಆಚರಣೆಗಳನ್ನು ಕುರಿತು ವಿವರಿಸಲಾಗಿದೆ. 'ಕಾಯಕ' ಎಂಬ ಮಾತು ಕೇವಲ ತನ್ನ ಹೊಟ್ಟೆಯನ್ನು ತುಂಬಿಕೊಳ್ಳಲಷ್ಟೇ ಅಲ್ಲದೆ, ಇತರರಿಗೂ ಲಭ್ಯವಾಗುವಂತೆ ಮಾಡುವ ನಿರಂಹಕಾರ ಸ್ವರೂಪದ್ದಾಗಿದೆ. ಜ್ಞಾನ-ಭಕ್ತಿ-ಯೋಗಗಳ ಮೂಲಕ ಅರಿವು ಮತ್ತು ಆಚರಣೆಯಲ್ಲಿ ಸಮನ್ವಯವನ್ನು ಸಾಧಿಸುದುದು ಶರಣರ ಸಾಧನೆಯಾಗಿದೆ.

'ಶರಣರ ಅನುಭಾವ ಮಾರ್ಗ' ಎಂಬ ನಾಲ್ಕನೇ ಅಧ್ಯಾಯದಲ್ಲಿ 'ಅನುಭಾವ ' ಎಂಬ ಪದವನ್ನು ಪಾಶ್ಚಾತ್ಯ ದಾರ್ಶನಿಕರ, ಸಂತರ ವಿಚಾರಧಾರೆಯನ್ನು ಬಳಸಿಕೊಂಡು, ವಚನ ಸಾಹಿತ್ಯದ ಉದಾಹರಣೆಗಳ ಮೂಲಕ ವಿವರಿಸಲಾಗಿದೆ. ಈ ಕೃತಿಯಲ್ಲಿ ಅನುಭಾವ ಸಾಹಿತ್ಯ ಜೀವನದ ಎಲ್ಲಾ ಮುಖಗಳನ್ನು ಅಧ್ಯಯನಕ್ಕೆ ಒಳಪಡಿಸಿದೆ. ಸಮಾಜ ಮತ್ತು ವ್ಯಕ್ತಿ ಇವುಗಳ ಸಮನ್ವಯತೆಯನ್ನು ನಿರೂಪಿಸಲಾಗಿದೆ. ವೈಜ್ಞಾನಿಕ ಸಂಶೋಧನೆಗಳಿಂದ ಹೊಸ-ಹೊಸ ಅನುಭವಗಳನ್ನು ಪಡೆದಂತೆ, ಹೊಸ-ಹೊಸ ಸಮಸ್ಯೆಗಳು ಎದುರಾಗುತ್ತವೆ. ಈ ಸಮಸ್ಯೆಗಳಿಗೆ ಶರಣರು ವ್ಯಾಪಕವಾದ ಹಾಗೂ ಸಾರ್ವಕಾಲಿಕವಾದ ಉತ್ತರವನ್ನು ಕೊಟ್ಟಿದ್ದಾರೆ. ಶರಣ ಸಾಹಿತ್ಯದಲ್ಲಿ ಇಂದಿನ ಮನಶಾಸ್ತ್ರಜ್ಞರ ದೃಷ್ಟಿಕೋನಗಳನ್ನು ಹಾಗೂ ಅರಿವಿನ ಹೊಸ ಸ್ವರೂಪಗಳನ್ನು ಗುರುತಿಸಬಹುದಾಗಿದೆ.

ಬಿ.ಎಸ್.ಪಾಟೀಲ ರವರು 'ಅನುಭಾವಿಗಳ ಅಮೃತವಾಣಿ' ಎಂಬ ಕೃತಿಯನ್ನು ೧೯೯೩ ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯು ಮುಖ್ಯವಾಗಿ ಶರಣರ ಕಾಯಕ ತತ್ವದಲ್ಲಿನ ಜ್ಞಾನ ಮತ್ತು ಕ್ರಿಯೆಗಳು ಒಂದಕ್ಕೊಂದು ಪೂರಕವಾಗಿರಬೇಕೆಂಬ ಅಂಶವನ್ನು ಒತ್ತಿ ಹೇಳಿದ್ದಾರೆ. ಅಲ್ಲದೆ ಮೂಲಶಿಕ್ಷಣ, ವೃತ್ತಿಶಿಕ್ಷಣಗಳ ಬಗ್ಗೆ ಮಾತನಾಡುವ ಶಿಕ್ಷಣ ತಜ್ಞರು ಹಾಗೂ ಸಮಾನತೆ, ಸಮಾಜವಾದದ ಬಗ್ಗೆ ಮಾತನಾಡುವ ಇಂದಿನ ರಾಜಕಾರಣಿಗಳು ೧೨ನೇ ಶತಮಾನದ ಶರಣರ ಸಂದೇಶದ ಕಡೆಗೆ ಗಮನ ನೀಡದಿರುವುದು ಇಂದಿನ ದುಸ್ಥಿತಿಗೆ ಕಾರಣವೆನ್ನುವುದು ಗಮನಿಸಬೇಕಾದ ಅಂಶವಾಗಿದೆ. ಶರಣರು ಪ್ರತಿಪಾದಿಸಿದ ತತ್ವಗಳು, ಆರ್ಥಿಕ ಸೂತ್ರಗಳು, ಸಾಮಾಜಿಕ ನಿಯಮಗಳು ಸಮಾಜವನ್ನು ಸುಸ್ಥಿತಿಯಲ್ಲಿಡಲು ಸಹಾಯಕವಾಗುತ್ತವೆ. ಇದನ್ನು ಗಮನಿಸದೇ ಕೇವಲ ಆಧುನಿಕತೆಗೆ ವಾಲುತ್ತಿರುವ ಜನತೆ, ಅನೈತಿಕ ಮಾರ್ಗದಲ್ಲಿ ಸಾಗುತ್ತಿದೆ ಎಂಬ ಚರ್ಚೆಗಳು ಇಲ್ಲಿವೆ.

'ಬಸವೇಶ್ವರ ಮತ್ತು ಪುರಂದರದಾಸ 'ಕೃತಿಯು ಬಸವರಾಜ ಸಬರದ ಅವರ ಪಿಎಚ್.ಡಿ ಮಹಾಪ್ರಬಂಧವಾಗಿದ್ದು, ೧೯೯೩ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ಇಲ್ಲಿ ಬಸವೇಶ್ವರ ಮತ್ತು

ಪುರಂದರದಾಸರನ್ನು ವ್ಯಕ್ತಿಗಳೆಂದು ಪರಿಗಣಿಸದೆ, ಕನ್ನಡ ಸಾಹಿತ್ಯದ ಎರಡು ಘಟ್ಟಗಳೆಂದು ಗುರುತಿಸಿದ್ದಾರೆ. ಈ ಎರಡೂ ಸಾಹಿತ್ಯ ಪರಂಪರೆಗಳು ಕೇವಲ ವ್ಯಕ್ತಿ ಚಿಂತನದ ಅಭಿಪ್ರಾಯಗಳಾಗಿರದೆ, ಸಾಮಾಜಿಕ ಚಿಂತನದ ಅಭಿವ್ಯಕ್ತಿಗಳಾಗಿವೆ. ಎಂಟು ಅಧ್ಯಾಯಗಳಲ್ಲಿ ವ್ಯಾಪಿಸಿರುವ ಈ ಮಹಾ ಪ್ರಬಂಧದಲ್ಲಿ ವಚನ, ಸ್ವರವಚನ, ಕೀರ್ತನೆ, ಸುಳಾದಿ, ಉಗಾಭೋಗಗಳಂತಹ ಸಾಹಿತ್ಯ ರೂಪಗಳ ಲಕ್ಷಣ, ಬೆಳವಣಿಗೆ, ವಿಶಿಷ್ಟತೆಯನ್ನು ಹೇಳಿದ್ದಾರೆ. ಬಸವಣ್ಣ ಮತ್ತು ಪುರಂದರದಾಸರ ವಿಷಯ ಪ್ರತಿಪಾದನೆಯಲ್ಲಿ ಅವರವರ ಸಾಂಸ್ಕೃತಿಕ ನಿಲುವಿನಲ್ಲಿಯ ವಿಭಿನ್ನತೆಯ ಸೂಕ್ಷ್ಮತೆಗಳನ್ನು, ಸಾಮ್ಯತೆಗಳನ್ನು, ವಿಚಾರಗಳನ್ನು ಗುರುತಿಸಿದ್ದಾರೆ. ವ್ಯಕ್ತಿ ಸಾಧನೆಯ ಜೊತೆಗೆ, ಅವರ ಸಂಘಟನೆಯ ಶಿಸ್ತು, ಅದರ ಮೂಲಕ ನಮ್ಮ ನೆಲದ ಪ್ರಜ್ಞೆಯನ್ನು ಜಾಗೃತಗೊಳಿಸಿದ ಧ್ವನಿ, ಆಲೋಚನೆಗಳನ್ನು ಇಲ್ಲಿ ವಿವರವಾಗಿ ನಿರೂಪಿಸಿದ್ದಾರೆ.

ಬಸವರಾಜ ಕಲ್ಗುಡಿಯವರು 'ಅನುಭಾವ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ' ಎಂಬ ಕೃತಿಯನ್ನು ೧೯೯೯ ರಲ್ಲಿ ಪ್ರಕಟಿಸಿದ್ದಾರೆ. ಈ ಅಧ್ಯಯನವು ೧೨ನೇ ಶತಮಾನದ ಅಲ್ಲಮ, ಅಕ್ಕಮಹಾದೇವಿ, ಬಸವಣ್ಣ ಈ ಮೂವರು ವಚನಕಾರರ ಮತ್ತು ಅವರ ವಚನಗಳ ಹಿನ್ನೆಲೆಯಲ್ಲಿ ಆ ಕಾಲದ ಜನರ ಬದುಕು, ಮನಸ್ಥಿತಿ, ಸ್ಥಿತಿಗತಿ ಹಾಗೂ ಸುತ್ತಲ ವಾತಾವರಣದ ಬಗ್ಗೆ ಸ್ಪಂದಿಸಿದ ರೀತಿಯನ್ನು ಹೇಳುತ್ತದೆ. ಈ ಅಧ್ಯಯನದ ಉದ್ದೇಶ ವಚನ ಚಳುವಳಿಯ ಸಂದರ್ಭದಲ್ಲಿ, ಬದುಕಿನ ಬಗ್ಗೆ ನಡೆದಂತಹ ಚಿಂತನೆಗಳ ಸ್ವರೂಪವನ್ನು ವಿಶ್ಲೇಷಿಸುವುದಾಗಿದೆ. ಜನ ಸಂಸ್ಕೃತಿಯಲ್ಲಿ ಬದುಕನ್ನು ಕುರಿತಂತೆ ಉಂಟಾದ ಸಮಸ್ಯೆಗಳ ಹುಡುಕಾಟ ಮತ್ತು ವ್ಯಕ್ತಿತ್ವದ ಸ್ಥಿತ್ಯಂತರದ ನೆಲೆಯಲ್ಲಿ ಬದುಕಿನ ಮೌಲ್ಯಗಳ ಹುಡುಕಾಟ ಮುಖ್ಯ ಗುರಿಯಾಗಿದೆ. ವಚನಕಾರರ ಅನುಭಾವದ ಹುಡುಕಾಟದಲ್ಲಿ ಇಂಥ ಸಾಂಸ್ಕೃತಿಕ ಕಾಳಜಿ ಮುಖ್ಯವೆಂಬುದು ಇಲ್ಲಿನ ವಿಶೇಷ ಸಂಗತಿಯಾಗಿದೆ.

ಭಾರತದಂತಹ ಸಾಂಸ್ಕೃತಿಕ ಪರಿಸರದಲ್ಲಿ ವಾಕ್ ಸಾಂಪ್ರದಾಯದ ಪುರಾಣ, ಐತಿಹ್ಯ, ಕಾವ್ಯಗಳ ಮೂಲಕ ಜನರ ಬದುಕಿನ ಕ್ರಮ, ಚಾರಿತ್ರಿಕ ಪ್ರಜ್ಞೆಯ ಅರಿವನ್ನು ಮೂಡಿಸುತ್ತವೆ. ಮಧ್ಯಕಾಲದ ಹೊತ್ತಿಗೆ ಮನುಷ್ಯನ ಅಸ್ತಿತ್ವ ಹಾಗೂ ಬದುಕಿನ ಹೊಸ ಬೆಳವಣಿಗೆಗಳನ್ನು ಕುರಿತು ಚಿಂತನೆ ಮಾಡಿದ್ದು ವಚನಕಾರರು. ಅದಕ್ಕಾಗಿ ವಚನಕಾರರನ್ನು ಮತ್ತು ಅವರ ವಚನಗಳನ್ನು ಅಧ್ಯಯನಕ್ಕೆ ಬಳಸಿಕೊಂಡಿರುವುದಾಗಿ ಲೇಖಕರು ಹೇಳಿಕೊಂಡಿದ್ದಾರೆ.

ಟಿ.ಆರ್. ಚಂದ್ರಶೇಖರವರು, ಜಾನ್ ಪೀಟರ್ ಶೌಟನ್ ಅವರ 'Revolution of mystics' ಕೃತಿಯನ್ನು 'ಅನುಭಾವಿಗಳ ಕ್ರಾಂತಿ' ಎಂದು ಕನ್ನಡಕ್ಕೆ ಅನುವಾದ ಮಾಡಿ ೧೯೯೯ ರಲ್ಲಿ ಪ್ರಕಟಿಸಿದ್ದಾರೆ. ಪ್ರಸ್ತುತ ಈ ಕೃತಿಯನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಂಡಿದ್ದಾರೆ. ವೀರಶೈವ ಚಳುವಳಿಯ ಸಾಮಾಜಿಕ ಸ್ವರೂಪದ ಅನ್ವೇಷಣೆ ಈ ಕೃತಿಯ ವಿಷಯ ವಸ್ತುವಾಗಿದೆ. ಜಾತಿ, ವಚನ ಸಾಹಿತ್ಯದಲ್ಲಿ ಶ್ರಮ ಮತ್ತು ಸಂಪತ್ತು, ಮಹಿಳೆಯ ಸ್ಥಾನಮಾನ, ಶಿಕ್ಷಣ ಎಂಬ ನಾಲ್ಕು ಅಧ್ಯಾಯಗಳಲ್ಲಿ ವಿಷಯ ವಿಸ್ತರಣೆಗೊಂಡಿದೆ. ೧೨ನೇ ಶತಮಾನದಲ್ಲಿ ಸಾಮಾಜಿಕ ವ್ಯವಸ್ಥೆ ಹಾಗೂ ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಚಳುವಳಿಯು ಯಾವ ಆದರ್ಶಗಳನ್ನು ರೂಪಿಸಿತ್ತು ಹಾಗೂ ಆ ಆದರ್ಶಗಳನ್ನು ಆಧ್ಯಾತ್ಮ, ಅನುಭಾವಗಳೊಂದಿಗೆ ಹೇಗೆ ಸಂಯೋಜನೆಗೊಂಡಿವೆ ಎಂಬುದನ್ನು ಇಲ್ಲಿ ಪರಿಶೀಲಿಸಲಾಗಿದೆ.

'ಶಿಕ್ಷಣ' ಎಂಬ ಅಧ್ಯಾಯದಲ್ಲಿ ಮಧ್ಯಯುಗೀನ ಭಾರತದ ಶೈಕ್ಷಣಿಕ ನಿಲುವುಗಳ ಕುರಿತು ವಿವರಿಸಲಾಗಿದೆ. ಶಿಕ್ಷಣ ಕೇವಲ ಉನ್ನತ ವರ್ಗದವರ ಸ್ವತ್ತಾಗಿದ್ದ ಕಾಲದಲ್ಲಿ ಶಿಕ್ಷಣದಿಂದ ವಂಚಿತರಾದ ಶೂದ್ರರಿಗೆ ೧೨ನೇ ಶತಮಾನದಲ್ಲಿ ಧಾರ್ಮಿಕ ಶಿಕ್ಷಣ, ವೃತ್ತಿ ತರಬೇತಿ, ಕುಶಲಕಲೆ ತರಬೇತಿ ನೀಡುವ ಅನೇಕ ಧರ್ಮಶಾಲೆಗಳನ್ನು ತೆರೆಯಲಾಗಿತ್ತು. ವಚನಕಾರರು ತಮ್ಮ ವಚನಗಳ ಮೂಲಕ ಜನರಿಗೆ ಕರ್ತವ್ಯ ಪ್ರಜ್ಞೆಯನ್ನು ಎಚ್ಚರಿಸಿ, ತಪ್ಪುಗಳ ಬಗ್ಗೆ ಎಚ್ಚರಿಕೆ ನೀಡಿದ್ದಾರೆ. ಜ್ಞಾನದ ವಾರಸುದಾರರಾಗಿದ್ದವರ ವಿರುದ್ಧ ತಿರುಗಿ ಬಿದ್ದಿದ್ದಾರೆ. ಬ್ರಾಹ್ಮಣರ ಪ್ರತಿಷ್ಠೆಯ ಮನೋಭಾವವನ್ನು, ಜ್ಞಾನದ ಏಕಸ್ವಾಮ್ಯತೆಯನ್ನು ವೀರಶೈವರು ಖಂಡಿಸಿದ್ದಾರೆ. ಬ್ರಾಹ್ಮಣ ತತ್ತ್ವಬೋಧೆಯ ಮೌಲ್ಯಗಳನ್ನು ಪ್ರಶ್ನಿಸಿದ್ದಾರೆ. ಅವರ ರೂಢಿಗತ ಬೋಧನೆ ಮತ್ತು ನಾಟಕೀಯ ಸಂಗತಿಗಳನ್ನು ಅಲ್ಲಗಳೆದಿದ್ದಾರೆ. ವೀರಶೈವ ಮಠಗಳು ಸಂಸ್ಕೃತ ಕಾಲೇಜುಗಳನ್ನು ತೆರೆಯುವುದರ ಮೂಲಕ ಬ್ರಾಹ್ಮಣರ ಸಾಂಸ್ಕೃತಿಕ ಹಾಗೂ ಬೌದ್ಧಿಕ ಪ್ರಭುತ್ವದ ಮೇಲೆ ಆಕ್ರಮಣವನ್ನು ಪ್ರಾರಂಭಿಸಿದರು. ಬ್ರಾಹ್ಮಣ ಶಿಕ್ಷಣದ ಅನುಪಯುಕ್ತತೆಯನ್ನು ಹೇಳುವ ಮೂಲಕ ಅನುಭಾವಿ ಶರಣರ ಶಿಕ್ಷಣ ಕ್ರಮ ಮತ್ತು ವೈದಿಕ ಶಿಕ್ಷಣ ಕ್ರಮವನ್ನು ಇಲ್ಲಿ ಮುಖಾಮುಖಿಯನ್ನಾಗಿಸಲಾಗಿದೆ.

ಎಂ.ಎಸ್.ಪಾಟೀಲ ಮತ್ತು ಡಿ.ಬಿ.ನಾಯಕ ಅವರ ಸಂಪಾದಕತ್ವದಲ್ಲಿ 'ಕನ್ನಡದಲ್ಲಿ ಅನುಭಾವ ಸಾಹಿತ್ಯ' ಎಂಬ ಕೃತಿಯು ೨೦೦೩ ರಲ್ಲಿ ಪ್ರಕಟಗೊಂಡಿದೆ. ಇದು ಸ್ನಾತಕೋತ್ತರ ಕೇಂದ್ರ ರಾಯಚೂರು ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ಇವರ ಸಂಯೋಗದಲ್ಲಿ ನಡೆದ 'ಅನುಭಾವ ಸಾಹಿತ್ಯ' ಎಂಬ ವಿಷಯದ ವಿಚಾರ ಸಂಕಿರ್ಣದಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನವಾಗಿದೆ. ಇದರಲ್ಲಿ ಹತ್ತು ಲೇಖನಗಳಿದ್ದು, ಅನುಭಾವ ಸಾಹಿತ್ಯಗಳಾದ ವಚನ, ಕೀರ್ತನೆ, ತತ್ವಪದ ಸಾಹಿತ್ಯ ಕುರಿತಾದ ಪ್ರಬಂಧಗಳಾಗಿವೆ. ವಚನ ಸಾಹಿತ್ಯ ಲೇಖನಗಳನ್ನು ಗಮನಿಸಿದಾಗ ಭಕ್ತಿ ಎನ್ನುವುದು ಪರಮಾತ್ಮನನ್ನು ಸೇರಲು, ಅವನ ಕರುಣೆಯನ್ನು ಪಡೆಯುವ ಸಾಧನವಷ್ಟೇ ಆಗಿರದೆ, ಜೀವನ ವಿಕಾಸ, ಜೀವನ ವಿಧಾನವಾಗಿರುವಂತೆ ತೋರುತ್ತದೆ. ಶರಣರು ಲಿಂಗಾನುಸಂಧಾನದ ಚರ್ಚೆಯನ್ನು ಅನುಭಾವ ಎಂದು ಕರೆದಿದ್ದಾರೆ. ಅದರಂತೆ ಹರಿದಾಸರು ಭಕ್ತಿ ಮಾರ್ಗವನ್ನು ತಮ್ಮ ತತ್ವಗಳ ಅನುಷ್ಠಾನಕ್ಕೆ ಬಳಸಿದರೇ ಹೊರತು, ಮೂಢ ಸಂಪ್ರದಾಯವಾದಿಗಳಾಗಿ ಬೆಳೆಯಲಿಲ್ಲ. ಇವರು ಲೌಕಿಕದಲ್ಲಿದ್ದುಕೊಂಡೆ ಪಾರಮಾರ್ಥವನ್ನು ಸಾಧಿಸಬೇಕೆಂಬ ಎಚ್ಚರಿಕೆಯ ಮಾತುಗಳನ್ನು ಹೇಳಿದ್ದಾರೆ. ದಾಸರ ಅನುಭಾವಿಕ ಕೀರ್ತನೆಗಳಲ್ಲಿ ಸಾಮಾಜಿಕ ಸುಧಾರಣೆಯ, ಸಾಮಾಜಿಕ ಕಳಕಳಿಯ ಮಹತ್ವವನ್ನು ಎತ್ತಿ ತೋರಿಸುತ್ತವೆ. ತತ್ವಪದಕಾರರ ಆಶಯ ವರ್ಣ ಪದ್ಧತಿಯನ್ನು ಮೀರಿ ಸರ್ವಧರ್ಮ ಸಾಮರಸ್ಯವನ್ನು ಕಾಪಾಡುವುದಾಗಿದೆ. ವ್ಯಕ್ತಿಯು ತನ್ನ ಸಾಧನೆಯ ಮೂಲಕ ದೈವತ್ವವನ್ನು ಸಾಧಿಸಿಕೊಳ್ಳಬಲ್ಲವನಾಗಿದ್ದಾನೆ. ಮಾನವನ ಕ್ರಿಯೆ, ಪ್ರತಿಕ್ರಿಯೆಗಳನ್ನು, ಮಾನಸಿಕ ಹೊಯ್ದಾಟಗಳನ್ನು ಅಭಿವ್ಯಕ್ತಿಸುವ ಮೂಲಕ ಅದನ್ನು ಮೀರಿ ಬೆಳೆಯುವ ಮಾರ್ಗವೊಂದನ್ನು ಸೂಚಿಸಿದ್ದಾರೆ. ಇಲ್ಲಿ ಎಲ್ಲಾ ಬಂಧನಗಳನ್ನು ಕಳಚಿ, ಸಾಧನಾ ಪಥದ ಹೆಜ್ಜೆಯನ್ನು ಇವರ ಅನುಭಾವದ ಅನುಸಂಧಾನದಲ್ಲಿ ಕಾಣಬಹುದಾಗಿದೆ.

ಡಾ.ವೀರೇಶ ಬಡಿಗೇರ ಅವರು 'ಬಾಚಿ ಕಾಯಕದ ಬಸವಯ್ಯ: ವೃತ್ತಿ ಹಾಗೂ ತತ್ವ ಮೀಮಾಂಸೆ' ಎಂಬ ಕೃತಿಯನ್ನು ೨೦೦೭ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯು ಎಂಟು ಲೇಖನಗಳನ್ನು ಒಳಗೊಂಡಿದ್ದು, ಕ್ರಿಯೆ ಮತ್ತು ಅರಿವುಗಳನ್ನು ಒಂದಾಗಿಸುವ ದೈಹಿಕ ಶ್ರಮದ ಬೌದ್ಧಿಕ ಆಲೋಚನೆಗಳನ್ನು ಗೌರವಿಸಿದಂತಹ ವಚನಕಾರರ ವಿಚಾರಗಳನ್ನು ವಚನಗಳ ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ. ದೈಹಿಕ ಶ್ರಮದ ನೆಲೆಗಳನ್ನು ಕಳಚಿಕೊಂಡು, ಬೌದ್ಧಿಕ ಪ್ರಧಾನ ಬದುಕನ್ನು ಆಯ್ಕೆ ಮಾಡಿಕೊಂಡು ಬದುಕುವ ಕ್ರಮ ವ್ಯವಸ್ಥಿತ ಸಮುದಾಯಗಳ ಬದುಕನ್ನು ಹೇಗೆ ಅಸ್ಥಿರಗೊಳಿಸುತ್ತವೆ ಎನ್ನುವುದರೊಂದಿಗೆ, ವೈದಿಕ ವಿದ್ಯೆಗಳು ವೈದಿಕೇತರಿಗೆ ಸಲ್ಲುವುದಿಲ್ಲ ಎನ್ನುವ ಸಂದೇಶವನ್ನು ಹೇಳುತ್ತಾರೆ. ಜೊತೆಗೆ ವೈದಿಕ ವಿದ್ಯೆಗಳು ಜನರ ಬದುಕಿನಿಂದ ದೂರವಾಗಿರುವುದರಿಂದ ಅವುಗಳು ವೈಫಲ್ಯಗೊಂಡಿವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇಂದು ಕ್ರಿಯೆ, ಅರಿವಿನ ವ್ಯಾಖ್ಯಾನಗಳು ಹಾಗೂ ಶ್ರಮದ ಸ್ವರೂಪ ಬದಲಾಗಿದೆ. ಬುದ್ಧಿ ಮತ್ತು ಭಾವನೆ, ಶ್ರಮ ಮತ್ತು ಕ್ರಿಯೆ ಪರಸ್ಪರ ಸಂಬಂಧವಿಲ್ಲದಂತಾಗಿದೆ. ವಚನಕಾರರು ಕ್ರಿಯೆ ಮತ್ತು ಅರಿವನ್ನು ಶ್ರಮ ಮತ್ತು ಜ್ಞಾನಗಳೊಂದಿಗೆ ಹೊಂದಾಣಿಕೆ ಮಾಡಿದ್ದಾರೆ. ಶ್ರಮ ಮತ್ತು ಜ್ಞಾನ ಹೀನವಾಗುವ, ನಿರ್ವೀರ್ಯಗೊಳಿಸುವಂತಹ ವೈದಿಕ ಮನಸ್ಸುಗಳನ್ನು ಬೇಧಿಸಿ, ಶ್ರಮ ಮತ್ತು ಜ್ಞಾನವನ್ನು ಸಮನ್ವಯಗೊಳಿಸಿ, ಅದನ್ನು ಶರೀರದ ಉತ್ಪಾದನೆಯಾಗಿ ಕಾಣುವಂತೆ ಮಾಡುವಲ್ಲಿ ವಚನಕಾರರ ಶ್ರಮ ದೊಡ್ಡದು ಎಂದಿದ್ದಾರೆ. ಅಲ್ಲದೆ ಇಂದಿನ ಯಾಂತ್ರಿಕ ಯುಗ ಕೂಡ ಮಾನವನ ಅಸ್ತಿತ್ವವನ್ನು ಇಲ್ಲವಾಗಿಸುತ್ತಿದೆ. ಇಂದಿನ ತಂತ್ರಜ್ಞಾನದ ಆವಿಸ್ಕಾರಗಳು ವ್ಯಕ್ತಿ ರಹಿತವಾದ ಪರಿಸರವನ್ನು ನಿರ್ಮಿಸಿ, ಉತ್ಪಾದನಾ ಪ್ರಕ್ರಿಯೆಯಲ್ಲಿ ಮಾನವ ಸಂಪನ್ಮೂಲಗಳನ್ನು ಸೀಮಿತಗೊಳಿಸಿ ಇಲ್ಲವೇ ಸಂಪೂರ್ಣವಾಗಿ ಮನುಷ್ಯ ಪ್ರಜ್ಞೆಯನ್ನು ಮೊಟಕುಗೊಳಿಸುವ ಕ್ರಮ, ಜೀವ ವಿರೋಧಿ ನೆಲೆಯದ್ದಾಗಿದೆ ಎಂಬುದನ್ನು ಹೇಳುತ್ತಾರೆ.

ಬಸವರಾಜ ಸಬರದ ರವರ 'ವಚನ ಸಂಸ್ಕೃತಿ' ಕೃತಿಯನ್ನು ೨೦೦೭ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯು ೧೨ನೇ ಶತಮಾನದಲ್ಲಿದ್ದ ವಚನಕಾರರ ಜೀವನ ವಿಧಾನ, ಆಚಾರ-ವಿಚಾರ, ನಡೆ-ನುಡಿಗಳು ಭಾರತೀಯ ಸಾಂಸ್ಕೃತಿಕ ಸಂದರ್ಭದಲ್ಲಿ ತುಂಬಾ ಮುಖ್ಯವಾಗಿವೆ. ವಚನ ಸಂಸ್ಕೃತಿಯಲ್ಲಿ ಪರಿಪೂರ್ಣತೆಯ ಅನ್ವೇಷಣೆಯ ಜೊತೆಗೆ, ಅಪೂರ್ಣತೆಯ ಮಿತಿಯನ್ನು ಕಂಡುಕೊಳ್ಳುವ ಪ್ರಯತ್ನವಿರುವುದರಿಂದ ಈ ಸಂಸ್ಕೃತಿ ಚಲನಶೀಲವಾಗಿದ್ದು, ಇಂದಿಗೂ ಪ್ರಸ್ತುತಗೊಳ್ಳುತ್ತಲೇ ಇದೆ ಎಂದಿದ್ದಾರೆ. ವಚನ ಸಾಹಿತ್ಯದಲ್ಲಿ ಮಹಿಳೆಯನ್ನು ಒಬ್ಬ ಸಾಧಕಿಯೆಂಬುದನ್ನು ಉದಾಹರಣೆಗಳ ಮೂಲಕ ಅರ್ಥೈಯಿಸಿದ್ದಾರೆ. ಶರಣರು ವಿನಯದಂತಹ ಮೌಲ್ಯವನ್ನು ಎತ್ತಿ ಹಿಡಿದಂತೆ, ಸ್ವಾಭಿಮಾನದಂತಹ ಮೌಲ್ಯವನ್ನು ಬೆಳೆಸಿದ್ದಾರೆ. ಮಾರುಕಟ್ಟೆ ಮೌಲ್ಯಗಳ ಜಾಗತೀಕರಣದ ಯುಗದಲ್ಲಿ ವಚನಗಳ ಮೂಲಕ ಮಾನವೀಯ ಮೌಲ್ಯಗಳ ಜಾಗತೀಕರಣವನ್ನು ಹೇಗೆ ಮಾಡಬೇಕೆಂಬುದನ್ನು ಈ ಕೃತಿಯಲ್ಲಿ ಚಿಂತನೆ ನಡೆಸಿದ್ದಾರೆ.

ಜಿ.ಎನ್.ಉಪಾಧ್ಯ ಅವರು 'ಅನುಭಾವ ಸಾಹಿತ್ಯದ ವಿಭಿನ್ನ ನೆಲೆಗಳು' ಎನ್ನುವ ಕೃತಿಯನ್ನು ೨೦೧೧ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಅನುಭಾವ ಸಾಹಿತ್ಯದ ಪ್ರಧಾನ ಧಾರೆಗಳಾದ ವಚನಸಾಹಿತ್ಯ,

ದಾಸಸಾಹಿತ್ಯ, ಮರಾಠಿ ಸಂತ ಸಾಹಿತ್ಯದಂತಹ ಭಿನ್ನ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಆಧ್ಯಾತ್ಮಿಕ ಉನ್ನತಿಯ ಜೊತೆಗೆ ಲೋಕ ಕಲ್ಯಾಣವನ್ನು ಸಾಧಿಸಿದ ಸಮಾಜೋ-ಧಾರ್ಮಿಕ ಚಳುವಳಿಯ ಪ್ರತೀಕವಾಗಿ ವಚನಸಾಹಿತ್ಯವನ್ನು ಗುರುತಿಸಲಾಗಿದೆ. ಬೇರೆ-ಬೇರೆ ವೃತ್ತಿ, ಜಾತಿ, ಕುಲಗಳಿಂದ ಬಂದ ಶರಣರು, ತಮ್ಮ ಸ್ವಂತ ವಿಚಾರಗಳನ್ನು ಪ್ರಾಯೋಗಿಕವಾಗಿ ಆಚರಣೆಗೆ ತಂದವರು. ಕ್ರಿಯಾಶೀಲರಾದ ಶರಣರು ಸಾಮಾಜಿಕ, ಧಾರ್ಮಿಕ ಎರಡೂ ನೆಲೆಗಳಲ್ಲಿ ಹೊಸ ರಚನೆಯನ್ನು ರೂಪಿಸಿದವರಾಗಿದ್ದಾರೆ. ದಾಸ ಸಾಹಿತ್ಯ ಸಂಗೀತ, ನೃತ್ಯ ಹಾಗೂ ತತ್ತ್ವಸಿದ್ಧಾಂತಗಳನ್ನೊಳಗೊಂಡ ಸಾಹಿತ್ಯ ಪ್ರಕಾರವಾಗಿದೆ. ವ್ಯಾಸರಾಯರಿಂದ ಹಿಡಿದು ಪುರಂದರದಾಸರು, ಕನಕದಾಸರನ್ನು ಮುಖ್ಯವಾಗಿಟ್ಟುಕೊಂಡು ಇತರ ದಾಸರ ಹಾಡುಗಳ ವಿಶ್ಲೇಷಣೆಯ ಮೂಲಕ ಜೀವನ ನಿಷ್ಠೆ, ಸಮಾಜ ವಿಮರ್ಶೆ, ನೀತಿಬೋಧನೆಗೆ ಒತ್ತು ಕೊಟ್ಟಿರುವುದನ್ನು ನಿರೂಪಿಸಲಾಗಿದೆ. 'ದಯವೇ ಧರ್ಮದ ಮೂಲ'ವೆಂದ ವಚನಸಾಹಿತ್ಯ, 'ಈಸಬೇಕು ಇದ್ದು ಜಯಿಸಬೇಕು' ಎಂದು ಎಚ್ಚರಿಸುವ ದಾಸಸಾಹಿತ್ಯ ಹೊಸ ಸಮಾಜವನ್ನು ಕಟ್ಟಬಯಸಿದ ಹಂಬಲವುಳ್ಳದ್ದಾಗಿತ್ತು ಎಂಬುದು ಸ್ಪಷ್ಟ. ಭಕ್ತಿಯ ಮೂಲಕ ಜೀವನದ ಎಲ್ಲಾ ಮಗ್ಗುಲುಗಳನ್ನು ಸ್ಪರ್ಶಿಸಿ, ಲೋಕಸಂಚಾರದಿಂದ ಅಪಾರ ಲೋಕಾನುಭವವನ್ನು ಕಂಡುಕೊಂಡಿದ್ದ ಈ ಅನುಭಾವಿಗಳ ವೈಚಾರಿಕ ಚಿಂತನೆಗಳು, ವೈಚಾರಿಕ ಕ್ರಾಂತಿಗೆ ಕಾರಣವಾಗಿವೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ಎಚ್.ಬಿ.ಎಲ್.ರಾವ್ ಅವರ ಪ್ರಧಾನ ಸಂಪಾದಕತ್ವದಲ್ಲಿ 'ಅನುಭಾವ ಸಾಹಿತ್ಯದ ಅನನ್ಯತೆ' ಕೃತಿಯು ೨೦೧೩ ರಲ್ಲಿ ಪ್ರಕಟಗೊಂಡಿದೆ. ಈ ಕೃತಿಯು ಮುಂಬೈನಲ್ಲಿ ನಡೆದ ಅನುಭಾವ ಸಾಹಿತ್ಯ ಸಮ್ಮೇಳನದ ನೆನಪಿನ ಸಂಚಿಕೆಯಾಗಿದ್ದು, ಒಂಬತ್ತು ಲೇಖನಗಳನ್ನು ಒಳಗೊಂಡಿದೆ. ಉಪನಿಷತ್ತು ಮತ್ತು ವಚನಸಾಹಿತ್ಯ, ದಾಸಸಾಹಿತ್ಯ ಮತ್ತು ವಚನಸಾಹಿತ್ಯ, ತತ್ವಪದಗಳು ಮತ್ತು ವಚನಸಾಹಿತ್ಯ ಎಂಬ ಲೇಖನಗಳನ್ನು ಮುಖ್ಯವಾಗಿ ನಾನು ಗಮನಿಸಿದ್ದೇನೆ. ವಚನಸಾಹಿತ್ಯ, ದಾಸಸಾಹಿತ್ಯ, ತತ್ವಪದ ಸಾಹಿತ್ಯದಲ್ಲಿ ನಾವು ಕಾಣುವ ಅನುಭಾವದ ಚಿಂತನೆಗಳಿಗೆ ಉಪನಿಷತ್ತುಗಳೇ ಮೂಲವೆಂಬುದು ಸ್ಪಷ್ಟವಾಗಿ ಅರ್ಥವಾಗುತ್ತದೆ. ಮೂಲತಃ ಬದುಕಿನ ಶೋಧವಾದ ಉಪನಿಷತ್ತುಗಳು ದಾಸರ ಕಾಲಕ್ಕೆ ಸಂಸ್ಕೃತ ಪಂಡಿತರ ಪಾಂಡಿತ್ಯ ಪ್ರದರ್ಶನದ ಸಾಧನಗಳಾಗಿದ್ದವು. ದಾಸರು, ಭಕ್ತಿಯ ಮನೋಧರ್ಮಕ್ಕೆ ಬದುಕನ್ನು ಕ್ರಿಯೆಯನ್ನಾಗಿಸಿ, ಸ್ವಾರ್ಥದ ಚಿಂತನೆಗಳನ್ನು ಕಳೆದುಕೊಂಡವರು. ದಾಸರು, ತತ್ವಪದಕಾರರು ಮನೆಯ ಚೌಕಟ್ಟನ್ನು ಮೀರಿ, ವಿಶ್ವಮಾನವತ್ವದ ಕಡೆಗೆ ಸಾಗಿದ್ದಾರೆ. ಬೌದ್ಧಿಕವಾಗಿ ಮೌನವಾಗಿದ್ದ ಜನತೆಗೆ ಆತ್ಮಸ್ಥೈರ್ಯ ತುಂಬುವ ಮೂಲಕ ಜನತೆಯ ಧ್ವನಿಯಾಗಿ, ಪ್ರೇರಕ ಶಕ್ತಿಯಾಗಿ ಅನುಭಾವ ಪರಂಪರೆ ಬೆಳೆದು ಬಂದಿದೆ ಎಂಬುದು ಇಲ್ಲಿನ ಆಶಯವಾಗಿದೆ.

ದೇವಕನ್ನಿಕಾ. ಡಿ. ನಗರಕರ ರವರು 'ಕನ್ನಡ ಸಾಹಿತ್ಯದಲ್ಲಿ ಅನುಭಾವ' ಕೃತಿಯನ್ನು ೨೦೧೪ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯು ಕಾಗವಾಡ ಶಿವಾನಂದ ಕಾಲೇಜಿನಲ್ಲಿ ನೆಡೆದ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳ ಸಂಪುಟವಾಗಿದೆ. ಇದರಲ್ಲಿ ಇಪ್ಪತ್ಮೂರು ಪ್ರಬಂಧಗಳು ಇದ್ದು, ಅನುಭಾವದ ಅರ್ಥ, ಪರಿಕಲ್ಪನೆ, ವಚನಸಾಹಿತ್ಯದಲ್ಲಿ ಅನುಭಾವ, ದಾಸಸಾಹಿತ್ಯದಲ್ಲಿ

ಅನುಭಾವ, ತತ್ವಪದ ಸಾಹಿತ್ಯದಲ್ಲಿ ಅನುಭಾವ ಹಾಗೂ ಜನಪದ ಸಾಹಿತ್ಯದಲ್ಲಿ ಅನುಭಾವ ಎಂದು ಐದು ಭಾಗಗಳಲ್ಲಿ ವರ್ಗೀಕರಿಸಲಾಗಿದೆ. ವಚನಸಾಹಿತ್ಯದಲ್ಲಿ ಅನುಭಾವ ಎಂಬ ಶೀರ್ಷಿಕೆಯಡಿಯಲ್ಲಿರುವ ಒಂಬತ್ತು ಲೇಖನಗಳು ಶಿವಶರಣರ ವಚನಗಳಲ್ಲಿನ ಅನುಭಾವಿಕ ನೆಲೆಗಳನ್ನು ಗುರುತಿಸಿದ್ದಾರೆ. ಅದರಲ್ಲಿ ಅಲ್ಲಮನ ವಚನಗಳಲ್ಲಿ ಅಡಕವಾಗಿರುವ ದೇಹ ಮೀಮಾಂಸೆಯನ್ನು ತಿಳಿಸಿಕೊಡುತ್ತವೆ. ದಾಸಸಾಹಿತ್ಯ ಭಾಗದಲ್ಲಿ ಹರಿದಾಸರ ಕೀರ್ತನೆ, ಉಗಾಭೋಗಗಳಲ್ಲಿ ಅನುಭಾವದ ನೆಲೆಗಳನ್ನು ಗುರುತಿಸಿದ್ದಾರೆ. ಜೊತೆಗೆ ಮಹಿಳಾ ದಾಸಸಾಹಿತ್ಯದಲ್ಲಿನ ಅನುಭಾವದ ಸ್ವರೂಪವನ್ನು ನಿರೂಪಿಸಲು ಯತ್ನಿಸಿದ್ದಾರೆ. ತತ್ವಪದ ಸಾಹಿತ್ಯದಲ್ಲಿ ಜಾತ್ಯಾತೀತ ಮನೋಭಾವ, ಭಾವೈಕ್ಯತೆಯ ಪ್ರತೀಕವಾಗಿ ಎಲ್ಲಾ ಮತದ ಅನುಭಾವಿಗಳು ತನ್ನೊಳಗೆ ತನ್ನನ್ನು ಅರಸಿಕೊಳ್ಳುವ ಮೂಲಕ ಅನುಭಾವದ ನೆಲೆಗೆ ತಲುಪಬೇಕೆಂದು ಹೇಳಿದ್ದಾರೆ.

ತನ್ನ ತಾ ತಿಳಿಯುವುದೇ ಅನುಭಾವವೆಂಬುದು ಎಲ್ಲಾ ದಾರ್ಶನಿಕರ ಅಭಿಪ್ರಾಯವಾಗಿದೆ. ಬದುಕಿನ ಕ್ರಿಯಾಶೀಲತೆಯ ಮೂಲಕ ಆತ್ಮವಿಕಾಸವನ್ನು ಸಾಧಿಸಿ, ಲೌಕಿಕ ಬದುಕನ್ನು ಹಸನುಗೊಳಿಸಬೇಕೆಂಬ ನೆಲೆಯಲ್ಲಿ ಅನುಭಾವದ ನೆಲೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ.

'ವಚನ ಸಂಸ್ಕೃತಿ–ಸಾಹಿತ್ಯ ಸಂಗತಿ' ಕೃತಿಯನ್ನು ಎಸ್.ಜಿ.ಸಿದ್ಧರಾಮಯ್ಯ ಅವರು ೨೦೧೩ ರಲ್ಲಿ ಪ್ರಕಟಿಸಿದ್ದಾರೆ. ಪ್ರಸ್ತುತ ಈ ಕೃತಿಯಲ್ಲಿ ೧೨ನೇ ಶತಮಾನದಲ್ಲಿ ಸಂಘಟಿತವಾಗಿ ನಡೆದ ಅರಿವಿನ ಆಂದೋಲನವನ್ನು ವಚನ ಚಳುವಳಿಯ ಮೂಲಕ ಹೇಳಿದ್ದಾರೆ. 'ಕ್ರಿ ಇಲ್ಲದ ಅರಿವು ಹೀನವಾಗಿಪ್ಪುದು' ಎಂಬ ಅನುಭವದಿಂದ ಬದುಕಿನ ದಾರಿಯನ್ನು ಕಂಡುಕೊಂಡಿದೆ. ಯಾವುದೇ ಕಾಯಕವು ಪ್ರತ್ಯೇಕವೂ, ಸ್ವಯಂ ಪರಿಪೂರ್ಣವು ಆದವುಗಳಲ್ಲ. ಕಾಯಕಗಳು ಪರಸ್ಪರ ಪೂರಕಗಳಾಗಿವೆ. ಸಮಾನತೆಯ ಆಶಯದೊಂದಿಗೆ ಬದುಕಿನ ಕಡೆಗೆ ತುಡಿದ ವಚನ ಚಳುವಳಿ, ಅರಿವಿನ ಆಂದೋಲನವಾಗಿದೆ ಎಂಬ ಅಭಿಪ್ರಾಯವಿಲ್ಲಿದೆ.

ವಿ.ಸೀತಾರಾಮಯ್ಯ ಮತ್ತು ಜಿ. ವೆಂಕಟಸುಬ್ಬಯ್ಯ ಅವರ ಸಂಪಾದಕತ್ವದಲ್ಲಿ 'ದಾಸಸಾಹಿತ್ಯ' ಕೃತಿಯು ೨೦೧೩ ರಲ್ಲಿ ಪ್ರಕಟಗೊಂಡಿದೆ. ದಾಸಸಾಹಿತ್ಯದ ಒಟ್ಟು ಆಶಯವೇ ಈ ಕೃತಿಯ ವಸ್ತುವಾಗಿದೆ. ಹರಿದಾಸ ಸಾಹಿತ್ಯ ಪ್ರಕಾರಗಳಾದ ಕೀರ್ತನೆ, ಸುಳಾದಿ, ಉಗಾಭೋಗಗಳ ಮೂಲಕ ಕರ್ಮ–ಭಕ್ತಿ–ಜ್ಞಾನಗಳನ್ನು ಒಂದಾಗಿಸಿದ್ದಾರೆ. ಜ್ಞಾನವೇ ಭಕ್ತಿ. ಜ್ಞಾನದಿಂದ ಕೂಡಿದ ಭಕ್ತಿಯೇ ಭಗವಂತನ ಭಕ್ತಿ ಎಂದು ಹೇಳಿದ್ದಾರೆ. ದಾಸ ಸಾಹಿತ್ಯದಲ್ಲಿ ಕರ್ಮ, ಜ್ಞಾನಗಳಿಗಿಂತ, ಜ್ಞಾನಯುಕ್ತ ಭಕ್ತಿಗೆ ಪ್ರಾಶಸ್ತ್ಯವಿದೆ. ಗೇಯ ಗುಣವಿರುವ ಈ ಪದಗಳು ಆಧ್ಯಾತ್ಮ ವಿದ್ಯೆಯ ಸಂಪರ್ಕದಿಂದ ವಂಚಿತರಾಗಿದ್ದ ಜನರನ್ನು ಸ್ಪಂದಿಸಿದವು. ಇವು ನಿತ್ಯ ಬದುಕಿನಲ್ಲಿ ಸಜ್ಜನಿಕೆಯನ್ನು, ಸಾತ್ವಿಕತೆಯನ್ನು, ಸಭ್ಯತೆಯನ್ನು, ಸಮಾಧಾನವನ್ನು ಉದ್ದೀಪಿಸುವ ಮೂಲಕ, ಹೊಸದೊಂದು ಸುಸಂಸ್ಕೃತ ಸಮಾಜದ ನಿರ್ಮಾಣದಲ್ಲಿ ಕ್ರಿಯಾತ್ಮಕವಾಗಿ ದಾಸಸಾಹಿತ್ಯ ತೊಡಗಿಕೊಂಡಿದೆ.

ಎಚ್.ಎಸ್.ವೆಂಕಟೇಶಮೂರ್ತಿಯವರ 'ಕೀರ್ತನಕಾರರು' ಕೃತಿಯು ೨೦೧೩ರಲ್ಲಿ ಪ್ರಕಟಗೊಂಡಿದೆ. ಇಲ್ಲಿ 'ಭಕ್ತಿ' ಮುಖ್ಯವಾಗಿ ಕಂಡು ಬರುತ್ತದೆ. ವಿಶ್ವದ ಮೂಲಭೂತ ಸತ್ಯದ ಅರಿವಿಗೆ, ಭಕ್ತಿಮಾರ್ಗ

ಸುಲಭ ದಾರಿ ಎಂಬುದು ಹರಿದಾಸರ ಅಭಿಪ್ರಾಯವೆಂಬುದನ್ನು ಹೇಳಿದ್ದಾರೆ. ಸಂಸಾರದ ನಿಸ್ಸಾರತೆ, ನಶ್ವರತೆಗಳನ್ನು ಎತ್ತಿ ಹಿಡಿದಿದ್ದಾರೆ. ಲೌಕಿಕ ಭೋಗದಲ್ಲಿ ತೊಡಗಿರುವ ವ್ಯಕ್ತಿಯನ್ನು ಶಾಶ್ವತ ಸುಖದ ಕಡೆ ಕೊಂಡ್ಯೊಯುವುದು ಅನುಭಾವಿ ಸಂತರ ಗುರಿಯಾಗಿದೆ. ವೈಯಕ್ತಿಕ ಮೋಕ್ಷದ ಸ್ವಾರ್ಥಕ್ಕೆ ಸೀಮಿತವಾಗದೆ, ಇಡೀ ಒಂದು ಸಮಾಜದ ಉತ್ಥಾನಕ್ಕೆ ಪ್ರಯತ್ನಿಸಿದ ಈ ಭಕ್ತಿ ಪರಂಪರೆಯ ದೃಷ್ಟಿ ವಿಶಿಷ್ಟವಾದುದು ಹಾಗೂ ಸಾಮಾಜಿಕವಾಗಿ ಮಹತ್ವವಾದದ್ದಾಗಿದೆ.

**ಲೇಖನಗಳು**

ವೀರೇಶ ಬಡಿಗೇರ ಅವರ 'ತತ್ವಪದಕಾರರಲ್ಲಿ ವಿದ್ಯೆಯ ಸಂಕಥನ' ಎಂಬ ಲೇಖನ, ಹೊಸತು ವಾಚಿಕೆಯಲ್ಲಿ ಮಾರ್ಚ್-೨೦೦೯ ರಲ್ಲಿ ಪ್ರಕಟಗೊಂಡಿದೆ. ಇವರು ತತ್ವಪದಕಾರರು ಅಕ್ಷರ ವಿದ್ಯೆಗಿಂತ ಅರಿವಿನ ವಿದ್ಯೆಗೆ ಮಹತ್ವ ಕೊಟ್ಟಿರುವುದನ್ನು ಈ ಲೇಖನದಲ್ಲಿ ವಿಶ್ಲೇಷಿಸಿದ್ದಾರೆ. 'ವಿದ್ಯೆ' ಎನ್ನುವುದು ಕಲಿಯುವುದಾಗಿರದೆ, ತಿಳಿಯುವುದಾಗಿತ್ತು. ಗ್ರಂಥಸ್ಥ ಜ್ಞಾನವನ್ನು ಅಲ್ಲಗಳೆದು ಜನೋಪಯೋಗಿ ಜ್ಞಾನವನ್ನು ಒಪ್ಪಿದ್ದರು. ಇದರಲ್ಲಿ ಯಾವುದೇ ಫಲಾಪೇಕ್ಷೆಯೂ ಇರದ ಭಾವನೆ ಅವರದಾಗಿತ್ತು ಎಂದು ಚರ್ಚಿಸಿದ್ದಾರೆ. ವಿದ್ಯೆಯ ಸಾಂಪ್ರದಾಯಿಕತೆಯನ್ನು ಮೀರಿದ ಇವರಿಗೆ, ಸ್ವ ಅನುಭವದಿಂದ ಪಡೆಯುವ ಜ್ಞಾನವೇ ದೊಡ್ಡದಾಗಿತ್ತು. ಸ್ವ ಅನುಭವದಿಂದ ಹುಟ್ಟಿದ ತಿಳುವಳಿಕೆ ಹೇಗೆ ಮಾನವೀಯತೆಗೆ ಕಾರಣವಾಗುತ್ತದೆ ಎಂಬುದನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ಲೇಖನದುದ್ದಕ್ಕೂ ಚರ್ಚಿಸಿದ್ದಾರೆ. ಆದರೆ ವಸಾಹತುಶಾಹಿ ಕಾಲದಲ್ಲಿನ ಶಿಕ್ಷಣ ಕ್ರಮದಲ್ಲಿನ ಬದಲಾವಣೆಯು ಭಾರತದಲ್ಲಿ ಪಾರಂಪರಿಕವಾಗಿದ್ದ ಮತ್ತು ಮೌಖಿಕ ಮೂಲವಾಗಿದ್ದ ಜ್ಞಾನಕ್ಕೆ ಅಕ್ಷರದ ಮೂಲಕ ಅಧಿಕೃತತೆಯನ್ನು ತಂದಿತು. ಮೌಖಿಕ ಜ್ಞಾನಕ್ಕೆ ಅದರಲ್ಲೂ ಅಂತರಂಗದ ಅರಿವಿನ ಜ್ಞಾನಕ್ಕೆ ಮಹತ್ವ ಕೊಟ್ಟ ತತ್ವಪದಕಾರರಿಗೆ, ಪ್ರಭುತ್ವವನ್ನು ವಿರೋಧಿಸುವ ಮಾರ್ಗವೂ ಆಗಿತ್ತೆಂಬುದನ್ನು ಉದಾಹರಣೆಗಳ ಸಮೇತ ಲೇಖನದುದ್ದಕ್ಕೂ ಚರ್ಚಿಸಿದ್ದಾರೆ.

ಲಿಂಗದೇವರು ಹಳೆಮನೆಯವರ ಹಿಂದಣ ಅನಂತ ಕೃತಿಯಲ್ಲಿನ 'ವಚನಸಾಹಿತ್ಯ ಮತ್ತು ಸಮುದಾಯ ಶಿಕ್ಷಣ' ಎಂಬ ಲೇಖನದಲ್ಲಿ ವಚನಸಾಹಿತ್ಯದ ಉದ್ದೇಶವೇ ಲೋಕಶಿಕ್ಷಣವೆಂಬ ಅರ್ಥವುಳ್ಳದ್ದು ಎಂದಿದ್ದಾರೆ. ಲೋಕಶಿಕ್ಷಣ ಎನ್ನುವುದನ್ನು 'ಸಮುದಾಯ ಶಿಕ್ಷಣ' ಎನ್ನುವ ಅರ್ಥದಲ್ಲಿ ಬಳಸಿದ್ದಾರೆ. ಭಾರತೀಯ ಜ್ಞಾನ ಪರಂಪರೆ ಮೌಖಿಕವಾಗಿ ಬೆಳೆದಿದ್ದಾಗಿದೆ. ಈ ಮೌಖಿಕ ಪರಂಪರೆ ಲೋಕಜ್ಞಾನದ ಅನುಭವದ ನೆಲೆಯಲ್ಲಿ, ಜಾನಪದ ಬುದ್ಧಿಮತ್ತೆಯ ನೆಲೆಯಲ್ಲಿ, ಸಮುದಾಯದ ಅನುಭವದ ನೆಲೆಯಲ್ಲಿ ಹುಟ್ಟಿಕೊಂಡಿರುವಂಥಹದ್ದಾಗಿದೆ. ಇವುಗಳು ಸ್ಥಳೀಯ ಜ್ಞಾನ ಶಾಖೆಗಳಾಗಿವೆ. ಅಕ್ಷರ ವಿಕಾಸಗೊಂಡು ಪಟ್ಟಬದ್ರ ಹಿತಾಶಕ್ತಿಗಳ ಹಿಡಿತದಿಂದ ಹೊರಬಂದ ವಚನ ಪರಂಪರೆ, ಕೀರ್ತನ ಪರಂಪರೆ, ಸೂಫಿ ಪರಂಪರೆ, ಸಂತ ಪರಂಪರೆಗಳು ಅನುಭವದ ಮತ್ತು ಭಕ್ತಿಯ ಮೂಲದಿಂದ ಬಂದವುಗಳಾಗಿವೆ. ಇವು ಸ್ವರೂಪದಲ್ಲಿ ಭಿನ್ನವಾಗಿದ್ದರೂ, ಉದ್ದೇಶದಲ್ಲಿ ಒಂದೇ ಅಭಿಪ್ರಾಯ ಹೊಂದಿವೆ. ಆ ಉದ್ದೇಶ ತಮ್ಮ-ತಮ್ಮ ಸಮುದಾಯಗಳಲ್ಲಿ ಶಿಕ್ಷಣ ನೀಡುವುದಾಗಿದೆ. ಇವತ್ತಿನ ಶಿಕ್ಷಣದಂತೆ ಓದು, ಬರಹ ಮತ್ತು ಲೆಕ್ಕಾಚಾರಕ್ಕೆ ಸೀಮಿತವಾದದ್ದಲ್ಲ. ವ್ಯಕ್ತಿಯನ್ನು ಸತ್ಯಮಾರ್ಗದಲ್ಲಿ ಸಾಗಲು ಪ್ರೇರೇಪಿಸುವಂಥವುಗಳಾಗಿವೆ. ಸಮುದಾಯ ಶಿಕ್ಷಣವೆಂದರೆ ಜಾತಿ,

ಜನಾಂಗ, ಧರ್ಮ, ನಂಬಿಕೆಗಳ ಗಡಿಯಾಚೆ ಮಾನವ ಸಮುದಾಯದ ಬದುಕು ಎಂಬ ವಿಶಾಲಾರ್ಥದಲ್ಲಿ ಬಳಕೆಗೊಂಡಿದೆ.

ಬಿ.ಮಹಾದೇವಪ್ಪನವರ 'ಕಲ್ಯಾಣದ ಶಿವಶರಣರಲ್ಲಿ ಜ್ಞಾನಕ್ರಿಯೆಗಳ ಸಮನ್ವಯತೆ' ಎಂಬ ಲೇಖನವು ನಡೆ-ನುಡಿ ಒಂದಾದಲ್ಲಿ ಜ್ಞಾನ-ಕ್ರಿಯೆಗಳ ಸಮನ್ವಯತೆ ಕಾಣುತ್ತದೆ ಎಂದಿದ್ದಾರೆ. ಇಲ್ಲಿ ಶಿವಶರಣರ ಜೀವನ ವೃತ್ತಾಂತಗಳನ್ನು ಉದಾಹರಣೆಯಾಗಿ ಬಳಸಿಕೊಂಡು, ವಚನಗಳ ಮೂಲಕ ನಾವು ಮಾಡುವ ಕೆಲಸ ನಮ್ಮ ವ್ಯಕ್ತಿತ್ವವನ್ನು ನಿರೂಪಿಸುತ್ತದೆ ಎನ್ನುವುದನ್ನು ಹೇಳುತ್ತಾರೆ. ಬಸವಣ್ಣನ ಮನೆಗೆ ಕಳ್ಳ ಬಂದದ್ದು, ಆಯ್ದಕ್ಕಿ ಲಕ್ಕಮ್ಮ ಗಂಡನಿಗೆ ಹೆಚ್ಚು ಅಕ್ಕಿಯ ಆಸೆ ಬೇಡ ಎಂದು ಬುದ್ಧಿವಾದ ಹೇಳಿದ್ದು, ನುಲಿಯ ಚಂದಯ್ಯ ತನ್ನ ಇಷ್ಟಲಿಂಗ ಕಳಚಿ ಬಿದ್ದಾಗಿನ ಘಟನೆಗಳೊಂದಿಗೆ, ನಮ್ಮ ನಡೆ-ನುಡಿಗಳು ಶುದ್ಧವಾಗಿದ್ದರೆ ದೇವರಿಗೆ ಸವಾಲು ಹಾಕುವ ಆತ್ಮಸ್ಥೈರ್ಯ ಮೂಡುತ್ತದೆ ಎನ್ನುವುದನ್ನು ವಚನಕಾರರ ಜೀವನ ದೃಷ್ಟಾಂತಗಳೊಂದಿಗೆ ಹೇಳಿದ್ದಾರೆ.

ರಹಮತ್ ತರೀಕೆರೆಯವರ 'ಕತ್ತಿಯಂಚಿನ ದಾರಿ' ಎಂಬ ಪುಸ್ತಕದಲ್ಲಿರುವ 'ಮುಸ್ಲಿಂ ತತ್ವಪದಕಾರರು: ಹೀಗೆನ್ನುವುದು ಯಾಕೆ ಕಷ್ಟ?' ಎಂಬ ಲೇಖನದಲ್ಲಿ ಆರೂಢ, ಅನುಭಾವಿ ಅಧ್ಯಯನಗಳಲ್ಲಿ ಕಾಣಿಸಿರುವ ಮುಸ್ಲಿಂ ತತ್ವಪದಕಾರರು ಈ ಪರಿಭಾಷೆಯ ಹಿಂದೆ ೨ ಮುಖ್ಯ ತಾತ್ವಿಕ ಮತ್ತು ಸಾಂಸ್ಕೃತಿಕ ಒತ್ತಾಸೆಗಳಿರುವುದನ್ನು ಗುರುತಿಸಿದ್ದಾರೆ.

೧. ಜಾತಿಯ ಹಿನ್ನೆಲೆಯ ಸಾಂಸ್ಕೃತಿಕ ಐಡೆಂಟಿಯ ವಿಚಾರಧಾರೆಯು ಮುಖಾಮುಖಿ ಮಾಡಲು ಸೆಕ್ಯೂಲರಿಷ್ಟರು ಕನ್ನಡ ಅನುಭಾವಿ ಪರಂಪರೆಯನ್ನು ಮುಂದು ಮಾಡಿದ್ದು. ಅದು ಸಮಕಾಲೀನ ರಾಜಕೀಯ ಹತಾಶೆಯ ಸ್ಥಿತಿಯಾಗಿದೆ. ಮತ್ತು ವರ್ತಮಾನದ ಅಗತ್ಯಗಳಿಗನುಗುಣವಾಗಿ ಚರಿತ್ರೆಯನ್ನು ರೂಪಿಸಿಕೊಳ್ಳುವ ಮಾರ್ಗವಾಗಿದೆ.

೨. ಉದಾರವಾದಿ ಸಾಮರಸ್ಯ ವಾದವು ತನ್ನ ಗ್ರಹಿಕೆಯ ಆಳದಲ್ಲಿ ಹೇಗೆ ಮೂಲಭೂತವಾದ ತರ್ಕವನ್ನು ಹೊಂದಿದೆ ಎಂಬುದನ್ನು ವಿಶ್ಲೇಷಿಸುತ್ತಾರೆ.

ಎರಡನೇ ಅಂಶವನ್ನು ಈ ಲೇಖನ ಮುಖ್ಯವಾಗಿ ಸಾಂಸ್ಕೃತಿಕ ಸಂದರ್ಭದಲ್ಲಿಟ್ಟು ಚರ್ಚಿಸುತ್ತದೆ. ಒಟ್ಟಿನಲ್ಲಿ ಅನುಭಾವಿಗಳೆಂಬ ಬಹುರೂಪಿ ಆಕೃತಿಗಳು, ಏಕರೂಪಿ ಆಕೃತಿಗಳ ಹಠದಲ್ಲಿ ಅನಾಥವಾಗುತ್ತಿರುವ ಇಂದಿನ ಸ್ಥಿತಿಯಲ್ಲಿ ಅನುಭಾವಿ ಪರಂಪರೆಯನ್ನು ಸಂಕರಶೀಲವಾದ ಅದರ ಎಲ್ಲಾ ಆಯಾಮಗಳ ಹಿನ್ನೆಲೆಯಲ್ಲಿ ಚರ್ಚಿಸಬೇಕಾದ ಅಗತ್ಯವನ್ನು ಈ ಲೇಖನ ಹೇಳುತ್ತದೆ.

'ಶಿವಶರಣರು-ಸೂಫಿಸಂತರು' ರಹಮತ್ ತರೀಕೆರೆಯವರ ಈ ಲೇಖನ ಗೊ.ರು.ಚನ್ನಬಸಪ್ಪನವರು ಸಂಪಾದಿಸಿದ ಶರಣರ ತತ್ತ್ವಚಿಂತನೆ ಎಂಬ ಪುಸ್ತಕದಲ್ಲಿ ೨೦೦೪ ರಲ್ಲಿ ಪ್ರಕಟಗೊಂಡಿದೆ. ಈ ಲೇಖನದಲ್ಲಿ ತಿಳಿವು, ಅರಿವು ಇವೆಲ್ಲಾ ಅನುಭಾವ ಪಂಥಗಳಲ್ಲಿ ಜ್ಞಾನಮಾರ್ಗಕ್ಕೆ ಸಂಬಂಧಿಸಿದ ಶಬ್ದಗಳು ಎನ್ನುವದನ್ನು ಚರ್ಚಿಸಿದ್ದಾರೆ. ಜ್ಞಾನವೆಂದರೆ ಸಾಧನೆಯ ಹಾದಿಯಲ್ಲಿ ಬರುವ ಅನುಭವ, ಅಧ್ಯಯನದಿಂದ ಗಳಿಸಿದ ಪಾಂಡಿತ್ಯ ಎಂಬರ್ಥವಲ್ಲ. ತನ್ನನ್ನು ತಾನೇ ತಿಳಿವ ಅನುಭವವೇ ಅನುಭಾವವಾದ. ಅರಿವು, ತಿಳಿವು, ಜ್ಞಾನ ಎಂಬ ಪರಿಕಲ್ಪನೆಗಳು, ಯೋಗದರ್ಶನ ಪರಂಪರೆಯ

ಭಾಗವಾಗಿವೆ. ಈ ಪರಂಪರೆಯಲ್ಲಿ ಶರಣರು, ಸೂಫಿಗಳು, ಆರೂಢರು, ತತ್ವಪದಕಾರರು, ಸ್ವರವಚನಕಾರರು ಎಂಬೆಲ್ಲಾ ಹೆಸರಲ್ಲಿ ಕರೆಯಲಾಗುವ ಸಾಧಕರು ಬರುತ್ತಾರೆ.

ಉಷಾ ಎಸ್.ಗದ್ದಗಿಮಠ ರವರ 'ಗದ್ದಗಿಮಠರ ದೃಷ್ಟಿಯಲ್ಲಿ ಕಾಯಕ ಶಿಕ್ಷಣ' ಎಂಬ ಲೇಖನದಲ್ಲಿ ಗದ್ದಗಿಮಠರು 'ಶಿವಶರಣರು' ಎಂಬ ಶಬ್ದವನ್ನು ವಿಶೇಷ ಅರ್ಥದಲ್ಲಿ ಗುರುತಿಸಿರುವುದನ್ನು ಹೇಳಿದ್ದಾರೆ. ಶಿವಶರಣರು ಕೇವಲ ಧರ್ಮೋಪದೇಶಕರಲ್ಲ, ಸಮಾಜಸೇವಕರು. ಇವರ ಪ್ರಕಾರ ಕಾಯಕವು ಒಂದು ಶಿಕ್ಷಣ ಪದ್ಧತಿಯಾಗಿದೆ. ವಿಚಾರ, ಭಾವ, ಕ್ರಿಯೆ, ಆರೋಗ್ಯಗಳ ಸಮ್ಮಿಶ್ರ ವ್ಯಾಪಾರವೇ ಕಾಯಕ ಶಿಕ್ಷಣವೆಂದಿದ್ದಾರೆ. ವಿರಕ್ತಮಠಗಳು, ಸಾಲಿಮಠಗಳು, ಓಲೆಮಠಗಳು, ಓದಿಸುವ ಮಠಗಳು ಮುಂತಾದ ವೀರಶೈವ ಮಠಗಳು ಕಾಯಕ ಶಿಕ್ಷಣದ ಕೇಂದ್ರಗಳಾಗಿದ್ದವು. ಈ ಮಠಗಳು ದಿನನಿತ್ಯ ಜೀವನದಲ್ಲಿ ಉಪಯುಕ್ತವೆನಿಸುವ ಸಾಮಾನ್ಯ ಜನರ ಜೀವನಕ್ಕೆ ಆಧಾರವನ್ನು ಕಲ್ಪಿಸುವ ಕಸುಬುಗಳನ್ನು ಕಲಿಸುತ್ತಿದ್ದರು. ಪುಸ್ತಕ ಜ್ಞಾನವನ್ನೊಳಗೊಂಡ ಕಾವ್ಯಗಳು, ಶಾಸ್ತ್ರಗಳನ್ನು ಕಲಿಸುವುದರ ಜೊತೆಗೆ ಕುಲಕಸುಬುಗಳು, ಕುಶಲಕರ್ಮಗಳನ್ನು ಕಲಿಸುತ್ತಿದ್ದರು. ಇಂತಹ ಹಲವಾರು ವಿಷಯಗಳ ಕಲಿಕೆಯಲ್ಲಿ ಮಠಗಳ ಪಾತ್ರ ಹಿರಿದಾಗಿದೆ ಎಂಬುದನ್ನು ಹೇಳಿದ್ದಾರೆ.

ಪಂಡಿತಾರಾಧ್ಯರ 'ಸಮಕಾಲೀನತೆ' ಪುಸ್ತಕದಲ್ಲಿರುವ 'ಜೀವನ ಶಿಕ್ಷಣ' ಎನ್ನುವ ಲೇಖನವು ೧೨ನೇ ಶತಮಾನದ ಶಿಕ್ಷಣ ಕ್ರಮ ಮತ್ತು ಇಂದಿನ ಶಿಕ್ಷಣ ಕ್ರಮಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸಿದ್ದಾರೆ. ಅಂದು ಶಿಕ್ಷಣವೆಂದರೆ, ಕಲಿಯುವುದು ಮತ್ತು ಕಲಿಸುವುದಾಗಿತ್ತು. ವಿದ್ಯಾರ್ಥಿಯಲ್ಲಿ ವಿನಯ, ವಿದೇಯತೆ, ಪ್ರಾಮಾಣಿಕತೆಯಂತಹ ಸದ್ಗುಣಗಳನ್ನು ಕಲಿಸುವಂತಹ ವಾತಾವರಣ ಕಲ್ಪಿಸುವುದು ಕೂಡ ಶಿಕ್ಷಣವೇ ಆಗಿತ್ತು. ಆದರೆ ಇಂದಿನ ಶಿಕ್ಷಣ ವ್ಯಕ್ತಿಯಲ್ಲಿ ವಿನಯ ಮೂಡಿಸುವ ಬದಲು ಅಹಂಕಾರವನ್ನು ಬೆಳೆಸುತ್ತಿದೆ. ಶಿಕ್ಷಣ ಪಡೆಯುವುದೇ ಕೇವಲ ಸಂಪಾದನೆಗಾಗಿ ಎನ್ನುವಷ್ಟಕ್ಕೆ ಸೀಮಿತಗೊಂಡಿದೆ. ಶಿವಶರಣರು ನಿರ್ಮಿಸಿದ ಅನುಭವಮಂಟಪದ ಮೂಲಕ, ವ್ಯಕ್ತಿಯ ದೇಹ-ಮನಸ್ಸು-ಬುದ್ಧಿಗಳನ್ನು ಸಂಸ್ಕಾರಗೊಳಿಸುವಂತಹ ಶಿಕ್ಷಣ ನೀಡಲಾಗುತ್ತಿತ್ತು. ಅಂದು ಜ್ಞಾನವೆಂದರೆ ಕೇವಲ ವಿಷಯ ಸಂಗ್ರಹವಾಗಿರಲಿಲ್ಲ. ಒಳಿತು-ಕೆಡುಕುಗಳ ವಿವೇಚನೆಯಾಗಿತ್ತು. ಇಂತಹ ಮೌಲ್ಯಾಧಾರಿತ ಜೀವನ ಶಿಕ್ಷಣ ವಚನಕಾರರ ಕಾಲದಲ್ಲಿ ದೊರೆಯುತ್ತಿತ್ತು. ಆದರೆ ಇಂದಿನ ಶಿಕ್ಷಣ ಅಂಥ ವ್ಯಕ್ತಿತ್ವವನ್ನು ಬೆಳೆಸುವಲ್ಲಿ ವಿಫಲವಾಗಿದೆ ಎಂಬುದನ್ನು ಹೇಳುತ್ತಾರೆ. ಇದು ಇಂದಿನ ವಾಸ್ತವಕ್ಕೆ ಹತ್ತಿರವಾದ ಮಾತಾಗಿದೆ.

ಶ್ರೀಧರ ಹೆಗಡೆ ಭದ್ರನ್ ರವರ 'ಅವಿರತ' ಎನ್ನುವ ಕೃತಿಯಲ್ಲಿರುವ 'ಅನುಭಾವ: ಪುರಂದರದಾಸರ ಕೀರ್ತನೆಗಳ ಮುಖೇನ' ಎನ್ನುವ ಲೇಖನದಲ್ಲಿ ದಾಸಸಾಹಿತ್ಯದಲ್ಲಿ ಆಧ್ಯಾತ್ಮದ ಸಾಧನೆಗೆ ಜ್ಞಾನದ ಚರ್ಚೆಗಳಿಗಿಂತಲೂ ಭಕ್ತಿಗೆ ಹೆಚ್ಚು ಪ್ರಾಶಸ್ತ್ಯ ನೀಡಿರುವುದು ಕಂಡು ಬರುತ್ತದೆ. ಇಲ್ಲಿ ಅನುಭಾವವೆಂದರೆ ದೈವೀ ಪ್ರಜ್ಞೆಯಲ್ಲಿ ಬೆರೆತುಕೊಳ್ಳುವವರಗಿನ ಸ್ಥಿತಿ ಮತ್ತು ತನ್ನನ್ನು ತಾನೂ ಅರಿತುಕೊಳ್ಳುವವರಗಿನ ಸ್ಥಿತಿ ಎಂದು ಹೇಳಿದ್ದಾನೆ. ಅನುಭಾವ, ಸ್ವೀಕರಣೆ ಹಾಗೂ ನಿರಾಕರಣೆ ಎರಡು ನೆಲೆಯಲ್ಲಿ ಬಳಕೆಗೆ ಬಂದಿದೆ. ನಿರಾಕರಣಾತ್ಮಕ ನೆಲೆಯಲ್ಲಿ ನಾವಿರುವ ಪ್ರಪಂಚವನ್ನು ಅಪೂರ್ಣವೆಂದು, ಅಸತ್ಯವೆಂದು

ನಿರಾಕರಿಸುವ ಮೂಲಕ ಆಪರೋಕ್ಷವಾದ ದಿವ್ಯಾವನುಭವವನ್ನು ಪಡೆದುಕೊಳ್ಳುವಂತಹ ಭಾವ ಇಲ್ಲಿದೆ. ವ್ಯಕ್ತಿಯ ವ್ಯಷ್ಠಿ ಪ್ರಜ್ಞೆಯ ಬದುಕಿನ ಅವಸ್ಥೆಗಳು ಪ್ರಾಮಾಣಿಕವಾಗಿರಬೇಕು ಇದರ ಮೂಲಕ ಸಮಷ್ಠಿ ಹಿತವನ್ನು ಕಾಣಬಹುದೆಂಬ ಅಭಿಪ್ರಾಯವಿಲ್ಲಿದೆ.

ಗುರುಪಾದ ಮರಿಗುದ್ಧಿಯವರ 'ಶಿಶುನಾಳ ಶರೀಫರ ತತ್ವಪದಗಳಲ್ಲಿ ಅನುಭಾವ' ಎಂಬ ಲೇಖನದಲ್ಲಿ ತತ್ವಪದಗಳು ದೇಶಿ ವೈಚಾರಿಕತೆ, ತಾತ್ವಿಕತೆಗಳನ್ನು ಒಳಗೊಂಡಿದ್ದು ಇಂದಿಗೂ ಪ್ರಸ್ತುತವೆನಿಸುತ್ತವೆ. ಪಾಶ್ಚಾತ್ಯ ಶಿಕ್ಷಣ ಮತ್ತು ಜೀವನ ವಿಧಾನಕ್ಕೆ ಅಂಟಿಕೊಂಡಿರುವ ಜನರ ಸಮಸ್ಯೆಗಳಿಗೆ ಹೊಸ ಸಾಧ್ಯತೆಗಳಾಗಿ ಕಂಡು ಬರುತ್ತವೆ. ಇಲ್ಲಿ ಅನುಭಾವವೆಂದರೆ ವಿಶಾಲವಾದ ಧಾರ್ಮಿಕ ದೃಷ್ಠಿಕೋನದಲ್ಲಿ, ಜೀವನದ ಅನುಭವ ಮತ್ತು ನಿರಪೇಕ್ಷ ಜ್ಞಾನಗಳ ಕ್ರಿಯಾಶೀಲ ಬದುಕಿನ ಅನುಸಂಧಾನ ಎಂಬುದನ್ನು ಚರ್ಚಿಸಿದ್ದಾರೆ.

ಮಲ್ಲೇಪುರಂ ಜಿ. ವೆಂಕಟೇಶ ಅವರ 'ಅಲ್ಲಮ: ಅರಿವಿನೊಳಗಿನ ಅರಿವು' ಈ ಲೇಖನದಲ್ಲಿ ಅಲ್ಲಮನ ಅರಿವಿನ ಪರಿಕಲ್ಪನೆಯನ್ನು ಮೂರು ನೆಲೆಯಲ್ಲಿ ಗುರುತಿಸಿದ್ದಾರೆ. ಮೊದಲನೆಯದು ದೇಹ, ಎರಡನೆಯದು ಜೀವಭಾವ, ಮೂರನೆಯದು ಆತ್ಮಭಾವ. ಮೊದಲನೆಯದನ್ನು ಸಾಮಾನ್ಯ ಜ್ಞಾನ, ತಿಳುವಳಿಕೆ. ಎರಡನೆಯದನ್ನು ವಿಶೇಷ ಜ್ಞಾನ, ತನ್ನನ್ನು ತಾನು ತಿಳಿಯುವುದು. ಮೂರನೆಯದನ್ನು ಮಹಾಜ್ಞಾನ, ಅರಿವಿನೊಳಗಿನ ಅರಿವು ಎಂದು ಗುರುತಿಸಿದ್ದಾರೆ. ಇಲ್ಲಿ ಬುದ್ಧಿ, ಮನಸ್ಸು ಮತ್ತು ಅಹಂಕಾರಗಳೆಲ್ಲ ಮರೆಯಾಗಿ, ಅರಿವು ಅನುಭಾವವಾಗುತ್ತದೆ ಎಂದಿದ್ದಾರೆ.

'ತತ್ವಪದಗಳು: ಅನುಭಾವಿಕ ನೆಲೆ' ಈ ಲೇಖನದಲ್ಲಿ ತತ್ವಪದಗಳು 'ಸುಳ್ಳಿನ ಸಂಸಾರ' ಮತ್ತು 'ಪೊಳ್ಳಿನ ದೇಹ' ಈ ಎರಡು ಸಂಗತಿಗಳನ್ನು ಮುಖ್ಯ ಚರ್ಚೆಯನ್ನಾಗಿಸಿವೆ. ಮನುಷ್ಯನ ವರ್ತನೆಯಲ್ಲಿ ಸಂಸಾರ, ಐಶ್ವರ್ಯಗಳಿಗೆ ಮಿತಿ ಇದೆ ಎಂದು ತಮ್ಮ ಅನುಭವದಿಂದ ಕಂಡುಕೊಂಡಿದ್ದಾರೆ. ಅದಕ್ಕಾಗಿ ಇವುಗಳ ನಶ್ವರತೆಯನ್ನು ಹೇಳಿ, ಎಚ್ಚರ ಮೂಡಿಸುವ ಕೆಲಸ ಮಾಡಿದ್ದಾರೆ. ಇವರ ಪದಗಳ ಒಟ್ಟು ತತ್ವ ಮಾನವ ಬದುಕಿನ ತಿಳುವಳಿಕೆ ಆಗಿದೆ. ಗುರುವಿನ ಮೂಲಕ ಎಲ್ಲಾ ಸಂಕಟಗಳನ್ನು ಪರಿಹರಿಸಿಕೊಳ್ಳಬಹುದೆಂದಿದ್ದಾರೆ.

'ಎಲ್ಲಾ ಜಾತಿಯ ಮರಗಳ ಕಾಡು ತತ್ವಪದಕಾರರು' ಎಚ್.ಎಸ್.ಶಿವಪ್ರಕಾಶರವರ ಈ ಲೇಖನವು ಹೆಸರೇ ಸೂಚಿಸುವಂತೆ ಎಲ್ಲಾ ಜಾತಿಯ ಜನರನ್ನೊಳಗೊಂಡ ಅನುಭಾವಿಗಳ ಕೂಟವೆಂದೆ ಹೇಳಬಹುದು. ಎಲ್ಲಾ ಅನುಭಾವಿ ಪಂಥಗಳಲ್ಲಿ ಸ್ವೀಕರಿಸುವ ಹಾಗೂ ನಿರಾಕರಿಸುವ ಎರಡು ನೆಲೆಗಳು ಕಂಡು ಬರುತ್ತವೆ. ತತ್ವಪದಕಾರರಲ್ಲಿ ಮೇಲು ಅಥವಾ ಕೆಳ ಸಂಸ್ಕೃತಿಗಳ ವಿಚಾರದಲ್ಲಿ ಸ್ವೀಕಾರ ಭಾವವನ್ನು ತಾಳಿ, ಎಲ್ಲಾ ಬಾಹ್ಯ ಆಚರಣೆಗಳಲ್ಲಿ ಅನುಭವದ ಏಕತೆಯನ್ನು ಹುಡುಕುವವರಾಗಿದ್ದಾರೆ. ಬೇರೆ–ಬೇರೆ ಸಂಸ್ಕೃತಿ, ನಂಬಿಕೆಗಳ ಜನರ ನಡುವೆ ಇರುತ್ತಿದ್ದ ಇವರುಗಳು, ಜನರ ನಂಬಿಕೆ, ಆಚರಣೆಗಳನ್ನು ನಿರ್ಲಕ್ಷಿಸದೆ ಅನುಭಾವದ ಮೂಲಕ ಜನಪದ ಸಂಸ್ಕೃತಿಯನ್ನು ಉಳಿಸುವ ಪ್ರಯತ್ನ ಮಾಡಿದ್ದಾರೆ.

ಎಚ್.ಎಸ್.ರಾಘವೇಂದ್ರರಾವ್ ಅವರ ಸಂಪಾದಕತ್ವದಲ್ಲಿ ಬಂದ ಹೊಸತು ವಾಚಿಕೆಯಲ್ಲಿರುವ 'ಜ್ಞಾನ, ಅನುಭವ ಮತ್ತು ಸಾಹಿತ್ಯ' ಎನ್ನುವ ಲೇಖನದಲ್ಲಿ ಆಧುನಿಕ ಸಂದರ್ಭದಲ್ಲಿ 'ಜ್ಞಾನ' ಎಂಬ

ಶಬ್ದವನ್ನು ತಿಳುವಳಿಕೆ, ವಿವೇಕ ಎಂಬರ್ಥದಲ್ಲಿ ಬಳಸದೆ, knowledge ಎಂಬರ್ಥದಲ್ಲಿ ಬಳಸಲಾಗುತ್ತಿದೆ ಎಂದಿದ್ದಾರೆ. ಅನುಭವವೆಂಬುದು ಇಡೀ ವ್ಯಕ್ತಿತ್ವವನ್ನು ಒಳಗೊಳ್ಳುವಂಥದ್ದು, ಅಮೂರ್ತವಾದದ್ದು, ಎಣಿಕೆಗೆ ಸಿಗಲಾರದಂಥದ್ದಾಗಿದೆ. ಬಹುಶಃ ಜ್ಞಾನ ಮತ್ತು ಅನುಭವ ಒಟ್ಟಿಗೆ ಸೇರಿದಾಗ ಮಾತ್ರ ವಿವೇಕ ಮತ್ತು ಜೀವನ ದರ್ಶನ ಸಾಧ್ಯವಾಗುತ್ತದೆ. ಆದರೆ ವ್ಯಕ್ತಿ, ಬೌದ್ಧಿಕ ಜ್ಞಾನಕ್ಕೆ ಒಳಪಟ್ಟಾಗ ಸೀಮಿತ ಬೆಳವಣಿಗೆಯಿಂದ ಕುಬ್ಜನಾಗುತ್ತಾನೆ. ಆದ್ದರಿಂದ ಜ್ಞಾನ ಮತ್ತು ಅನುಭವಗಳು ಯಾವಾಗಲೂ ಘರ್ಷಣೆಯಲ್ಲಿಯೇ ತೊಡಗಿರುತ್ತವೆ ಎಂಬುದನ್ನು ಈ ಲೇಖನದಲ್ಲಿ ವಿಶ್ಲೇಷಿಸಲಾಗಿದೆ.

ಬಸವರಾಜ ಬಲ್ಲೂರು ಅವರ 'ಅನುಭವ ಮಂಟಪ ಮತ್ತು ಶಿಕ್ಷಣ' ಎಂಬ ಲೇಖನದಲ್ಲಿ ಶಿಕ್ಷಣದ ಚಾರಿತ್ರಿಕ ಮುಖಗಳನ್ನು ಪರಿಚಯಿಸುತ್ತಾ, ಶಿಕ್ಷಣವೆನ್ನುವುದು ಎಲ್ಲಾ ಸಮಸ್ಯೆಗಳಿಗೆ ಪರ್ಯಾಯವಾಗಿ ನಿಲ್ಲಬಲ್ಲ ಶಕ್ತಿ ಎಂದು ಹೇಳಲಾಗಿದೆ. ಭಾರತದಲ್ಲಿ ಶಿಕ್ಷಣಕ್ಕಿರುವ ಮಹತ್ವ ಮತ್ತು ಪ್ರಾಚೀನತೆ ಬೇರೆಯದಕ್ಕಿಲ್ಲ. ಆದರೂ ಇಂದಿನ ಶಿಕ್ಷಣ ಪದ್ಧತಿ ಬ್ರಿಟಿಷ್ ಮೂಲದ್ದಾಗಿದೆ. ಶಿಕ್ಷಣದ ಸಾರ್ವತ್ರಿಕರಣ ಕೂಡ ವಸಾಹತುಶಾಹಿಗಳಿಂದಲೇ ಆಯಿತೆಂದು ಹೇಳಲಾಗುತ್ತದೆ. ಆದರೆ ವಾಸ್ತವದಲ್ಲಿ ಅಕ್ಷರ, ಅರಿವು ಎಲ್ಲರ ಹಕ್ಕಿನ ಅಭಿವ್ಯಕ್ತಿಯಾಗಿ ಮೂಡಿ ಬಂದಿದ್ದು ೧೨ನೇ ಶತಮಾನದಲ್ಲಿ. ಅದು ವಿಶೇಷವಾಗಿ ಅನುಭವ ಮಂಟಪದ ಮೂಲಕ. ವಚನ ಸಾಹಿತ್ಯ ಸಮಾಜಮುಖಿಯಾಗಿ, ಸಾಮಾಜಿಕ ಉನ್ನತಿಗೆ ಕಾರಣವಾದರೆ, ಶಿಕ್ಷಣವೆನ್ನುವುದು ವ್ಯಕ್ತಿಮುಖಿಯಾಗಿ, ವ್ಯಕ್ತಿತ್ವ ಬೆಳವಣಿಗೆಗೆ ಸಹಾಯಕವಾಗಿದೆ. ಅಲ್ಲದೆ ಮಹಿಳಾ ಶಿಕ್ಷಣಕ್ಕೂ ಅವಕಾಶ ನೀಡಿದ್ದು ಇಲ್ಲಿನ ವಿಶೇಷ ಸಂಗತಿಯಾಗಿದೆ.

ಇಂದು ಶಿಕ್ಷಣ ವಲಯ ದ್ವಂದ್ವ ಸ್ಥಿತಿಯಲ್ಲಿದೆ. ವ್ಯಕ್ತಿತ್ವ ವಿಕಾಸಕ್ಕೆ ಮಹತ್ವ ನೀಡಿ, ಕಲೆ ಮತ್ತು ಸಮಾಜ ವಿಜ್ಞಾನಗಳನ್ನು ಕಡೆಗಣಿಸಿ ವೃತ್ತಿ ಆಧಾರಿತ ಶಿಕ್ಷಣ ಕೊಡಿಸದೆ, ನಿರುದ್ಯೋಗ ಸೃಷ್ಟಿಸುವ ಮೂಲಕ ವ್ಯಕ್ತಿಯಲ್ಲಿ ಭಯ, ಆಂತಕ, ಕೀಳರಿಮೆ ಬೆಳೆಸುತ್ತಿದೆ. ಆತ್ಮವಿಶ್ವಾಸವಿಲ್ಲದ ಶಿಕ್ಷಣದಿಂದ ಯುವಜನತೆಯನ್ನು ದುರ್ಬಲಗೊಳಿಸುತ್ತಿದೆ. ಅದರ ಬದಲು ಅವರನ್ನು ಸದೃಢರನ್ನಾಗಿಸುವ ಹಾಗೂ ಪ್ರಸ್ತುತ ಸಮಸ್ಯೆಗಳೊಂದಿಗೆ ಮುಖಾಮುಖಿಯನ್ನಾಗಿಸುವ, ಆತ್ಮಸ್ಥೈರ್ಯ ತುಂಬುವ ಶಿಕ್ಷಣದ ಅವಶ್ಯಕತೆ ಇದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

**ದಿನಪತ್ರಿಕೆಯಲ್ಲಿ ಪ್ರಕಟಗೊಂಡ ಲೇಖನಗಳು**

ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಜುಲೈ ೨೯, ೨೦೧೬ರಲ್ಲಿ ಬರಗೂರು ರಾಮಚಂದ್ರಪ್ಪನವರ 'ಉನ್ನತ ಶಿಕ್ಷಣದ ಹೆಸರಿನಲ್ಲಿ ಹೈಟೆಕ್ ಉದ್ಯಮ' ಎಂಬ ಲೇಖನ ಪ್ರಕಟಗೊಂಡಿದೆ. ಇವರು ಶಿಕ್ಷಣ ಕ್ಷೇತ್ರ ಯಾವತ್ತಿಗೂ ಯಾಂತ್ರಿಕವಾಗಬಾರದೆಂದಿದ್ದಾರೆ. ಮನುಷ್ಯನಿಗೆ ಮಾತು ತುಂಬಾ ಮುಖ್ಯ. ಅದಕ್ಕೆ ಅಧ್ಯಾಪಕ ಮತ್ತು ವಿದ್ಯಾರ್ಥಿ ನಡುವೆ ಸಂವಹನ ಇರುವುದು ಮುಖ್ಯ. ತರಗತಿಗಳಲ್ಲಿ ಸಂವಾದಿಸುವುದರಿಂದ, ಸ್ಪಷ್ಟನೆ ಪಡೆಯುವುದರಿಂದ ಶಿಕ್ಷಣ ಶುಷ್ಕ ಕ್ರಿಯೆಯಾಗುವುದಿಲ್ಲ. ಬೋಧನಾ ವಿಧಾನದಲ್ಲಿ 'ಪವರಪಾಯಿಂಟ್ ಪ್ರೆಸೆಂಟೆಷನ್' ಅಳವಡಿಸುವುದರಿಂದ ಕೇವಲ ಯಾಂತ್ರಿಕ ಕೌಶಲ ಬಳಕೆಯಾಗುತ್ತದೆಯೇ ಹೊರತು, ಮಾನವನ ಸ್ವತಂತ್ರ ಚಲನಶೀಲತೆಗೆ ಅವಕಾಶವಾಗುವುದಿಲ್ಲ. ಇಂತಹ ತಂತ್ರಜ್ಞಾನವನ್ನು ಬೋಧಾನ ಕ್ರಮಕ್ಕೆ ಅಳವಡಿಸುವುದು ಭ್ರಮಾಧೀನ ಸಂಭ್ರಮ ಎಂದಿದ್ದಾರೆ.

ಪ್ರಜಾವಾಣಿ ದಿನಪತ್ರಿಕೆಯಲ್ಲಿ ಆಗಸ್ಟ್೧೭, ೨೦೧೮ ರಂದು ಪ್ರಕಟಗೊಂಡ ಶಿವಲಿಂಗಸ್ವಾಮಿ ಎಚ್.ಕೆ ರವರ 'ಜ್ಞಾನ, ಕೌಶಲ, ಅಂಕ: ಯಾವುದು ಹಿತ?' ಎಂಬ ಲೇಖನದಲ್ಲಿ ನಮ್ಮ ಶಾಲಾ ಪಠ್ಯಗಳು ವಿದ್ಯಾರ್ಥಿಗಳನ್ನು ಜ್ಞಾನದ ಕಡೆಗೆ ಒಯ್ಯಬೇಕೋ ಅಥವಾ ಕೌಶಲದ ಕಡೆಗೆ ಒಯ್ಯಬೇಕೋ ಎಂಬ ಚರ್ಚೆಯನ್ನೊಳಗೊಂಡಿದೆ. ಅರಿಸ್ಟಾಟಲ್ 'ಬೌದ್ಧಿಕ ಸದ್ಗುಣ'ದ ಬಗ್ಗೆ ಪ್ರತಿಪಾದಿಸುತ್ತಾ, ಅನುಭವ ಸಹಿತವಾದ ಜ್ಞಾನವನ್ನು ಶಿಫಾರಸ್ಸು ಮಾಡುತ್ತಾನೆ. ಅಲ್ಲದೆ ಕೌಶಲ ಮತ್ತು ಜ್ಞಾನದ ಮಧ್ಯೆ ಇರುವ ವ್ಯತ್ಯಾಸವನ್ನು ವಿವರಿಸುತ್ತಾ, ಬೌದ್ಧಿಕ ಸದ್ಗುಣವೆಂದರೆ ಜ್ಞಾನಾರ್ಜನೆ. ಅದು ಅರಿಯುವ ಮತ್ತು ಅನುಭವಸಹಿತವಾಗಿ ಅರ್ಥಮಾಡಿಕೊಳ್ಳುವ ಹಂಬಲ ಎನ್ನುತ್ತಾನೆ. ಕೇವಲ ಕೌಶಲಗಳಿಗೆ ಆದ್ಯತೆ ನೀಡುವ ಸಂಕಥನಗಳಿಗೆ ಉತ್ತರವೆಂಬಂತೆ ಲುಡ್ವಿಗ್‌ವಿಟ್‌ಗೈನ್‌ಸ್ಟೈನ್ ಎಂಬ ತತ್ವಶಾಸ್ತ್ರಜ್ಞ 'ಕ್ರಿಯಾಜ್ಞಾನ' ಎಂಬ ಪರಿಕಲ್ಪನೆಯನ್ನು ಪ್ರತಿಪಾದಿಸುತ್ತಾ, 'ಜ್ಞಾನದ ಅರ್ಜನೆ ಪ್ರಾಯೋಗಿಕವಾಗಿ ಆಗಬೇಕು' ಎನ್ನುತ್ತಾನೆ. ಪಾಠ ನಮಗೆ ಮೊದಲು ಜ್ಞಾನವಾಗಿ ಲಭಿಸಿ, ನಂತರ ಅದು ಕೌಶಲವಾಗಿ ನಮಗೆ ಉದ್ಯೋಗ ಕಲ್ಪಿಸಬೇಕೆಂಬ ಚರ್ಚೆಗಳು ಈ ಲೇಖನದಲ್ಲಿವೆ.

ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಜುಲೈ ೨೩, ೨೦೧೮ರಲ್ಲಿ ಪ್ರಕಟಗೊಂಡಿರುವ, ವೆಂಕಟೇಶ.ಕೆ ಅವರ ಲೇಖನ 'ಗೇಮಿಫಿಕೇಷನ್ ಎಂಬ ಕಲಿಕೆಯ ಹೊಸ ದಾರಿ' ಇದು ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ 'ನಲಿಕಲಿ'ಯಂತಹ ಕಾರ್ಯಕ್ರಮಗಳು ಹಳತಾಗಿದ್ದು, 'ಟೆಕ್' ಜಗತ್ತಿನಲ್ಲಿ ವಿಧ್ಯಾರ್ಥಿ, ಶಿಕ್ಷಕ ಮತ್ತು ಕಲಿಯುವ ಸ್ಥಳ ಕೂಡ ಮುಖ್ಯವಾಗುತ್ತದೆ. ಇಡೀ ಪಠ್ಯವನ್ನು ಆಟವಾಗಿಸುವ, ತ್ರಿಡಿಯಾಗಿಸುವುದು ಮುಖ್ಯವಾಗಿದೆ. ಸಂವಿಧಾನದತ್ತ ಶಿಕ್ಷಣದ ಉದ್ದೇಶ ಮತ್ತು ಆಶಯಗಳನ್ನು ಗಮನದಲ್ಲಿಟ್ಟುಕೊಂಡು, ಈ ಶೈಕ್ಷಣಿಕ ತಂತ್ರಜ್ಞಾನವನ್ನು ಹೇಗೆ ಕಲಿಕಾ ಸ್ನೇಹಿಯನ್ನಾಗಿಸಬೇಕೆಂಬುದು ಗಂಭೀರ ಪ್ರಶ್ನೆಯಾಗಿದೆ. ತಂತ್ರಜ್ಞಾನ ವಲಯದಲ್ಲಿ ಆಗುತ್ತಿರುವ ಬದಲಾವಣೆಗಳು ಶಿಕ್ಷಣ ವಲಯವನ್ನು ಪ್ರಭಾವಿಸಿವೆ. ಕಲಿಕೆ, ಬೋಧನೆ, ಪಠ್ಯಕ್ರಮದಲ್ಲಿ ಹೊಸ ಸಂಚಲನವನ್ನುಂಟು ಮಾಡುತ್ತಿದೆ. ಶಿಕ್ಷಣದ ಗುರಿ, ಉದ್ದೇಶ ಮತ್ತು ಅಪೇಕ್ಷೆ, ಹಂಬಲಗಳನ್ನು ಮರು ರೂಪಿಸುತ್ತಿರುವ ತಂತ್ರಜ್ಞಾನ ಮತ್ತು ಅದರ ಸ್ವರೂಪದ ಚರ್ಚೆಗಳು ಇಲ್ಲಿವೆ.

ಅಕ್ಟೋಬರ್ ೨೪, ೨೦೧೮ ರಲ್ಲಿ ಪ್ರಜಾವಾಣಿ ಪತ್ರಿಕೆಯಲ್ಲಿ, ಎನ್.ಎಸ್.ಗುಂಡೂರ ರವರ 'ಉನ್ನತ ಶಿಕ್ಷಣದಲ್ಲಿ ಉನ್ನತ ಹಾಗೂ ಜ್ಞಾನ ಎಂದರೇನು?' ಲೇಖನ ಪ್ರಕಟಗೊಂಡಿದೆ. ಈ ಲೇಖನದಲ್ಲಿ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ 'ಜ್ಞಾನ' ಮತ್ತು 'ಉನ್ನತ' ಎಂಬ ಎರಡು ಪರಿಕಲ್ಪನೆಗಳ ಚರ್ಚೆ ಇದೆ. ಜ್ಞಾನವೆಂದರೆ, ಕೇವಲ ಮಾಹಿತಿಯಲ್ಲ. ಅದು ಅರ್ಜಿಸಿಕೊಳ್ಳಬೇಕಾದ ವಿಷಯ. ಒಂದು ಬಗೆಯ ಸಾಮರ್ಥ್ಯ ಎಂದಿದ್ದಾರೆ. ದಿನನಿತ್ಯದ ಜೀವನಕ್ಕೆ ಉಪಯೋಗಕ್ಕೆ ಬರುವ ಕೆಲಸಗಳನ್ನು ಹೇಗೆ ಮಾಡಬೇಕೆಂಬ ಸಾಮರ್ಥ್ಯವನ್ನು ಜ್ಞಾನವೆಂದೆ ಪರಿಗಣಿಸಲಾಗುತ್ತದೆ. ಇದು ಸಾಮಾಜಿಕ ಬದುಕಿನಿಂದ ಪಡೆದುಕೊಳ್ಳುವ ಜ್ಞಾನ. ಇದನ್ನು ಉನ್ನತ ಶಿಕ್ಷಣದಲ್ಲಿ ಕಲಿಸಲಾಗುವುದಿಲ್ಲ. ಈ ಉನ್ನತ ಜ್ಞಾನದ ವಿಷಯ ಹೆಚ್ಚು ಅಮೂರ್ತ ಹಾಗೂ ಸಂಕೀರ್ಣವಾಗಿರುವುದರಿಂದ, ಈ ಜ್ಞಾನವನ್ನು ಸೃಷ್ಟಿಸಲು ಉನ್ನತ ಮಟ್ಟದ ಬೌದ್ಧಿಕ ಶ್ರಮ, ಅಮೂರ್ತವಾಗಿ ಚಿಂತಿಸುವ ಸಾಮರ್ಥ್ಯ

ಮತ್ತು ಕೌಶಲಗಳು ಬೇಕಾಗಿರುವುದರಿಂದ ಇದು ಉನ್ನತ ಕಲಿಕೆಯಾಗಿದೆ. ಇಂತಹ ಸಾಂಸ್ಕೃತಿಕ ಜ್ಞಾನ ಪ್ರಕಾರಗಳು ಮತ್ತು ಸೈದ್ಧಾಂತಿಕ ಜ್ಞಾನ ಮಾದರಿಗಳ ನಡುವಿನ ನಿರಂತರ ಸಂಘರ್ಷಗಳ ಚರ್ಚೆ ಈ ಲೇಖನದಲ್ಲಿದೆ.

**ಎಂ.ಫಿಲ್. ಪ್ರಬಂಧಗಳು**

ಮಲ್ಲಿಕಾ ಎಂ..ಆರ್. ರವರು ಎಂ.ಫಿಲ್ ಪದವಿಗಾಗಿ ೨೦೦೭ರಲ್ಲಿ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದ ವತಿಯಿಂದ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿರುವ 'ಅಲ್ಲಮನ ವಚನಗಳಲ್ಲಿ ಅರಿವಿನ ಸಂಕಥನ' ಎಂಬ ಪ್ರಬಂಧದಲ್ಲಿ ಅರಿವಿನ ವ್ಯಾಖ್ಯಾನ ನಿಘಂಟಿನಲ್ಲಿ ದೊರೆಯುವ ಅರ್ಥಗಳಿಗಿಂತ ಭಿನ್ನವಾಗಿ ಅಲ್ಲಮನ ವಚನಗಳಲ್ಲಿ ಬಳಕೆಗೊಂಡಿರುವುದನ್ನು ಗುರುತಿಸಿದ್ದಾರೆ, ೧೨ನೇ ಶತಮಾನದ ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ ಬದುಕಿನ ಹಿನ್ನೆಲೆಯಲ್ಲಿ ಇತರ ವಚನಕಾರರ ಚಿಂತನೆಗಳೊಂದಿಗೆ, ಅಲ್ಲಮನ ವಚನಗಳಲ್ಲಿ ಅರಿವಿನ ನೆಲೆಗಳನ್ನು ಅರಿಯುವ ಪ್ರಯತ್ನ ಮಾಡಿದ್ದಾರೆ. ಭೌತಿಕ ಹಾಗೂ ಬೌದ್ಧಿಕ ದರ್ಶನದಲ್ಲಿ ಅಲ್ಲಮ ಕಂಡುಕೊಂಡ ಅರಿವಿನ ಪ್ರಜ್ಞೆ, ಧೋರಣೆಗಳನ್ನು ನಿರ್ವಚಿಸಲಾಗಿದೆ. ಅಲ್ಲಮನಲ್ಲಿ ಬರುವ ಜ್ಞಾನ ಸಂಬಂಧಿ ವಚನಗಳನ್ನು ವಿವೇಚನೆ ಮಾಡುತ್ತಾ, ಜ್ಞಾನ ಮತ್ತು ಅರಿವುಗಳ ನಡುವಿನ ಸಾಮ್ಯತೆ ಹಾಗೂ ವೈಷಮ್ಯದ ನೆಲೆಗಳನ್ನು ತಾತ್ತ್ವಿಕ ಚರ್ಚೆಗೆ ಒಳಪಡಿಸಲಾಗಿದೆ. ಅನುಭಾವದ ಆಧ್ಯಾತ್ಮಿಕ ಚಿಂತನೆಯ ನೆಲೆಗಳನ್ನು ಅರಿವಿನೊಂದಿಗೆ ಮುಖಾಮುಖಿಯನ್ನಾಗಿಸಲಾಗಿದೆ. ಜ್ಞಾನದ ಪರ್ಯಾಯವೆಂಬಂತಿರುವ ಅರಿವಿನ ಸೂಕ್ಷ್ಮ ಹಾಗೂ ಭಿನ್ನತೆಯ ಎಳೆಯನ್ನು ಅಲ್ಲಮನ ವಿಚಾರಗಳ ಹಿನ್ನೆಲೆಯಲ್ಲಿ ಶೋಧಿಸುವ ಪ್ರಯತ್ನ ಇಲ್ಲಿ ನೆಡೆದಿದೆ.

**ಪಿಎಚ್.ಡಿ. ಪ್ರಬಂಧಗಳು**

ಜಗದೀಶ ಕೆರೆನಳ್ಳಿ ಪಿಎಚ್.ಡಿ ಪದವಿಗಾಗಿ ೨೦೦೯ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿರುವ 'ತತ್ವಪದ ಅಧ್ಯಯನಗಳು: ವಿಮರ್ಶಾತ್ಮಕ ಸಮೀಕ್ಷೆ' ಎಂಬ ಪ್ರಬಂಧದಲ್ಲಿ ತತ್ವಪದಗಳ ಅಧ್ಯಯನಗಳನ್ನು ವಿಮರ್ಶಾತ್ಮಕವಾಗಿ ಸಮೀಕ್ಷೆ ಮಾಡಿದ್ದಾರೆ. ಪಠ್ಯಗಳ ಸಂಪಾದನೆಯ ತಾತ್ವಿಕತೆಗಳು, ತೊಡಕುಗಳು, ಸ್ವರವಚನ, ತತ್ವಪದಗಳ ಪರಿಕಲ್ಪನೆಯ ಚರ್ಚೆಗಳು, ತತ್ವಪದಗಳ ಕುರಿತ ನಡೆದ ಅಧ್ಯಯನಗಳನ್ನು ಸಮೀಕ್ಷಿಸುವಾಗ ಚಾರಿತ್ರಿಕ ವಿಧಾನವನ್ನು ಅನುಸರಿಸಲಾಗಿದೆ. ಬಹುತೇಕ ಈ ಎಲ್ಲಾ ಅಧ್ಯಯನಗಳು ಏಕಮುಖಿ ನೆಲೆಯಲ್ಲಿ ಚಿಂತಿಸಿವೆ. ತತ್ವಪದಕಾರರು, ಸಂತರು, ಅನುಭಾವಿಗಳು ಜಾತ್ಯಾತೀತ, ಧಾರ್ಮಿಕ ಸಾಮರಸ್ಯದ ಪ್ರತಿಪಾದಕರಾಗಿ ಕಂಡುಬರುತ್ತಾರೆ. ಅವರನ್ನು ಜಾತಿಯ ನೆಲೆಯಲ್ಲಿ, ಧಾರ್ಮಿಕ ಮನೋಭಾವದ ನೆಲೆಯಲ್ಲಿ ಮತ್ತು ಪ್ರಾದೇಶಿಕತೆಗೆ ಸೀಮಿತಗೊಳಿಸಿ ನೋಡಲಾಗಿದೆ ಎಂಬುದನ್ನು ಗುರುತಿಸಿದ್ದಾರೆ. ಅನುಭಾವಿ ಸಂತರ ಆಶಯಗಳನ್ನು ಏಕಮುಖಿ ನೆಲೆಯಲ್ಲಿ ನೋಡಲಾಗಿದೆಯೇ ಹೊರತು ಅವರ ಚಿಂತನೆಯ ಬಹುಮುಖಿ ಆಯಾಮಗಳನ್ನು ಅರಿಯುವ ಪ್ರಯತ್ನ ಇಲ್ಲಿ ಕಂಡುಬಂದಿಲ್ಲ.

ವಿಪ್ಲವಿಯವರು ಪಿಎಚ್.ಡಿ ಪದವಿಗಾಗಿ ೨೦೧೧ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ 'ತತ್ವಪದ ಸಾಹಿತ್ಯದ ಭಾಷೆ: ಒಂದು ಅಧ್ಯಯನ' ಈ ಮಹಾಪ್ರಬಂಧದಲ್ಲಿ ತತ್ವಪದಕಾರರ ಧ್ವನಿಗಳಲ್ಲಿ

ಭಿನ್ನ ಅರ್ಥಗಳಿರುವುದೆಂದು ಹೇಳಿದ್ದಾರೆ. ಬಹುಭಾಷಾ ಸಂಸ್ಕೃತಿಯ ನೆಲೆಯಲ್ಲಿ ಹುಟ್ಟಿದ ಈ ತತ್ವಪದ ಸಾಹಿತ್ಯ ಅಂದಿನ ಸಮಾಜದ ಜನ ಸಮುದಾಯಗಳ ಜೀವನ ಚಿತ್ರಗಳನ್ನು ಭಾಷಾ ಚಹರೆಯ ಮೂಲಕ ಅಭಿವ್ಯಕ್ತಿಸುತ್ತದೆ. ತತ್ವಪದಗಳು ಮನುಷ್ಯ ದೇಹ ಮತ್ತು ಸಂಸಾರಗಳ ಜಂಜಡಗಳನ್ನು ಆಧ್ಯಾತ್ಮದ ನೆಲೆಯಲ್ಲಿ ಭಿನ್ನ ಸಾಹಿತ್ಯಿಕ ರೂಪಗಳಾಗಿ ಹಾಡಲ್ಪಟ್ಟಿವೆ. ಗಿಳಿ, ಕೋಗಿಲೆ, ಹಂಸ, ಬೆಳವ ಮುಂತಾದವು ಜೀವಧ್ವನಿಯ ಉನ್ನತ ಅರ್ಥವನ್ನು ಪಡೆದುಕೊಂಡಿವೆ. ತತ್ವಪದ ಸಾಹಿತ್ಯ ಜನಪದ ಸಾಹಿತ್ಯಕ್ಕೂ ಸೇರದೆ, ಶಿಷ್ಟಸಾಹಿತ್ಯಕ್ಕೂ ಸೇರದೆ ತನ್ನಲ್ಲಿರುವ ಮಡಿವಂತಿಕೆಯನ್ನು ಮೀರದೆ, ಭಾಷಾ ವೈಶಿಷ್ಟ್ಯತೆಯಿಂದ ಭಿನ್ನವಾದ ಅಸ್ತಿತ್ವವುಳ್ಳದ್ದಾಗಿದೆ ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ಇದುವರೆಗಿನ ಸಮೀಕ್ಷೆಯಲ್ಲಿ ಅಲ್ಲಮನ ವಚನಗಳಲ್ಲಿ ಅರಿವಿನ ಸಂಕಥನ ಎಂಬ ಎಂಫಿಲ್ ಪ್ರಬಂಧ ಬಿಟ್ಟರೆ, ಅರಿವು ಜ್ಞಾನಕ್ಕೆ ಸಂಬಂಧ ಪಟ್ಟಂತೆ ಯಾವ ಅಧ್ಯಯನಗಳು ನೆಡೆದಿರುವುದು ಕಂಡುಬಂದಿಲ್ಲ. ಒಟ್ಟಾರೆಯಾಗಿ ಕನ್ನಡ ಅನುಭಾವ ಸಾಹಿತ್ಯವನ್ನು ಕುರಿತಂತೆ ಕೆಲವು ಅಧ್ಯಯನಗಳು ನಡೆದಿದೆ. ಈ ಅಧ್ಯಯನಗಳು ಅನುಭಾವ ಸಾಹಿತ್ಯದ ಪ್ರಧಾನ ಧಾರೆಗಳಾದ ವಚನಸಾಹಿತ್ಯದಲ್ಲಿನ ಕಾಯಕ, ವೃತ್ತಿಮೌಲ್ಯ, ಭಾಷೆ, ಭಕ್ತಿಯ ನೆಲೆಯಲ್ಲಿ ಅಧ್ಯಯನಗಳು ನೆಡೆದಿರುವುದನ್ನು ಕಾಣುತ್ತೇವೆ. ದಾಸಸಾಹಿತ್ಯದ ಅಧ್ಯಯನಗಳು ಕೂಡ ಭಕ್ತಿ, ಅರ್ಪಣೆಯ ನೆಲೆಯಲ್ಲಿಯೇ ಅಧ್ಯಯನಗಳು ನೆಡೆದಿವೆ. ಇನ್ನೂ ಕೆಲವು ಅಧ್ಯಯನಗಳು ಭಾರತೀಯ ಧಾರ್ಮಿಕ, ಸಾಮಾಜಿಕ ಇತಿಹಾಸದಲ್ಲಿ ಜ್ಞಾನದ ನೆಲೆಗಳನ್ನು ಅಲ್ಲಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ಪ್ರಾಚೀನ ಕಾಲದ ಪಾರಮಾರ್ಥಿಕ ಜ್ಞಾನದಿಂದ ಹಿಡಿದು, ಆಧುನಿಕ ಕಾಲದ ತಂತ್ರಜ್ಞಾನ ಪ್ರಣೀತ ಜ್ಞಾನದ ವರೆಗಿನ ಜ್ಞಾನದ ಸ್ವರೂಪದಲ್ಲಾದ ಬದಲಾವಣೆಗಳನ್ನು ಮುಖಾಮುಖಿಯನ್ನಾಗಿಸಿದ ಚರ್ಚೆಗಳು ಕೆಲವು ಮಾಹಿತಿಗಳನ್ನು ಬಿಟ್ಟರೆ ಅಂಥ ಹೇಳಿಕೊಳ್ಳುವಂತಹ ಚರ್ಚೆಗಳು ಆಗಿಲ್ಲ ಎನ್ನುವುದು ಈ ಸಮೀಕ್ಷೆಯಿಂದ ತಿಳಿಯುತ್ತದೆ. ಈ ಎಲ್ಲಾ ಕೃತಿಗಳು, ಲೇಖನಗಳು ಪ್ರಸ್ತುತ ನನ್ನ ಅಧ್ಯಯನಕ್ಕೆ ಅಗತ್ಯವಾದ ಒಂದು ತಳಹದಿಯನ್ನು ಒದಗಿಸಿವೆ. ಈ ಹಿನ್ನೆಲೆಯಲ್ಲಿ 'ಕನ್ನಡ ಅನುಭಾವ ಸಾಹಿತ್ಯದಲ್ಲಿ ಜ್ಞಾನದ ನಿರ್ವಚನ' ಎಂಬ ಶೀರ್ಷಿಕೆಯಡಿ ಕೈಗೊಳ್ಳುತ್ತಿರುವ ಈ ಅಧ್ಯಯನವು ಇದುವರೆಗೂ ನಡೆಸಲಾದ ಅಧ್ಯಯನಗಳಿಗಿಂತ ಭಿನ್ನವಾಗಿದೆ. ಏಕೆಂದರೆ ನಮ್ಮೆದುರಿಗೆ ನುಗ್ಗಿ ಬರುತ್ತಿರುವ ಜಾಗತೀಕರಣಕ್ಕೆ ಪ್ರತಿರೋಧವಾಗಿ ವಚನಗಳು, ಸ್ವರವಚನಗಳು, ಕೀರ್ತನೆಗಳು, ಸುಳಾದಿ, ಉಗಾಭೋಗಗಳು, ತತ್ವಪದಗಳ ಸಹಾಯದಿಂದ ನಮ್ಮ ದೇಶಿಯ ಜ್ಞಾನ ಪರಂಪರೆಯನ್ನು ಮರು ಶೋಧಿಸಿ, ಆಧುನಿಕ ವಿಜ್ಞಾನ, ತಂತ್ರಜ್ಞಾನವನ್ನೇ ಜ್ಞಾನವೆಂದು ನಿರೂಪಿಸಿರುವ ಇಂದಿನ ಆಲೋಚನೆಗೆ ಪ್ರತಿಯಾಗಿ ಪ್ರಾಚೀನ ಜ್ಞಾನ ಶಾಖೆಗಳಲ್ಲಿ ಹುದುಗಿರುವ ದೇಶಿ ಪರಂಪರೆಯ ಜ್ಞಾನದ ಹುಡುಕಾಟ ಹಾಗೂ ಆ ಜ್ಞಾನವನ್ನು ಪ್ರಸ್ತುತ ಜ್ಞಾನದೊಂದಿಗೆ ಮುಖಾಮುಖಿ ಮಾಡುವುದು ಈ ಅಧ್ಯಯನದ ಮುಖ್ಯ ಸಂಗತಿಯಾಗಿದೆ.

ಅಧ್ಯಾಯ ಮೂರು

# ಜ್ಞಾನ ಮೀಮಾಂಸೆಯ ಪ್ರಾಚೀನ ನೆಲೆಗಳು

ಪ್ರಾಚೀನ ಭಾರತೀಯ ಸಂಸ್ಕೃತಿಯು ಹಲವಾರು ಮತಧರ್ಮಗಳಿಗೆ ಆಶ್ರಯ ನೀಡಿದೆ. ಅನೇಕ ಧರ್ಮಗಳು, ಜನಾಂಗಗಳು, ಭಾಷೆಗಳು ಸಂಸ್ಕೃತಿಗಳನ್ನೊಳಗೊಂಡ ಈ ನಾಡಿನಲ್ಲಿ ಅನೇಕ ಅನುಭಾವಿಗಳು ಆಗಿ ಹೋಗಿದ್ದಾರೆ. ಸಮಾಜ ಸುಧಾರಣೆಯಂತಹ ಕಾರ್ಯದಲ್ಲಿ ಮಹತ್ವದ ಪಾತ್ರ ವಹಿಸಿದ್ದಾರೆ. ಅಲ್ಲದೇ ಅನೇಕ ಧರ್ಮಗಳು ಇಂತಹ ಜಿಜ್ಞಾಸೆಗಳ ನಿವಾರಣೆಗಾಗಿ ಶ್ರಮವಹಿಸಿರುವುದನ್ನು ಕಾಣಬಹುದು. ಶರಣರು, ದಾಸರು, ಆರೂಢರು, ಯೋಗಿಗಳು, ಸಿದ್ಧರು, ನಾಥರು, ಸೂಫಿಗಳಲ್ಲದೆ, ಹಿಂದೂ, ಜೈನ, ಬೌದ್ಧದಂತಹ ಹಲವಾರು ಧರ್ಮಗಳು ಸಮಾಜದ ಏಳಿಗೆಗಾಗಿ ಉದ್ಧಾರಕ್ಕಾಗಿ ದುಡಿದಿರುವುದನ್ನು ಕಾಣಬಹುದು.

ಧರ್ಮಭೂಮಿಯೆಂದೆ ಪ್ರಸಿದ್ಧವಾದ ಈ ನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಜಾತಿ-ಮತ-ಪಂಥಗಳ ನಡುವೆ ರಾಗ ದ್ವೇಷಾಸೂಯೆಗಳಿಂದಾಗಿ ವೈಷಮ್ಯಗಳು ಹುಟ್ಟಿಕೊಂಡವು. ಉಚ್ಚ-ನೀಚ ಎಂಬ ಭೇದ ಭಾವಗಳು ಹುಟ್ಟಿಕೊಂಡು ವೈಚಾರಿಕ ಪ್ರಜ್ಞೆ ಜನರಿಂದ ದೂರವಾಯಿತು. ಇಂತಹ ಸಂದರ್ಭದಲ್ಲಿ ಅಲ್ಲಲ್ಲಿ ಅವತರಿಸಿದ ಅನುಭಾವಿಗಳು ಆಯಾ ಪ್ರಾಂತಗಳಲ್ಲಿ ಧಾರ್ಮಿಕ ಸುಧಾರಣೆಯ ಜೊತೆಗೆ ವೈಚಾರಿಕ ಪ್ರಜ್ಞೆಯನ್ನು ಬೆಳೆಸಿದರು.

ಪ್ರಾಚೀನ ಭಾರತದ ವಿದ್ಯೆಯು ಮೂಲತಃ ಆಧ್ಯಾತ್ಮ ವಿದ್ಯೆಯಾದರೂ, ಲೌಕಿಕ ಶಿಕ್ಷಣವೂ ಮುಖ್ಯ ಎನ್ನುವುದನ್ನು ಸ್ಪಷ್ಟಪಡಿಸುತ್ತದೆ. ಧರ್ಮಶಾಸ್ತ್ರಗಳ ಪ್ರಕಾರ "ಮನುಷ್ಯನು ಏನು ತಿಳಿಯದ ಖಾಲಿ ವ್ಯಕ್ತಿಯಲ್ಲ. ಅದು ಸರ್ವಶಕ್ತಿ ಸಂಪನ್ನವಾದ ಒಂದು ಚೇತನ. ಅದಕ್ಕೆ ಮುಸುಕಿರುವ ಆವರಣವನ್ನು ಪರಿಹರಿಸುವುದು ಮಾತ್ರ ಶಿಕ್ಷಣದ ಗುರಿ"[1] ಎಂದು ಹೇಳುತ್ತವೆ. ಅಂದರೆ ವ್ಯಕ್ತಿಯಲ್ಲಿ ಒಂದು ಸುಪ್ತಚೇತನ(ಅರಿವು) ಮೊದಲೇ ಇರುತ್ತದೆ. ಆದರೆ ಅದರ ಅರಿವು ಅವನಿಗೆ ತಿಳಿದಿರುವುದಿಲ್ಲ. ಅದನ್ನು ಹೊರಗೆಡಹಲು ಒಂದು ಪೂರಕ ಶಕ್ತಿ ಬೇಕು. ಇಂತಹ ಪ್ರೇರಣ ಶಕ್ತಿಯಾದ ಗುರುವಿನ ಮಾರ್ಗದರ್ಶನದಲ್ಲಿ ಶಿಷ್ಯನು ವಿವಿಧ ಸಂಸ್ಕಾರಗಳ ಮೂಲಕ ನಿಜವಾದ ಶಿಕ್ಷಣ ಪಡೆದುಕೊಂಡು ಪರಿಪೂರ್ಣ ಜ್ಞಾನಿಯಾಗುತ್ತಾನೆ. ಗುರುವು ನಮ್ಮ ಅರಿವನ್ನು ಎಚ್ಚರಗೊಳಿಸುವ ಪ್ರೇರಕ ಶಕ್ತಿಯಾಗಿದ್ದಾನೆ.

ಪ್ರಾಚೀನ ಪರಂಪರೆಯಲ್ಲಿ ಶಿಕ್ಷಣವು ಕೆಲವರ ಸ್ವಾಮ್ಯಕ್ಕೆ ಒಳಗಾಗಿದ್ದು, ವೈದಿಕ ಹಿನ್ನೆಲೆಯಲ್ಲಿಯೇ ರೂಪುಗೊಂಡಿದ್ದಾಗಿದೆ. ಶಿಕ್ಷಣ ಎಲ್ಲ ಜನವರ್ಗಗಳ ಸೊತ್ತು ಎಂದು ಭಾವಿಸುವ ಬದಲು ಕೆಲವೇ ವರ್ಗಗಳ ಸ್ವಂತ ಆಸ್ತಿ ಎಂದು ತಿಳಿದಿತ್ತು. ಪ್ರಾಚೀನ ಕಾಲದಿಂದಲೂ ಶಿಕ್ಷಣ ಖಾಸಗಿಯಾಗಿತ್ತೇ ವಿನಃ

ಸಾರ್ವಜನಿಕವಾಗಿರಲಿಲ್ಲ. ಶಿಕ್ಷಣ ಪ್ರತಿಯೊಬ್ಬ ಮನುಷ್ಯನ ಬದುಕಿನ ಅವಿಭಾಜ್ಯ ಅಂಗ ಎನ್ನುವ ವಾಸ್ತವಾಂಶವನ್ನು ಉದ್ದೇಶಪೂರ್ವಕವಾಗಿಯೇ ಸಮಾಜದಲ್ಲಿ ಮರೆಮಾಚಲಾಗಿತ್ತು. ಅಗ್ರಹಾರ, ಬ್ರಹ್ಮಪುರಿ, ಮಠಗಳು, ಘಟಿಕಾಸ್ಥಾನಗಳು, ದೇವಾಲಯಗಳು ನೀಡುತ್ತಿದ್ದ ಶಿಕ್ಷಣವು ಧರ್ಮದ ಪ್ರತಿಪಾದನೆಯ ಉದ್ದೇಶದೊಂದಿಗೆ ಸಾಗಿತು. ಈ ಶಿಕ್ಷಣ ವ್ಯವಸ್ಥೆಯನ್ನು ಪ್ರೋತ್ಸಾಹಿಸುತ್ತಿದ್ದ ರಾಜಪ್ರಭುತ್ವ, ಧಾರ್ಮಿಕ ಪ್ರಭುತ್ವಗಳನ್ನು ಮೀರಿ ನಿಲ್ಲುವ ಸಾಮಾಜಿಕ ವ್ಯವಸ್ಥೆ ಮಾತ್ರ ರೂಪುಗೊಂಡಿರಲಿಲ್ಲ. ರೂಪುಗೊಳ್ಳುವ ಮುಕ್ತ ಅವಕಾಶವೂ ಇರಲಿಲ್ಲ. ಆರನೇ ಶತಮಾನದಲ್ಲಿ ಜೈನ ಮತ್ತು ಬೌದ್ಧ ಮಠಗಳು ಅನೇಕ ಸುಧಾರಣೆಗಳನ್ನು ತಂದು, ಆ ಮೂಲಕ ತಮ್ಮ ಮತ ಪ್ರಸಾರ ಮಾಡುವುದಕ್ಕೆ ಉಪಯೋಗಿಸಿಕೊಂಡವು. ಕಾಳಾಮುಖ ಮಠಗಳು ಪ್ರಾರಂಭವಾದ ನಂತರ ಇದರ ಚಿತ್ರಣ ಬದಲಾಯಿತು. ಇಲ್ಲಿ ಜೀವನ ವಿಧಾನದ ವಿಕಾಸವೆಂದರೆ ತಿಳಿವಳಿಕೆಯ ವಿಕಾಸ ಆಗಿತ್ತು. ಇವರು ಅಗ್ರಹಾರಗಳಲ್ಲಿ ಕಲಿಸುತ್ತಿದ್ದ ನಾಟಕ, ಕಾವ್ಯ, ಛಂದಸ್ಸು, ವೇದ, ವ್ಯಾಕರಣ ತರ್ಕಶಾಸ್ತ್ರಗಳ ಜೊತೆಗೆ ಕೌಮಾರ, ಪಾಣನೀಯ, ಶಬ್ದಾನುಶಾಸನ ಮತ್ತು ವ್ಯಾಕರಣ ಗ್ರಂಥಗಳ ಕುರಿತು ಭಾಷ್ಯೆ ರಚಿಸುವ ಮತ್ತು ಯೋಗಶಾಸ್ತ್ರಗಳಿಗೆ ಭಾಷ್ಯೆ ರಚಿಸಿವುದನ್ನು ಕಲಿಸುತ್ತಿದ್ದರು. ಅಲ್ಲದೆ ಜೈನ, ಲೋಕಾಯುತ, ಬೌದ್ಧ, ಸಾಂಖ್ಯ, ಯೋಗ, ಮೀಮಾಂಸೆ, ನ್ಯಾಯ, ವೈಶೇಷಿಕ, ವ್ಯಾಕರಣದಂತಹ ಹಲವಾರು ಸಿದ್ಧಾಂತಗಳನ್ನು ಬಲ್ಲವರಾಗಿದ್ದರಿಂದ ಆತ್ಮಜ್ಞಾನ ಪ್ರಧಾನವಾದ ವಿದ್ಯೆಯ ಜೊತೆಗೆ ಕ್ರಿಯೆ, ಅರಿವು, ಕೌಶಲ್ಯ ಹಾಗೂ ಶ್ರಮದಾಯಕ ವಿದ್ಯೆಗಳನ್ನು ಕಲಿಸಲು ಪ್ರಯತ್ನಪಟ್ಟರು.

ಪ್ರಸ್ತುತ ಶಿಕ್ಷಣ ಪದ್ಧತಿಗಿಂತ ಪ್ರಾಚೀನ ಕಾಲದ ಶಿಕ್ಷಣ ಪದ್ಧತಿ ವಿಶೇಷ ಭಿನ್ನತೆಗಳಿಂದ ಕೂಡಿತ್ತು. ಅಂದು ಶಿಕ್ಷಣವೆಂದರೆ ಕೇವಲ ಪಠ್ಯವಾಗಿರದೆ, ಒಳ್ಳೆಯ ರೀತಿ-ನೀತಿ ನಡತೆಗಳಿಂದ ಜೀವನಕ್ಕೆ ಮಾರ್ಗದರ್ಶನ ನೀಡುವ ಆತ್ಮಸಿದ್ಧಿಯ ಸಾಧನವಾಗಿತ್ತು. ಜೀವನದ ಮುಕ್ತಿ ಮಾರ್ಗವಾಗಿತ್ತು. ಸ್ವಾರ್ಥದಿಂದ ಮಾನವನನ್ನು ದೂರವಿರಿಸಿ ಮಾನವತ್ವವನ್ನು ಬೆಳೆಸುವುದಾಗಿತ್ತು. ಇದು ವೈಯಕ್ತಿಕವಾಗಿ ಗುರು-ಶಿಷ್ಯರ ಬಾಂಧವ್ಯದೊಂದಿಗೆ ಸಾಗಿ, ಸೇವಾ ಮನೋವೃತ್ತಿಯಿಂದ ಜೀವನವನ್ನು ಸಜ್ಜುಗೊಳಿಸಿಕೊಳ್ಳುವಂತಹ ನೀತಿ ಪಾಠವನ್ನು ಬೋಧಿಸಲಾಗುತ್ತಿತ್ತು.

ಪ್ರಾಚೀನ ಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದ ಹಿಂದೂ ಧರ್ಮಕ್ಕೆ ವೇದಗಳು ಜ್ಞಾನ ಭಂಡಾರಗಳಾಗಿವೆ. ಸನಾತನ ಧರ್ಮದ ಪವಿತ್ರ ಗ್ರಂಥಗಳಾಗಿವೆ. ಇವುಗಳಲ್ಲಿ ತತ್ತ್ವ ನಿರೂಪಣೆಯಿದೆ. ಸೃಷ್ಠಿಯ ರಹಸ್ಯ ಆತ್ಮ ಪರಮಾತ್ಮರ ಸಂಬಂಧ, ಮಾನವ ಜೀವನದ ಅಂತಿಮ ಗುರಿಯ ಸಾಧನೆಗೆ ಬೇಕಾದಂತಹ ಕರ್ಮಾಚರಣೆಗಳ ವಿಧಿ-ನಿಷೇಧಗಳ ನಿರೂಪಣೆಯೂ ಇದೆ. ಅಥರ್ವಣ ವೇದದಲ್ಲಿ ಮಾಂತ್ರಿಕ ಹಾಗೂ ತಾಂತ್ರಿಕ ವಿದ್ಯೆಗಳ ಉಲ್ಲೇಖವಿದೆ. ಸಾಮವೇದದಲ್ಲಿ ಸ್ವರ-ಸಂಗೀತದ ಲಲಿತ ಕಲೆಗಳ ಉಲ್ಲೇಖಗಳಿವೆ. ಅಲ್ಲದೆ ನಮ್ಮ ಪುರಾತನರ ಸಮಗ್ರ ಜೀವನ ಸಾಧನೆಯನ್ನು ಪ್ರದರ್ಶಿಸುವಂತಹ ಗ್ರಂಥಗಳಾಗಿವೆ.

ವಿಚಾರ ಪ್ರಧಾನವಾದ ವೇದಗಳಲ್ಲಿ ದೇವರು, ದೈವಿತತ್ತ್ವದ ಸಾಕಾರ ಮುಂತಾದ ದಾರ್ಶನಿಕ ವಿಚಾರಗಳು ಚರ್ಚಿಸಲ್ಪಡುತ್ತವೆ. ದೇವರ ಹಲವು ನಾಮರೂಪಗಳನ್ನು ಪೂಜಿಸಿದರೂ ಕೂಡ

ಏಕದೇವೋಪಾಸಕರಾಗಿದ್ದರು. ಇಂತಹ ಏಕತತ್ತ್ವದ ಅರಿವು ಆ ಕಾಲದ ಧರ್ಮದ ಉದ್ದೇಶವಾಗಿತ್ತು. ಇಲ್ಲಿ ಚಾರಿತ್ರ್ಯಕ್ಕೆ ತುಂಬಾ ಬೆಲೆ ಇದೆ. ನೀತಿ, ಶೀಲ, ಸತ್ಯರಹಿತವಾದ ಬಾಳು ನಮ್ಮನ್ನು ದುಃಖಕ್ಕಿಡು ಮಾಡುತ್ತದೆ ಎಂಬುದು ಅವರ ನಂಬಿಕೆಯಾಗಿತ್ತು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸದಂತಹ ನಾಲ್ಕು ಆಶ್ರಮ ಧರ್ಮಗಳನ್ನು ಪಾಲಿಸುವ ಮೂಲಕ ಮಾನಸಿಕ ಸಂಯಮವನ್ನು ಸಾಧಿಸಿಕೊಂಡು ತನ್ನ ಉದ್ಧಾರದ ಜೊತೆಗೆ ಸಮಾಜದ ಕಲ್ಯಾಣವನ್ನು ಸಾಧಿಸಬೇಕೆಂದು ಬೋಧಿಸುತ್ತದೆ. ಅಂದರೆ ಶಿಕ್ಷಣದ ಗುರಿ ಚಿತ್ತ, ವೃತ್ತಿ ನಿರೋಧವಾಗಿದೆ. ಭೌತಿಕ ವಸ್ತುಗಳೊಂದಿಗೆ ಸಂಪರ್ಕ ಬೆಳೆಸುವ ಮನಸ್ಸಿನ ಚಟುವಟಿಕೆಗಳನ್ನು ನಿಯಂತ್ರಿಸುವುದಾಗಿದೆ.

ವೇದಗಳು ಮಹಿಳೆಯರಿಗೆ ಸ್ತ್ರೀ ಧರ್ಮವನ್ನು ಶೀಲ-ಚಾರಿತ್ರ್ಯ ಮುಂತಾದ ಸದ್ಗುಣಗಳ ಪಾಲನೆಯನ್ನು ಕಟ್ಟುನಿಟ್ಟಾಗಿ ಆಚರಿಸುವುದರ ಜೊತೆಗೆ ಅವರ ಬೌದ್ಧಿಕ ವಿಕಾಸಕ್ಕೆ ಯಾವ ತೊಂದರೆಯನ್ನು ಮಾಡಿರಲಿಲ್ಲ ಎಂದು ಹೇಳುತ್ತದೆ. ಆದರೆ ಅದು ಕೇವಲ ಅಧಿಕಾರಸ್ಥರ ಕುಟುಂಬದ ಹೆಣ್ಣು ಮಕ್ಕಳಿಗೆ ಮಾತ್ರ ಸೀಮಿತವಾಗಿತ್ತು. ಇದು ಆ ಕಾಲದ ವಿಶಾಲತೆಯ ಸಂಕೇತವೂ ಹೌದು, ಸಂಕುಚಿತ ಮನಸ್ಥಿತಿಯೂ ಹೌದು. ಕೊನೆ ಕೊನೆಗೆ ಹೆಣ್ಣಿಗೆ ಶಿಷ್ಟವಾದಂತಹ ಸಾರ್ವಜನಿಕ ಅವಕಾಶಗಳು ಕಡಿಮೆಯಾದವು. ಅಲ್ಲದೆ ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮಹಿಳೆಯರನ್ನು ಅವಕಾಶಗಳಿಂದ ವಂಚಿತರನ್ನಾಗಿ ಮಾಡಲಾಯಿತು. ಉಪನಿಷತ್ತುಗಳಲ್ಲೂ ವೇದಕಾಲದ ಸ್ತ್ರೀಯರ ಸಂಸ್ಕೃತಿಯ ಪಡಿನೆಳಲೇ ಕಂಡುಬಂದರೂ ಯಾಜ್ಞವಲ್ಕ್ಯರ ಜೊತೆಗೆ ಗಾರ್ಗಿ, ಮೈತ್ರೇಯಿ ಯಂತಹ ಹೆಣ್ಣುಮಕ್ಕಳು ವೈಚಾರಿಕ ಚರ್ಚೆ ನಡೆಸಿದರೆಂದು ತಿಳಿದುಬರುತ್ತದೆ.

ಭಾರತೀಯ ಸಂಸ್ಕೃತಿಯ ಸಮಾಜ ವ್ಯವಸ್ಥೆಯಲ್ಲಿ ಶಿಕ್ಷಣ, ನೀತಿಶಾಸ್ತ್ರ, ಉದ್ಯೋಗ ಪ್ರತಿಯೊಂದರಲ್ಲಿಯೂ ಗಂಡಿಗೊಂದು, ಹೆಣ್ಣಿಗೊಂದು ಪ್ರತ್ಯೇಕ ಮಾನದಂಡ ಏರ್ಪಟ್ಟಿರುವುದು ಸಹಜವೇ ಆಗಿದೆ. ಹೆಣ್ಣನ್ನು ಪಾಪಿ, ಮಾಯೆ, ಚಂಚಲೆಯಾಗಿ ರೂಪಿಸುವ ಮೂಲ ಅವಳ ತಿಳಿವಳಿಕೆಯ ಜಗತ್ತನ್ನು ಸಂಕುಚಿತಗೊಳಿಸುತ್ತಾ ಬರಲಾಗಿದೆ. ನಿಜವಾಗಿಯೂ ಗಂಡಿಗಿಂತ ಹೆಣ್ಣು ಹೆಚ್ಚು ಶ್ರಮಜೀವಿಯಾಗಿದ್ದಾಳೆ. ಅವಳ ಶ್ರಮ ನಿರುತ್ಪಾದಕವಾಗಿ ಉಳಿದಿದೆ. ಹೆಣ್ಣಿನ ಪ್ರಜ್ಞೆಯನ್ನು ಸಾವಿರಾರು ವರ್ಷಗಳಿಂದ ಗಂಡು, ಅಡುಗೆ ಮನೆ ಹಾಗೂ ಮನೆಯ ಹೊಸ್ತಿಲೊಳಗೆ ಕಟ್ಟಿಹಾಕಿದ್ದಾನೆ. ಯಾವ ಗೃಹಕೃತ್ಯದಿಂದಾಗಿ ಅದುವರೆಗೆ ಗಂಡಿನ ಸಮಾನವಾದ ಅಧಿಕಾರವನ್ನು ಗೌರವವನ್ನು ಕುಟುಂಬದೊಳಗೆ ಹೆಣ್ಣು ಪಡೆಯುತ್ತಿದ್ದಳೊ ಅದೇ ಗೃಹಕೃತ್ಯ ಅತ್ಯಂತ ತುಚ್ಛವೂ, ನಿರುತ್ಸಾಹಕವೂ ಆದ ಹೆಣ್ಣಿನ ಗುಲಾಮರಿಗೆ ದಾರಿ ಮಾಡಿಕೊಡುವಂತಾಯಿತು. ಅನುಭವ ಪ್ರಧಾನವಾದ ಸಾಂಪ್ರದಾಯಿಕ ಕೌಶಲ್ಯಶೀಲ ಸಮುದಾಯದಲ್ಲಿ ಹೆಣ್ಣಿನ ಜ್ಞಾನಕ್ಕೆ, ಅವಳ ಅಸ್ತಿತ್ವಕ್ಕೆ ಗೌರವವಿದ್ದ ಕಾರಣಕ್ಕಾಗಿಯೇ ಲೌಕಿಕ ಜಗತ್ತಿನ ಹಲವು ಗುಣಾತ್ಮಕ ಕರ್ತವ್ಯಗಳೊಂದಿಗೆ ಅವಳನ್ನು ದೈವಿಕತೆಯೊಂದಿಗೆ ಸಮೀಕರಿಸಲಾಗಿತ್ತು. ತಾಳ್ಮೆಯಲ್ಲಿ ಭೂಮಿತಾಯಿಗೆ ಹೋಲಿಸುತ್ತಾ ಬಂದಿರುವ ವ್ಯವಸ್ಥೆ ಅವಳ ದುಡಿಮೆ, ಲಾಲನೆ, ಪಾಲನೆ, ಪೋಷಣೆ ಕುಟುಂಬದ ನಿರ್ವಹಣೆ ಮತ್ತು ಪಶುಸಂಗೋಪನೆ ಮುಂತಾದ ಜೈವಿಕ ಅರಿವಿನ ಮಾರ್ಗದ ಸಬಲ ಶಕ್ತಿಯಾಗಿದ್ದ ಸಾಂಪ್ರಾದಾಯಿಕ ಸಮಾಜದ

ಜ್ಞಾನದ ಎಲ್ಲಾ ಧಾರೆಗಳಲ್ಲಿ ಅವಳಿಗೆ ಆದ್ಯತೆಯಿತ್ತು. ಲಲಿತಕಲೆ ಸಂಗೀತದಂತಹ ಗಂಧರ್ವ ವಿದ್ಯೆಗಳಲ್ಲಿ ಪರಿಣಿತಿ ಪಡೆದಿದ್ದಳು. ಆದರೆ ದೈವೀಕರಿಸುವಂತಹ ಪ್ರಕ್ರಿಯೆಗಳಿಂದ ಹೆಣ್ಣಿನ ಜ್ಞಾನ ವಲಯವನ್ನು ನಾಶಗೊಳಿಸುತ್ತಾ ಬೌದ್ಧಿಕವಾಗಿ ಆಕೆಯನ್ನು ನಿಷ್ಕ್ರಿಯಳನ್ನಾಗಿಸಿದವು.

ಸ್ಮೃತಿಕಾರರ ಧೋರಣೆಗಳನ್ನು ಓದಿದಂತಹ ಸಾಮಾನ್ಯ ಜನರಲ್ಲೂ ಸಹ ಮಹಿಳೆಯನ್ನು ಒಬ್ಬ ಸಾಮಾನ್ಯ ಮನುಷ್ಯನಿಗಿಂತ ತೀರಾ ಕೆಳಮಟ್ಟದಲ್ಲಿ ನೋಡುವಂತಹ ಮನೋಭಾವನೆ ಬೆಳೆಯುವಂತೆ ಮಾಡಿದೆ. ಹೆಣ್ಣು ಎಷ್ಟೇ ವಿದ್ಯಾವಂತಳಾಗಿದ್ದರೂ ಆಕೆಯ ಸ್ವಾತಂತ್ರ್ಯವನ್ನು ಆಕೆಯ ತಿಳಿವಳಿಕೆಯನ್ನು ವ್ಯವಸ್ಥಿತವಾಗಿ ಖಂಡಿಸುತ್ತಾ ಬರಲಾಗಿದೆ. ಸಾಮಾಜಿಕ ಸಂಬಂಧಗಳಲ್ಲಿ ಇದರ ಬಗ್ಗೆ ಹಲವಾರು ಬದಲಾವಣೆಗಳನ್ನು ಚರಿತ್ರೆ ದಾಖಲಿಸಿದ್ದರೂ, ಹೆಣ್ಣಿನ ಬದುಕಿನ ಸ್ವರೂಪ ಗುಲಾಮಗಿರಿಯು ಕಾಲದಿಂದ ಕಾಲಕ್ಕೆ ಹೆಣ್ಣಿನ ಚಹರೆಯನ್ನು ತೊಡೆದುಹಾಕುವ ದಮನಕಾರಿ ಸಂಸ್ಕೃತಿ ಬೆಳೆದುಬಂದಿರುವುದನ್ನು ಕಾಣಬಹುದು.

ಬಾಹ್ಯರೂಪದ ಯಜ್ಞ-ಯಾಗಗಳನ್ನು ಬ್ರಹ್ಮಜ್ಞಾನದ ಸಾಧನವನ್ನಾಗಿ ಕಂಡುಕೊಂಡಿದ್ದ ಧರ್ಮವು ಆಗಮಗಳ ಕಾಲದಲ್ಲಿ ಹೊಸ ರೂಪ ಪಡೆದುಕೊಂಡಿತು. ಯಜ್ಞ-ಯಾಗಾದಿಗಳು ಕಡಿಮೆಯಾದವು. ಇಷ್ಟ ದೇವತಾ ಆರಾದನೆಯ ಜೊತೆಗೆ ದೇವಸ್ಥಾನಗಳ ನಿರ್ಮಾಣದ ಬಗ್ಗೆ ಪ್ರಸ್ತಾಪಿಸಿದರು. ದೇವಸ್ಥಾನಗಳು ಭಾರತೀಯ ಸಂಸ್ಕೃತಿಯ ಆಶ್ರಯ ಸ್ಥಾನಗಳಾಗಿವೆ. ಇಲ್ಲಿ ಸಂಗೀತ, ನೃತ್ಯಾದಿ ಸೇವೆಗಳಿಂದ ದೇವರನ್ನು ಪೂಜಿಸುವುದರ ಜೊತೆಗೆ ಲಲಿತ ಕಲೆಗಳ ಜ್ಞಾನವನ್ನು ವ್ಯವಸ್ಥಿತವಾಗಿ ರೂಪಿಸಿದವು. ಇವು ಜನಸಾಮಾನ್ಯರ ಶಿಕ್ಷಣ ಕೇಂದ್ರಗಳಾಗಿದ್ದವು. ದೇವಸ್ಥಾನದ ಗೋಡೆಗಳ ಮೇಲೆ ಮಹಾಕಾವ್ಯಗಳ ದೃಶ್ಯಗಳನ್ನು ಶಿಲ್ಪಗಳನ್ನು ಕರೆಯಲಾಗುತ್ತಿತ್ತು. ನೃತ್ಯ, ಸಂಗೀತ ಮತ್ತು ನಾಟಕಗಳಂತಹ ಸಾರ್ವಜನಿಕ ಪ್ರದರ್ಶನಗಳು ಜನರಲ್ಲಿ ಕಲಾಭಿರುಚಿಯನ್ನು ಹುಟ್ಟಿಸುತ್ತಿದ್ದವು. ಇವೆಲ್ಲವುಗಳ ಮೂಲಕ ತಿಳಿವಳಿಕೆ ಮೂಡುವಂತಾಯಿತು. ಕೇವಲ ವಸ್ತು ವಿಷಯಕ ಜ್ಞಾನಾರ್ಜನೆಗೆ ಸಹಾಯ ಮಾಡುವುದು ಶಿಕ್ಷಣವಲ್ಲ. ಅದು ಹೊರಗಿನ ವಸ್ತುವಿಗಿಂತ ವೈಯಕ್ತಿಕತೆಗೆ, ಬಾಹ್ಯ ಜಗತ್ತಿಗಿಂತ ಆಂತರಿಕ ಜಗತ್ತಿಗೆ ಹೆಚ್ಚಾಗಿ ಸಂಬಂಧಿಸಿದೆ ಎಂಬುದನ್ನು ವಿವರಿಸಿತು. ಇಂತಹ ತತ್ತ್ವಜ್ಞಾನದ ವೈಚಾರಿಕ ಫಲಗಳು ದಾರ್ಶನಿಕ ಸೂತ್ರಗಳಲ್ಲಿ, ಉಪನಿಷತ್ತುಗಳಲ್ಲಿ ವಿಫುಲವಾಗಿ ಬೆಳೆದು ತರ್ಕವನ್ನು ಉಂಟು ಮಾಡುತ್ತವೆ. ಉಪನಿಷತ್ತುಗಳು ಕ್ರಿಯಾತ್ಮಕವಾದ ಬೌದ್ಧಿಕ ಚಟುವಟಿಕೆಯನ್ನು ಒದಗಿಸುತ್ತದೆ. ಗತಕಾಲದ ತಾರ್ಕಿಕ ಚಟುವಟಿಕೆಗಳು ಧಾರ್ಮಿಕ ಮತ್ತು ತತ್ತ್ವಜ್ಞಾನದ ವಿಚಾರವನ್ನು ಒದಗಿಸುತ್ತವೆ.

ದರ್ಶನಗಳಲ್ಲಿ ಸಾಧಕನ ಸಾಧನೆಯು ಶಿಸ್ತಿನ ತಳಹದಿಯ ಮೇಲೆ ಧಾರ್ಮಿಕ ಚೌಕಟ್ಟಿನಲ್ಲಿಯೇ ಸಾಗುತಿತ್ತು. ಶಿಸ್ತಿನ ಜೀವನದ ಈ ಸಾಮಾನ್ಯ ತಳಹದಿಯ ಮೇಲೆ ಪ್ರತಿಯೊಂದು ದರ್ಶನವು ತನ್ನದೇ ಆದ ಶಿಕ್ಷಣ ಪದ್ಧತಿಯನ್ನು ರಚಿಸಿವೆ. ವಿದ್ಯೆಯಿಲ್ಲದವನು ಪಶುವಿಗೆ ಸಮಾನ' ಎಂಬ ಉಲ್ಲೇಖದಂತೆ, ವ್ಯಕ್ತಿಯ ವ್ಯಕ್ತಿತ್ವದ ವಿಕಾಸವೇ ವಿದ್ಯಾಭ್ಯಾಸದ ಉದ್ದೇಶವಾಗಿದೆ. ಹಿಂದಿನ ಕಾಲದಿಂದಲೂ ಧರ್ಮ ಸಂಸ್ಕೃತಿಗಳ ಸಂರಕ್ಷಣೆ, ವ್ಯಕ್ತಿಯಲ್ಲಿ ಸಾಮಾಜಿಕ ದಕ್ಷತೆ, ಹೊಣೆಗಾರಿಕೆ, ಸಂಸ್ಕೃತಿಯ ರಕ್ಷಣೆ ಹಾಗೂ ಅಭಿವೃದ್ಧಿ ಇವುಗಳನ್ನು ಶಿಕ್ಷಣವು ನಿರ್ವಹಿಸಬೇಕಾಗಿತ್ತು. ಗುರುವಿನ ನೇತೃತ್ವದಲ್ಲಿನ ಬ್ರಹ್ಮಚರ್ಯದ

ನಿಷ್ಠೆ, ಜೀವನದ ಶಿಸ್ತಿನಿಂದ ಶಿಷ್ಯನು ತಾನು ಆಯ್ಕೆ ಮಾಡಿದ ತತ್ತ್ವಜ್ಞಾನದ ಅಭ್ಯಾಸದ ಸಲುವಾಗಿ ತನ್ನನ್ನು ಅರ್ಹನನ್ನಾಗಿ ಮಾಡಿಕೊಳ್ಳಲು ಅವಶ್ಯಕವಾದ ತಿಳಿವಳಿಕೆಯನ್ನು ಪಡೆದುಕೊಳ್ಳುತ್ತಿದ್ದನು. ತತ್ತ್ವಜ್ಞಾನವನ್ನು ಅಭ್ಯಾಸದ ಒಂದು ವಿಷಯವಾಗಿ ಮಾತ್ರ ಪರಿಗಣಿಸದೆ ಅದನ್ನು ಧರ್ಮವೆಂದು, ಸತ್ಯವೆಂದು ತಿಳಿಯಬೇಕೆಂದು ಹೇಳುತ್ತದೆ. ಅಂದರೆ ತತ್ತ್ವಜ್ಞಾನವನ್ನು ಸತ್ಯ ಅಥವಾ ಮುಕ್ತಿಯನ್ನು ಪಡೆಯುವ ಸಾಧನವೆಂದು ಅದನ್ನು ಅಭ್ಯಾಸ ಮಾಡಲಾಗುತ್ತಿತ್ತು. ದರ್ಶನಗಳು ಪ್ರತಿಯೊಂದು ಹಂತದಲ್ಲಿಯೂ ದೇಹ ಮತ್ತು ಭೌತಿಕ ಜಗತ್ತಿನ ಮೇಲೆ ನಿಯಂತ್ರಣ ತರುವುದನ್ನು ಪ್ರತಿಪಾದಿಸುತ್ತಿದ್ದವು. ಇವುಗಳಲ್ಲಿನ ಬೌದ್ಧಿಕ ಜೀವನವು ಧಾರ್ಮಿಕ ವಿಧಿ-ವಿಧಾನಗಳ ಸುತ್ತಲೂ ಕೇಂದ್ರೀಕೃತವಾಗಿರದೆ, ಸ್ವತಂತ್ರ ವಾತಾವರಣದಲ್ಲಿ ಮತ್ತು ಪರಿಶುದ್ಧ ವಿಚಾರದಲ್ಲಿ ಬೆಳೆದುಬಂದಿತು.

ವೇದಾಂತ ಸೂತ್ರಗಳಲ್ಲಿ ವೈದಿಕ ಪಾಠಗಳು ಮತ್ತು ಅವು ಬೋಧಿಸುವ ಜ್ಞಾನ ವಿವೇಕ ಇವುಗಳ ನಡುವಿನ ಅಂತರವನ್ನು ಸೂಚಿಸುತ್ತವೆ. ಇಲ್ಲಿ ಶೂದ್ರರನ್ನು ವೈದಿಕ ಪಾಠಗಳಿಂದ ಮಾತ್ರ ಹೊರಗಿಡಲಾಗಿದೆ. ವೇದಾಂತವು ಶುಚಿ ಕರ್ಮಗಳಿಂದ ಪ್ರಾರಂಭವಾಗುವುದರಿಂದ, ಶೂದ್ರರಿಗೆ ನಿಷಿದ್ಧಗೊಳಿಸಲಾಗಿದೆ. ಪುರಾಣ, ಇತಿಹಾಸದಂತಹ ಗ್ರಂಥಗಳ ಮೂಲಕ ವೇದಗಳು ತಿಳಿಸುವ ಜ್ಞಾನವನ್ನು ತಿಳಿದುಕೊಳ್ಳಲು ಅವಕಾಶವಿತ್ತು. ಆದರೆ ದುಡಿಯುವ ವರ್ಗಕ್ಕೆ ಸೇರಿದ ಶ್ರಮಜೀವಿಗಳಾದ ಶೂದ್ರರಿಗೆ ಸ್ವತಂತ್ರವಾದ ಅಸ್ತಿತ್ವವಿರಲಿಲ್ಲ. ಸಾಮಾಜಿಕ, ಧಾರ್ಮಿಕ ಸ್ಥಾನಮಾನಗಳ ಅವಕಾಶವೇ ಇರಲಿಲ್ಲ. ಮೇಲ್ವರ್ಗದವರ ಆಡಳಿತಾರೂಢರ ಸೇವೆಯನ್ನು ಮಾಡುವುದರಲ್ಲೇ ತಮ್ಮ ಬದುಕಿನ ಸಾರ್ಥಕತೆಯನ್ನು ಶೂದ್ರರು ಕಂಡುಕೊಳ್ಳಬೇಕಾಗಿತ್ತು. ಇದೇ ಅವರ ಬದುಕಿನ ಮುಖ್ಯ ಗುರಿಯಾಗಿತ್ತು. ವೇದೋಪನಿಷತ್ತುಗಳ ಕಾಲದಲ್ಲಿ ಶೂದ್ರರಿಗೆ ಯಾವುದೇ ರೀತಿಯ ಸ್ಥಾನಮಾನಗಳಿರಲಿಲ್ಲವೆಂಬುದು ಸ್ಪಷ್ಟ. ಮನುಸ್ಮೃತಿ ಶೂದ್ರರಿಗೆ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಕ್ಕು ಸವಲತ್ತುಗಳನ್ನು ನಿರಾಕರಿಸಿತ್ತು. ಶೂದ್ರನಿಗೆ ಸೇವಕ ವೃತ್ತಿ ಸ್ವಭಾವ ಜನ್ಯವಾಗಿದ್ದು, ಬ್ರಾಹ್ಮಣರ ಸೇವೆಗಾಗಿಯೇ ಬ್ರಹ್ಮ, ಶೂದ್ರನನ್ನು ಸೃಷ್ಟಿ ಮಾಡಿರುತ್ತಾನೆ ಎನ್ನುವಷ್ಟರ ಮಟ್ಟಿಗೆ ಕೀಳರಿಮೆಯನ್ನು ಬಿತ್ತಿರುವ ಮಾನವ ವಿರೋಧಿ ಕುಟಿಲ ನೀತಿಯನ್ನು ನಾವಿಲ್ಲಿ ಕಾಣುತ್ತೇವೆ. ಶೂದ್ರನನ್ನು ಸರ್ವ ರೀತಿಯಲ್ಲಿ ನಿಯಂತ್ರಿಸಿ ಅವನನ್ನು ಗುಲಾಮನನ್ನಾಗಿ ಇಟ್ಟುಕೊಂಡ ವ್ಯವಸ್ಥೆಯ ಸಂಚನ್ನು ಕಾಣಬಹುದು. ಮನುಸ್ಮೃತಿಯಲ್ಲಿ 'ವೇದಾಭ್ಯಾಸೋ ಬ್ರಾಹ್ಮಣಸ್ಯ' ಎಂದು ಬ್ರಾಹ್ಮಣನಿಗೆ ಮಾತ್ರ ವೇದಾಭ್ಯಾಸದ ಅಂದರೆ ಅಕ್ಷರ ಕಲಿಕೆಯ, ಶಿಕ್ಷಣದ ಅವಕಾಶವನ್ನು ನೀಡಲಾಗಿದೆ. ಆದರೆ ಶೂದ್ರರಿಗೆ ಉಪನಯನದ ಸಂಸ್ಕಾರದ ಅವಕಾಶವಿಲ್ಲದ ಕಾರಣ ಅವರಿಗೆ ವೇದಾಭ್ಯಾಸದ ಅಂದರೆ ಅಕ್ಷರ ಕಲಿಕೆಯ ಅವಕಾಶ ಇರಲೇ ಇಲ್ಲ. ಒಂದು ವೇಳೆ ಶೂದ್ರರು ವೇದಾಭ್ಯಾಸ ನಿಷೇಧವನ್ನು ಮೀರಿ ವರ್ತಿಸಿದರೆ ಅವರ ನಾಲಿಗೆಯನ್ನು ಕತ್ತರಿಸುವಂಥ, ಕಿವಿಯಲ್ಲಿ ಕಾದ ಸೀಸವನ್ನು ಸುರಿಯುವಂತಹ ಅಮಾನವೀಯ ಘೋರ ಶಿಕ್ಷೆಗಳ ಮೂಲಕ, ತಳ ಸಂಸ್ಕೃತಿಯ ಜನ ಸಮುದಾಯವನ್ನು ಅಕ್ಷರ ಕಲಿಕೆಯಿಂದ, ವಿದ್ಯೆಯಿಂದ ದೂರ ಇಟ್ಟಿರುವುದನ್ನು ಕಾಣಬಹುದು. ಸ್ತ್ರೀಯರನ್ನು ಧಾರ್ಮಿಕ ಶೈಕ್ಷಣಿಕ ಸವಲತ್ತುಗಳಿಂದ ದೂರ ಇಟ್ಟಿದ್ದು ಇದೇ ಹಿನ್ನೆಲೆಯಿಂದ ಎಂಬುದನ್ನು ಗಮನಿಸಬೇಕಾಗಿದೆ.

ಪ್ರಾಚೀನ ಕಾಲದ ಶಿಕ್ಷಣ ಬಹಳ ಸಂಕುಚಿತ ಮತ್ತು ಮತೀಯ ಲಕ್ಷಣಗಳಿಂದ ಕೂಡಿದುದಾಗಿದೆ. ಅಲ್ಲದೆ ಮೌಢ್ಯವನ್ನು ಪ್ರೇರೇಪಿಸುವ ಬೆಳೆಸುವ ಕೇಂದ್ರಗಳಾಗಿವು ಮಾರ್ಪಾಡಾಗಿವೆ. ಉಚ್ಚವರ್ಗದವರು ತುಂಬಾ ಪ್ರಯತ್ನ ಪೂರ್ವಕವಾಗಿಯೇ ಕೆಳವರ್ಗದವರಿಗೆ ಶಿಕ್ಷಣ ಸಿಗದಂತೆ ನೋಡಿಕೊಂಡು ಬಂದಿದ್ದಾರೆ. ಅರಿವಿನ, ಬುದ್ಧಿವಿಕಾಸದ ಸಾಧನವಾದ ಶಿಕ್ಷಣವನ್ನು ಸ್ವಪ್ರಯತ್ನದಿಂದ, ಕುತೂಹಲದಿಂದ ಕಲಿತರೆ ಶಂಭೂಕನಂತೆ, ಏಕಲವ್ಯನಂತೆ ಆಗಬೇಕಾಗಿತ್ತು. ಏಕೆಂದರೆ ಶಂಭೂಕನಿಗೆ ಯಾವುದೇ ಸಂಸ್ಕಾರಗಳಿರಲಿಲ್ಲ. ಯಾವ ಗುರುವಿನ ಮಾರ್ಗದರ್ಶನವೂ ದೊರೆಯಲಿಲ್ಲ. ತನ್ನ ಅನುಭವದ ಮೂಲಕ ಜ್ಞಾನವನ್ನು ತನ್ನದಾಗಿಸಿಕೊಂಡನು. ಅದನ್ನು ಸಹಿಸದ ವೈದಿಕರು ರಾಮನಿಂದ ಶಂಭೂಕನ ವಧೆ ಮಾಡಿಸಿದರು. ಅದರಂತೆಯೇ ದ್ರೋಣಾಚಾರ್ಯರು ಏಕಲವ್ಯನಿಗೆ ವಿದ್ಯೆ ಹೇಳಿಕೊಡಲಿಲ್ಲ. ಪ್ರಕೃತಿಯ ಒಡಲಲ್ಲೆ ಕೋಳಿ, ಪಾವುಲಿ, ಕುರಿ, ಮೇಕೆ ಮುಂತಾದ ಪ್ರಾಣಿ ಪಕ್ಷಿಗಳ ಒಡನಾಟದಿಂದ ದ್ರೋಣರ ಪ್ರತಿಮೆಯನ್ನು ನಿಮಿತ್ತ್ಯವಾಗಿಟ್ಟುಕೊಂಡು ವಿದ್ಯೆ ಕಲಿಯುತ್ತಾನೆ. ಇದನ್ನೇ ವೈದಿಕಶಾಹಿ ವ್ಯವಸ್ಥೆ ಗುರು ದಕ್ಷಣೆಯ ರೂಪದಲ್ಲಿ ಆತನ ಹೆಬ್ಬೆರಳನ್ನೇ ಪಡೆಯಿತು. ಇದು ಕೆಳವರ್ಗದವರು ವಿದ್ಯೆ ಕಲಿತು ಮುಂದೆ ಬರಲೇಬಾರದೆಂಬ ಕುಟಿಲ ನೀತಿಯನ್ನು ಕಾಣಬಹುದು. ವಿವೇಕಾನಂದರು ಕೂಡ "ನಿಜವಾದ ವಿದ್ಯೆಯನ್ನು ಪ್ರಕೃತಿಯೊಂದಿಗೆ ಒಂದಾಗಿ ಬೆರೆತು ಕಲಿಯಬೇಕು. ಜ್ಞಾನವನ್ನು ಈ ರೀತಿಯಲ್ಲಿ ಗಳಿಸಬೇಕು. ಹಾಗಲ್ಲದೆ ನೀನು ಪಂಡಿತನ ಶಾಲೆಯಲ್ಲಿ ಕಲಿತರೆ ನೀನೊಬ್ಬ ಮಾನವ ಕಪಿಯಂತಾಗುವೆ"[೨] ಎಂದಿದ್ದಾರೆ. ಆದ್ದರಿಂದ ಬದುಕನ್ನು, ಜಗತ್ತನ್ನು ದಿಟ್ಟತನದಿಂದ ಪರಾಕ್ರಮದಿಂದ ಎದುರಿಸಬೇಕು. ಮಾನವ ತನ್ನ ಶಕ್ತಿ ಸಾಮರ್ಥ್ಯದ ಮೇಲೆ ವಿಶ್ವಾಸವಿಟ್ಟು ಪರಿಶ್ರಮದಿಂದ ಎಲ್ಲಾ ಜ್ಞಾನ, ಕೌಶಲ್ಯಗಳನ್ನು ತನ್ನದಾಗಿಸಿಕೊಳ್ಳಬೇಕು. ಆಗ ಎಲ್ಲವೂ ಲಭಿಸುತ್ತದೆ. ಆಗ ಇದು ಸಮಾನತೆಯನ್ನು ತರುವ ಅಸ್ತ್ರವಾಗುತ್ತದೆ. ಶಿಕ್ಷಣ ದಾಸ ವಿಮೋಚನೆಯ ಅಸ್ತ್ರವಾದಾಗ ಮಾತ್ರ ಶೋಷಣೆ ನಿಲ್ಲುತ್ತದೆ.

ಸ್ಮೃತಿಗಳು ಸ್ತ್ರೀಯರು ವಿದ್ಯಾಭ್ಯಾಸ ಮಾಡುವುದು ಯಜ್ಞ ಯಾಗಾದಿಗಳನ್ನು ಮಾಡುವುದು ಅಪರಾಧವೆಂದು ಹೇಳಿ ಸ್ವಾತಂತ್ರ್ಯಕ್ಕೆ ಅನರ್ಹಳು ಎಂದು ಹೇಳಿದವು. ಹೆಣ್ಣನ್ನು ತೋರಿಕೆಗಾಗಿ ಗೌರವಿಸುತ್ತಲೇ ಅವಳನ್ನು ಅಧೀನ ಮಾಡಿಕೊಂಡ ಸಂಗತಿಗಳೆ ಹೆಚ್ಚಾದವು. ತಾಯ್ತನ ಮತ್ತು ವಿವಾಹದಂತಹ ಸಂಕೋಲೆಗಳಲ್ಲಿ ಬಂಧಿಸಿ ಅವಳನ್ನು ಶಿಕ್ಷಣದಿಂದ ವಂಚಿಸುತ್ತಾ ಬಂದಿರುವ ನೆಲೆಗಳನ್ನು ಕಾಣಬಹುದಾಗಿದೆ. ಆದ್ದರಿಂದ ಅವಳ ಜ್ಞಾನ ವಲಯದಲ್ಲಿ ಕುಸಿತ ಕಂಡುಬಂದಿತು. ಆದರೆ ದರ್ಶನಗಳ ಮೂಲ ಉದ್ದೇಶ ಧರ್ಮದ ಗುರಿಯನ್ನು ಸಾಕಾರಗೊಳಿಸಿ ಜನರ ದೃಷ್ಟಿಕೋನಗಳನ್ನು ತಿದ್ದುವುದಾಗಿತ್ತು. ಈ ಸುಧಾರಣೆ ವೈಚಾರಿಕ ದೃಷ್ಟಿ ಮತ್ತು ವಾಸ್ತವಿಕ ಜ್ಞಾನ ಇವುಗಳಿಂದ ನಡೆಯುತಿತ್ತು. ಇವುಗಳಿಂದ ಜೀವನದ ನವೀನ ಮಾರ್ಗಗಳನ್ನು ಕಂಡುಕೊಳ್ಳುವುದಾಗಿತ್ತು. ಆದರೆ ಸ್ತ್ರೀಯರ ಸ್ಥಾನಮಾನಗಳಲ್ಲಿ ಯಾವುದೇ ಬದಲಾವಣೆಗಳಾಗಲಿಲ್ಲ.

ವೈದಿಕ ಸಂಸ್ಕೃತಿಯು ಯಜ್ಞದ ಸುತ್ತಲೂ ಕೇಂದ್ರಿಕೃತವಾಗಿ ಜೀವನ ಪರ್ಯಂತ ವಿಧಿ-ನಿಯಮಗಳನ್ನು ಪಾಲಿಸುವುದರಲ್ಲಿಯೇ ಮಗ್ನವಾಯಿತು. ಇನ್ನುಳಿದ ಧರ್ಮಗಳು ಜನರ ಬದುಕಿನ ಸುತ್ತಲೂ ಕೇಂದ್ರೀಕೃತವಾಗತೊಡಗಿದವು. ಎಲ್ಲಾ ಧರ್ಮಗಳ ಬೋಧನಾ ಪದ್ಧತಿ ಮೌಖಿಕವಾಗಿಯೇ

ಸಾಗುತ್ತಿತ್ತು. ವಾದ–ವಿವಾದ ಚರ್ಚೆಗಳಿಂದ ಕೂಡಿತ್ತು. ಚಿತ್ತಶುದ್ಧಿಯೇ ಎಲ್ಲಾ ದರ್ಶನಗಳ ಮೊದಲ ಉದ್ದೇಶವಾಗಿರುವುದರಿಂದ, ಅದೇ ದಾರಿಯಲ್ಲಿ ನಡೆದ ಬೌದ್ಧ, ಜೈನ ಧರ್ಮಗಳು ಬಾಹ್ಯಾಚರಣೆಗಳಿಗೆ ಮಹತ್ವ ಕೊಡದೆ ಧಾರ್ಮಿಕ ಮತ್ತು ನೈತಿಕ ಜೀವನಕ್ಕೆ ಬೆಲೆ ಕೊಟ್ಟು ಸರಳ, ನೀತಿಯುತ ಗೃಹಸ್ಥ ಜೀವನದ ಮಹತ್ವವನ್ನು ಎತ್ತಿ ಹಿಡಿದವು. ಅಲ್ಲದೆ ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳೇ ಅಲ್ಲ ಎನ್ನುವ ಮನುವಿನ ಮಾತನ್ನು ಧಿಕ್ಕರಿಸಿ, ಇಂತಹ ದಾಸ್ಯದಿಂದ ಬಿಡುಗಡೆ ಹೊಂದಲು ಪ್ರೇರಣೆ ನೀಡಿದವು ಮತ್ತು ಮಹಿಳೆಯರಿಗೆ ಸ್ಥಾನಮಾನ ನೀಡಿ, ಸಮಾನತೆ ಕುರಿತು ಚಿಂತಿಸಿ, ಧಾರ್ಮಿಕ ಸ್ವಾತಂತ್ರ್ಯ ಕೊಟ್ಟು ಶಿಷ್ಯರನ್ನಾಗಿ ಸ್ವೀಕರಿಸಿ ಮೋಕ್ಷಕ್ಕೆ ಅವಕಾಶ ಒದಗಿಸಿಕೊಟ್ಟವು.

ಬೌದ್ಧ ಧರ್ಮವು ಹಿಂದೂ ಧರ್ಮದ ಅನೇಕ ಸಂಪ್ರದಾಯಗಳಿಗೆ ವಿರುದ್ಧವಾಗಿ ಬೆಳೆದರೂ, ಹಿಂದೂ ಧರ್ಮದ ತಿರುವಿನಿಂದ ಬೇರೆಯಾಗಿರಲಿಲ್ಲ. ಬುದ್ಧನು ಹಿಂದೂ ಧರ್ಮದ ಸಾರಸತ್ವಗಳನ್ನು ಗ್ರಹಿಸಿ, ಅದರ ಮೂಲಕ ದುಃಖ ವಿಮೋಚನೆ, ಮುಕ್ತಿ, ಕರ್ಮ ಸಿದ್ಧಾಂತಗಳನ್ನು ತನ್ನ ಮತದಲ್ಲಿ ಅಳವಡಿಸಿಕೊಂಡನು. ಉಪನಿಷತ್ತುಗಳಂತೆಯೇ ಬುದ್ಧನು ಹಿಂಸಾಪೂರಿತವಾದ ಅಂದಾಚಾರಗಳನ್ನು ವಿರೋಧಿಸಿ, ಅಂತರಂಗ ಶುದ್ಧಿಗೆ ಪ್ರಾಧಾನ್ಯತೆ ಕೊಟ್ಟನು. ಆಚಾರ ವಿಚಾರಗಳನ್ನು ಸಮಾನಾಗಿ ಪಾಲಿಸುವಂತಹ ಮಧ್ಯಮ ಮಾರ್ಗವನ್ನು ಉಪದೇಶ ಮಾಡಿದನು. ಎಲ್ಲರೂ ಸರಳವಾಗಿ ಆಚರಿಸಲು ಅನುಕೂಲವಾಗುವಂತಹ ಅಷ್ಟಾಂಗ ಮಾರ್ಗಗಳನ್ನು ಬೋಧಿಸಿದನು. ಪ್ರತಿಯೊಬ್ಬರೂ ಅವರವರ ಶಕ್ತಿ ಸಾಮರ್ಥ್ಯ, ಅಭಿರುಚಿ, ಆಸಕ್ತಿಗಳಿಗನುಗುಣವಾಗಿ ಬೌದ್ಧಿಕತೆಯನ್ನು ಹೆಚ್ಚಿಸಿಕೊಳ್ಳುವ, ಚಾರಿತ್ರ್ಯವನ್ನು ರೂಪಿಸಿಕೊಳ್ಳುವ ಸಮಾನ ಅವಕಾಶವಿತ್ತು. ಬೌದ್ಧಶಿಕ್ಷಣ ಮತೀಯ ಮತ್ತು ತಾತ್ವಿಕ ಅಂಶಗಳ ಜೊತೆಯಲ್ಲಿಯೇ, ಸಾರ್ವತ್ರಿಕವಾದ ಜಾತ್ಯಾತೀತವಾದ ಶಿಕ್ಷಣ ಕ್ರಮವೂ ಪ್ರಧಾನ ಪಾತ್ರ ವಹಿಸುತ್ತದೆ. ಈ ಶಿಕ್ಷಣ ಕ್ರಮದ ಫಲವಾಗಿ ತಕ್ಷಶಿಲೆ, ನಳಂದಾಗಳಲ್ಲಿ ವಿಶ್ವವಿಖ್ಯಾತ ಅಂತರಾಷ್ಟ್ರೀಯ ಶಿಕ್ಷಣ ಕೇಂದ್ರಗಳು ಅಸ್ತಿತ್ವಕ್ಕೆ ಬರಲು ಸಹಾಯಕವಾಯಿತು. ಹೀಗಾಗಿ ದೇಶದಲ್ಲಿ ಆಧ್ಯಾತ್ಮಿಕ ಹಾಗೂ ಪ್ರಾಪಂಚಿಕ ವಿಷಯವೆರಡರ ಅಗ್ಗಳಿಕೆಯನ್ನು ಶಿಕ್ಷಣದಲ್ಲಿ ಗುರುತಿಸಲು ಅವಕಾಶ ನೀಡಿತು. ಶಿಕ್ಷಣವು ಜೀವನದ ಅನೇಕ ಸಮಸ್ಯೆಗಳಿಗೆ ಸಂಬಂಧಿಸಿದ್ದಾದ್ದರಿಂದ ಅವುಗಳ ಸೂಕ್ತ ಪರಿಹಾರ ಚಟುವಟಿಕೆಗಳು ನಡೆಯುತ್ತಿದ್ದವು. ಇದರಿಂದ ಅರಿಷಡ್ವರ್ಗಗಳಿಂದ ಬಿಡುಗಡೆ ಹೊಂದಿ ನಿರ್ವಾಣ ಸ್ಥಿತಿಗೆ ತಲುಪುದೇ ಜೀವನದ ಪರಮಗುರಿ ಎಂಬುದು ಬೌದ್ಧ ಧರ್ಮದ ಮೂಲ ಮಂತ್ರವಾಗಿದೆ.

'ಅಹಿಂಸಾ ಪರಮೋಧರ್ಮ' ಎಂಬ ಸೂತ್ರದ ಮೇಲೆ ಬೆಳೆದ ಬೌದ್ಧ ಧರ್ಮವು ಮೂಢನಂಬಿಕೆಗಳನ್ನು ಅಳಿಸಿ ಸತ್ಯ, ನೀತಿ, ಧರ್ಮಕ್ಕೆ ಪ್ರಾಮುಖ್ಯತೆ ನೀಡಿತು. ಒಣ ಚರ್ಚೆಗೆ ಆಸ್ಪದ ಕೊಡದೆ ತರ್ಕ, ವಿಚಾರ, ಸ್ವ–ಅನುಭವ ಮತ್ತು ಸ್ವ ಪ್ರಯತ್ನಗಳಿಂದ ಗಳಿಸಿದ ಜ್ಞಾನವನ್ನು ಸಂದೇಶವನ್ನಾಗಿ ಸಾರಿತು. ಅನುಭವಗಳ ಪ್ರತಿಫಲ ಯಾವಾಗಲೂ ನಿಸ್ವಾರ್ಥದಿಂದ ಕೂಡಿರುತ್ತದೆ. ಮಾನವರೆಲ್ಲರೂ ಸಮಾನರು ಎಂದು ಯಾವ ಭೇದ ಭಾವವಿಲ್ಲದೆ ವೇದಗಳ ತತ್ತ್ವಸಾರವನ್ನು ಎಲ್ಲರಿಗೂ ಬೋಧಿಸಿದ. ಸಾವಿರ ಜನರನ್ನು ಜಯಿಸುವುದಕ್ಕಿಂತ ತನ್ನನ್ನು ತಾನು ಗೆಲ್ಲುವುದು ಮುಖ್ಯವಾದದ್ದೆಂದಿದ್ದಾನೆ. ಮಾನವ ತನ್ನರಿವಿನ ಮೂಲಕ ನೈಜಸ್ಥಿತಿಗೆ ಹತ್ತಿರವಾದಂತೆಲ್ಲಾ ಎಲ್ಲವೂ

ಕ್ಷಣಿಕ ಎಂಬ ವಿವೇಕದೊಂದಿಗೆ ನಿರ್ವಾಣದ ಆನಂದಮಯ ಸ್ಥಿತಿಗೆ ತಲುಪುತ್ತಾನೆ. ಇಂತಹ ಅನುಭವಗಳ ಒಟ್ಟು ಮೊತ್ತವೇ ಅರಿವಾಗಿದೆ. ಈ ಅರಿವೆಂಬುದು ಮತ್ತೊಬ್ಬರಿಂದ ಪಡೆದುಕೊಳ್ಳುವಂತಹದ್ದಲ್ಲ. ಅದೊಂದು ಆಂತರಿಕವಾದ ಚಲನಶೀಲ ಗುಣ. ಆದ್ದರಿಂದ ತನ್ನನುಭವದ ಮೂಲಕವೇ ಅರಿವನ್ನು ಪಡೆದುಕೊಳ್ಳಬೇಕು. ಅಲ್ಲಮನ ಬಯಲು ಕಲ್ಪನೆಯೂ ಈ ತತ್ವವನ್ನಾಧರಿಸಿದೆ. ಇದು ಸೂಫಿ, ನಾಥ, ಅವಧೂತದಂತಹ ಮುಂತಾದ ಅನುಭಾವ ಪಂಥಗಳಲ್ಲಿ 'ನಿನ್ನೊಳು ನೀ ತಿಳಿ' ಎಂಬ ತತ್ತ್ವ ಕಂಡುಬರುತ್ತದೆ.

ಬೌದ್ಧಮತ ಅನೇಕ ಶಾಖೆಗಳಲ್ಲಿ ವಿಭಾಗವಾಗಿದ್ದರೂ ಜಗತ್ತಿನ ದುಃಖದ ಉಪಶಮನದ ಗುರಿಯೊಂದಿಗೆ ಕಾರ್ಯಪ್ರವೃತ್ತವಾಯಿತು. ಕೇವಲ ದೇಹ ದಂಡನೆ, ಶುಷ್ಕಪಾಂಡಿತ್ಯದ ಅವಲಂಬನೆಗಳಿಂದ ಸತ್ಯದ ಸಾಕ್ಷಾತ್ಕಾರ ಸಾಧ್ಯವಿಲ್ಲ. ದಾನ, ದಯೆ, ಅನುಕಂಪ, ಪರಿಶುದ್ಧ ಆಚಾರ ವಿಚಾರಗಳಿಂದ ಉದ್ಧಾರವಾಗಬೇಕೆಂದು ಸಾರಿದವು.

ಬೌದ್ಧಧರ್ಮದಂತೆ ಜೈನಧರ್ಮವು ಆಚಾರ ಪ್ರಧಾನವಾದ ವೈದಿಕ ಧರ್ಮಕ್ಕೆ ಪ್ರತಿಯಾಗಿ ಹುಟ್ಟಿಕೊಂಡಿತು. ಎಲ್ಲಾ ಧರ್ಮಗಳಲ್ಲಿರುವಂತೆ ಇಲ್ಲಿಯೂ ಸತ್ಯ, ನೀತಿಗೆ ಹೆಚ್ಚು ಪ್ರಾಮುಖ್ಯತೆ ಇದೆ. ಅಹಿಂಸಾ ತತ್ತ್ವಕ್ಕೆ ವಿಶೇಷ ಮಹತ್ವ ಕೊಡುವ ಜೈನಧರ್ಮ ಅಹಿಂಸೆಯನ್ನು ಮೂಲ ಮಂತ್ರವನ್ನಾಗಿಸಿಕೊಂಡಿವೆ. ಇದು ನಿರಾಶಾವಾದವನ್ನು ನಿರಾಕರಿಸಿ ಬದುಕಿನ ವಾಸ್ತವ ಸ್ವರೂಪವನ್ನು ಒಪ್ಪಿಕೊಳ್ಳುತ್ತದೆ. 'ಕ್ರಿಯೆ ಇಲ್ಲದ ಜೀವನ ಶುಷ್ಕ ಮತ್ತು ಜ್ಞಾನವಿಲ್ಲದ ಕ್ರಿಯೆ ಬರಡು' ಎಂಬ ಶರಣರ ಮಾತಿನಂತೆ ಜೈನ ಧರ್ಮವೂ, ಸಹ ಈ ವಿಚಾರಕ್ಕೆ ಸಂಬಂಧಿಸಿದ ಸಮ್ಯಕ್ ಜ್ಞಾನ ಮತ್ತು ಸಮ್ಯಕ್ ದರ್ಶನಗಳನ್ನು, ಸಮ್ಯಕ್ ಚಾರಿತ್ರ್ಯದಲ್ಲಿ ಸಮನ್ವಯಗೊಳಿಸಿ ಅವುಗಳ ಆಚರಣೆಯಿಂದಲೇ ಮೋಕ್ಷ ಸಾಧ್ಯ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಅಂದರೆ ಒಳ್ಳೆಯ ಚಾರಿತ್ರ್ಯದ ಮೂಲಕ ಪರಿಪೂರ್ಣತೆಯನ್ನು ಪಡೆಯಲು ಸಾಧ್ಯವಾಗುತ್ತದೆ ಎಂದು ಹೇಳುತ್ತದೆ. ಇದರಲ್ಲಿ ಸಮ್ಯದ್ದರ್ಶನ, ಜ್ಞಾನ, ಚಾರಿತ್ರ್ಯಗಳಿಗೆ ಹೆಚ್ಚಿನ ಮಹತ್ವವಿದೆ. ಇದಕ್ಕೆ ಅನ್ವಯವಾಗುವಂತೆ ಜೈನ ತತ್ತ್ವದ ಮೇಲೆ ಬರೆಯಲ್ಪಟ್ಟ ವಡ್ಡಾರಾಧನೆ ಕೃತಿಯ ಅಗ್ನಿಭೂತಿ ವಾಯುಭೂತಿ ಕಥೆಯನ್ನು ವಿವರಿಸಬಹುದಾಗಿದೆ. ಶಿಕ್ಷಣ ಸಂಸ್ಕಾರಗಳಲ್ಲಿ ಉಂಟಾದ ಒಂದು ವಿಶೇಷ ಸಂಗತಿ ಇದು. ಅಗ್ನಿಭೂತಿ, ವಾಯುಭೂತಿ ಇಬ್ಬರ ಮನೋಭಾವ ಬೇರೆಯಾದುದರಿಂದ ಬದುಕಿನಲ್ಲಿ ಅವರು ಹೇಗೆ ಬೇರೆ ಬೇರೆ ಕ್ರಿಯಾಶೀಲಗಳಿಗೆ, ತೊಂದರೆಗಳಿಗೆ ಈಡಾದರು ಎಂಬುದು ಈ ಪಾತ್ರಗಳಿಂದ ತಿಳಿಯುತ್ತದೆ. ಎಷ್ಟು ಓದಿದರೇನು ಎಂಥವರ ಪ್ರಭಾವ ಅವರ ಮೇಲೆ ಬಿದ್ದರೇನು ಕಲಿತವರ ಸ್ವಭಾವ ಅವರನ್ನು ಬೇರೆ ಬೇರೆಯೇ ನಡೆಸುತ್ತದೆ ಎಂಬುದು ಇಲ್ಲಿ ಗೊತ್ತಾಗುತ್ತದೆ. ಯಾವುದನ್ನು ಶಿಕ್ಷಣ ಸಂಸ್ಕಾರ ಎನ್ನುತ್ತೇವೆಯೋ ಅದು ವ್ಯಕ್ತಿಗಳ ಜೀವನವನ್ನು ರೂಪಿಸುತ್ತಾ ಹೋಗುತ್ತದೆ. ಕಲಿತಂತಹ ವಿದ್ಯೆ ಅವರನ್ನು ಮೇಲೆ ತರಬಹುದು. ಇಲ್ಲವೆ ದುರ್ಮಾರ್ಗಗಳಿಗೂ ದೂಡಬಹುದು. 'ವಿದ್ಯೆಯಿಲ್ಲದವನ ಬಾಳು ಹದ್ದಿಗಿಂತ ಕಡೆ', 'ವಿದ್ಯೆಗೆ ವಿನಯವೇ ಭೂಷಣ' ಎನ್ನುವ ಗಾದೆ ಮಾತುಗಳು ಶಿಕ್ಷಣದ ಅವಶ್ಯಕತೆ ಮತ್ತು ಅದರ ಮಹತ್ವವನ್ನು ಒತ್ತಿ ಹೇಳುತ್ತವೆ. ವಿದ್ಯೆ ಎನ್ನುವುದು ಬರೀ ಓದು ಬರಹವಲ್ಲ. ಅದು ಬದುಕನ್ನು ಅರಳಿಸುವ, ಸೃಜನಾತ್ಮಕತೆಯನ್ನು

ಪೋಷಿಸುವ ವ್ಯವಹಾರಿಕೆಯನ್ನು ಕಲಿಸುವ ಬಹುಮುಖ್ಯ ಸಾಧನವಾಗಿದೆ. ಅಂಥ ವ್ಯವಹಾರ ಜ್ಞಾನವಿಲ್ಲದೆ ತಿಳುವಳಿಕೆಯ ಕೊರತೆಯಿಂದ ಇದ್ದು ಇಲ್ಲದಂತೆ ಬದುಕುವ ಪ್ರಜ್ಞಾಹೀನ ಮನುಷ್ಯ ಪಶುವಿಗಿಂತಲೂ ಕಡೆ. ಅದರಂತೆ ಚಾರಿತ್ರ್ಯವಿಲ್ಲದ ವ್ಯಕ್ತಿಗೆ, ದರ್ಶನ ಜ್ಞಾನಗಳು ಸಂಪೂರ್ಣವಾಗಿದ್ದರೂ ಅಷ್ಟೊಂದು ಫಲಕಾರಿಯಾಗಲಾರವು. ಅದಕ್ಕಾಗಿ ಚಾರಿತ್ರ್ಯವು ಅತೀ ಮುಖ್ಯವೆನಿಸುತ್ತದೆ. ಬದುಕಿನಲ್ಲಿ ಅಳವಡಿಸಿಕೊಳ್ಳಲಾರದ ಜ್ಞಾನವು ವ್ಯರ್ಥವೆನಿಸಿದೆ.

ಜೈನ ಮತ್ತು ಬೌದ್ಧ ಧರ್ಮಗಳಲ್ಲಿ ವೈದಿಕರ ಅಕ್ಷರ ವಿರೋಧಿ ಸಂಸ್ಕೃತಿಗಿಂತ ಭಿನ್ನವಾದ ಮತ್ತು ಪ್ರಗತಿಪರವಾದ ನಿಲುವು ಕಂಡುಬರುತ್ತದೆ. ಪಂಪನ ಆದಿಪುರಾಣದಲ್ಲಿ ವೃಷಭದೇವನು ತನ್ನ ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸವನ್ನು ಹೇಳಿಕೊಟ್ಟನು ಎಂಬ ಉಲ್ಲೇಖ ಕಂಡುಬರುತ್ತದೆ. ಇಲ್ಲಿ ಬಹುಮುಖ್ಯವಾದದ್ದು ಜೈನ ಮತ್ತು ಬೌದ್ಧರು ಸ್ತ್ರೀಯರಿಗೆ ಅಕ್ಷರಜ್ಞಾನ ಕೊಡುವಲ್ಲಿ ತೋರಿದ ಪ್ರಗತಿಪರ ಧೋರಣೆ. ಯಾಕೆಂದರೆ ಹೆಣ್ಣು ಮತ್ತು ಶೂದ್ರರು ಒಂದೇ ಎನ್ನುವ ವೈದಿಕ ಸಂಸ್ಕೃತಿಯ ನಿಲುವನ್ನು ವಿರೋಧಿಸಿ ಹೊಸ ತಿರುವು ನೀಡುವಂತಹ ಈ ಧರ್ಮಗಳು ಜನರ ಬದುಕಿನ ಹೊಸ ಹುಟ್ಟಿಗೆ ಕಾರಣವಾದವು.

ಜೈನಧರ್ಮವು ಜಾಗತಿಕ ಸಮಾನತೆ ಮತ್ತು ಬಂಧುತ್ವಕ್ಕೆ ಬಹಳ ಮಹತ್ವ ನೀಡುತ್ತದೆ. ಒಂದು ವಸ್ತುವಿಷಯದ ಬಗ್ಗೆ ಜೀವನದ ಅನುಭವಗಳ ಮೂಲಕ ಅನೇಕ ಮಾರ್ಗಗಳಿಂದ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿ ನೋಡುವುದರಿಂದ ಸರಿಯಾದ ತಿಳುವಳಿಕೆ ಮೂಡುತ್ತದೆ. ಇದನ್ನೇ ಜೈನರು 'ಅನೇಕಾಂತ ಸಿದ್ಧಾಂತ' ಎಂದು ಕರೆದಿದ್ದಾರೆ. ಇದು ಪೂರ್ಣಜ್ಞಾನ ಹೊಂದಲು ಅವಶ್ಯವೆಂದು ಜೈನರು ಒಪ್ಪಿಕೊಂಡು, ಅನುಸರಿಸಲು ಸೂಚಿಸಿದ್ದಾರೆ. ದೇಹದ ನಶ್ವರತೆ, ಭವದ ಸಂಕಟವನ್ನು ತೊಡೆದು ಹಾಕಲು ಹೇಳಿದಂತಹ ಈ ಧರ್ಮಗಳು ಬುದ್ಧ, ಮಹಾವೀರರ ನಂತರದಲ್ಲಿ ಬೌದ್ಧ ಜೈನ ವಿಹಾರಗಳು ರಾಜರಿಂದ, ಧನಿಕರಿಂದ ಅಪಾರವಾದ ಸಂಪತ್ತಿನ ಸಂಗ್ರಹದಲ್ಲಿ ತೊಡಗಿ ಧರ್ಮದ ಅಸ್ತಿತ್ವಕ್ಕೆ ಧಕ್ಕೆ ಉಂಟು ಮಾಡಿತು.

ಈ ಧರ್ಮಗಳ ತಿಕ್ಕಾಟದಲ್ಲಿ ಜೈನ ಬೌದ್ಧಧರ್ಮಗಳಿಂದ ಹಿಂದೂ ಧರ್ಮದ ಅಸ್ತಿತ್ವಕ್ಕೆ ಧಕ್ಕೆಯಾದಾಗ ಮಧ್ವ, ಶಂಕರ, ರಾಮಾನುಜರಂತಹವರು ಇವುಗಳಲ್ಲಿ ಅಡಗಿರುವಂತಹ ಉತ್ತಮಾಂಶಗಳನ್ನು ಗ್ರಹಿಸಿ ಅಂದಿನ ಜನತೆಯಲ್ಲಿ ರೂಢಿಯಲ್ಲಿದ್ದ ಆಚಾರಗಳನ್ನು ಖಂಡಿಸಿ, ಕ್ಷುದ್ರದೇವತೆಗಳ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸಾರೂಪದ ಕ್ರಿಯಾಚಾರಗಳನ್ನು ಬಿಡಿಸಿದರು. ಜನರಲ್ಲಿ ಅಧ್ಯಯನ ಶಿಸ್ತನ್ನು ಮೂಡಿಸಿ ಶುದ್ಧವಾದ ಜ್ಞಾನವನ್ನು ಬೆಳೆಸಲು ಅನೇಕ ಗ್ರಂಥಗಳನ್ನು ಬರೆದರು. ವೇದಾಂತದ ಅಭ್ಯಾಸವು ವ್ಯಕ್ತಿತ್ವದ ತಳಹದಿಯ ಮೇಲೆ ಸಾಗಿದೆ. ಅದಕ್ಕಾಗಿ ಶಂಕರರು ಧರ್ಮದ ವಿವೇಚನೆಯಿಂದ ಆತ್ಮಜ್ಞಾನವನ್ನು ಪಡೆಯಬೇಕಾದರೆ ಹೆಚ್ಚಿನ ಸಿದ್ಧತೆ ಬೇಕೆಂದಿದ್ದಾರೆ.

ಶಂಕರರು ಬ್ರಹ್ಮ ಮತ್ತು ಜೀವಿಗಳು ಬೇರೆ ಬೇರೆಯಲ್ಲ ಒಂದೇ ಎಂಬ ಅದ್ವೈತ ತತ್ತ್ವವನ್ನು ಪ್ರತಿಪಾದಿಸಿದರು. ಈ ತತ್ತ್ವದಿಂದ ಮನುಷ್ಯ ಆಲಸ್ಯತನದಿಂದ ದೂರವಾಗಿ ಮನಸ್ಸು ದೇಹವನ್ನು ತಪಸ್ಸಿನಿಂದ ಹತೋಟಿಗೆ ತಂದುಕೊಂಡು ಏಕಾಗ್ರತೆಯನ್ನು ಪಡೆಯಬೇಕು ಎಂದು ಹೇಳಿದ್ದಾರೆ.

ಇದು ನಾನು ನನ್ನದು ಎಂಬ ಮಮಕಾರವನ್ನು ಅಳಿಸಿ ಹಾಕಿ, ಜೀವನದ ಭಿನ್ನವಾದ ಮೌಲ್ಯಗಳ ಹೊಸ ವ್ಯವಸ್ಥೆಯನ್ನು ಕಂಡುಕೊಳ್ಳುವಂತೆ ಮಾಡುತ್ತದೆ. ಆದರೆ ಇದು ಲೌಕಿಕ ಜಗತ್ತಿನ ಸಾಮಾಜಿಕ, ಆರ್ಥಿಕ, ಅಸಮಾನತೆಗಳ ಕುರಿತು ಹೇಳುವುದಿಲ್ಲ. ಇದು ಕೇವಲ ಬೌದ್ಧಿಕ ಲೋಕದ ವಿವರಣೆಯನ್ನು ನೀಡಿತೇ ವಿನಹ, ಶ್ರಮಿಕ ವರ್ಗದ ಪ್ರಸ್ತಾಪವೇ ಮಾಡಿಲ್ಲ. ಈ ಸಿದ್ಧಾಂತವು ವೈದಿಕ ಚಿಂತನೆಗಳ ಚೌಕಟ್ಟಿನಲ್ಲಿಯೇ ವ್ಯವಹರಿಸಿತು. ಆದರೆ ಅದನ್ನು ಒಡೆಯುವ ಕೆಲಸ ಮಾಡಲಿಲ್ಲ. ಆತ್ಮಜ್ಞಾನ ಪಡೆಯಲು ಭಕ್ತಿ, ಜ್ಞಾನ ಮಾರ್ಗಗಳನ್ನು ಅನುಸರಿಸಬಹುದು ಎಂಬ ಶಂಕರರ ಚಿಂತನೆ ಜನಸಾಮಾನ್ಯರಿಂದ ದೂರವೇ ಉಳಿಯಿತು. ವೈದಿಕ ಧರ್ಮದಲ್ಲಿರುವಂತೆಯೇ ಕೆಳವರ್ಗದ ಜನರ ಬಗೆಗಿನ ಅಭಿಪ್ರಾಯಗಳು ಶಂಕರರಲ್ಲಿಯೂ ಮುಂದುವರಿದವು.

ರಾಮಾನುಜಾಚಾರ್ಯರರ ವಿಶಿಷ್ಟಾದ್ವೈತದ ಪ್ರಕಾರ ಜಗತ್ತು ಮತ್ತು ಬ್ರಹ್ಮ ಎರಡು ಸತ್ಯವಾದದ್ದು. "ಜ್ಞಾನ ಮಾರ್ಗವೆಂದರೆ ಇವರ ಪ್ರಕಾರ ಬ್ರಹ್ಮ ಮತ್ತು ಜಗತ್ತು ಎರಡೂ ಸತ್ಯ ಎಂಬುದನ್ನು ಅರಿತು ಜಗತ್ತನ್ನು ಪವಿತ್ರ ಭಾವನೆಯಿಂದ ಕಂಡುಕೊಂಡು ಜಗತ್ತಿನ ಮೌಲ್ಯಗಳನ್ನು ಸದುಪಯೋಗ ಪಡಿಸಿಕೊಳ್ಳುವುದರ ಮೂಲಕ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬೇಕು. ಬ್ರಹ್ಮ ಸಾಕ್ಷಾತ್ಕಾರಕ್ಕೆ ಜ್ಞಾನಮಾರ್ಗಕ್ಕಿಂತ ಸುಲಭ ಮಾರ್ಗವೆಂದರೆ ಭಕ್ತಿಮಾರ್ಗ. ಭಗವಂತನಲ್ಲಿ ಸಂಪೂರ್ಣ ಶ್ರದ್ಧೆಯನ್ನಿರಿಸಿ ಎಲ್ಲವೂ ಭಗವಂತನ ಸ್ವರೂಪವೇ ಎಂಬ ಭಾವನೆಯಿಂದ ಭಗವದ್ ಸಾಕ್ಷಾತ್ಕಾರವನ್ನು ಪಡೆಯಬಹುದು."[೩] ಶಿಸ್ತು ಮತ್ತು ಅನುಭವಗಳ ಮೂಲಕ ಯೋಗ್ಯತೆ ಪಡೆದವನು ಬ್ರಹ್ಮಜ್ಞಾನ ಪಡೆಯಲು ಅರ್ಹನಾಗುತ್ತಾನೆ. ಇಲ್ಲಿ ಆಚಾರಕ್ಕಿಂತ ಜ್ಞಾನದ ಮಹತ್ವ ದೊಡ್ಡದು. ಸುಜ್ಞಾನದಿಂದ ಜಾಗೃತರಾಗಿ, ಎಲ್ಲವನ್ನು ಭಗವಂತನಿಗೆ ಅರ್ಪಣೆ ಮಾಡಿ, ಭಕ್ತಿಯಿಂದ ಉಪಾಸನೆ ಮಾಡಿದರೆ ಎಲ್ಲಾ ಪಾಶಗಳು ಹರಿದು ಮುಕ್ತಿಗೆ ಪಾತ್ರರಾಗುವರು ಎಂದು ಹೇಳಿದ್ದಾರೆ. ಸಂಪೂರ್ಣ ಶರಣಾಗತಿಯಿಂದ ಬೇಧ ನಿವಾರಣೆಯಾಗುತ್ತದೆ ಎಂಬ ರಾಮಾನುಜರ ಈ ಮಾತು ಉಪನಿಷತ್ತುಗಳನ್ನು ಆಧರಿಸಿದ್ದು. ಸಂಸಾರವನ್ನು ಬಂಧನ, ಸಂಸಾರದಿಂದ ಬಿಡುಗಡೆ ಮಾರ್ಗವನ್ನು ಸೂಚಿಸುವವನು ಪರಮಾತ್ಮ ಎಂಬುವ ಮಾತು ಕೇವಲ ಧಾರ್ಮಿಕ ಜಗತ್ತಿಗೆ ಸಂಬಂಧಿಸಿದ್ದೇ ಹೊರತು, ಮಾನವನ ದೈನಂದಿನ ಬದುಕಿಗೆ ಸಂಬಂಧಿಸಿದ್ದಲ್ಲ. ಆದರೆ ಸಮಾಜದ ಕೆಳವರ್ಗದ ಜನರು ಮೋಕ್ಷಕ್ಕೆ ಅರ್ಹರು ಎಂದು ಹೇಳಿದ್ದು ಇವರ ವಿಶೇಷತೆಯಾಗಿದೆ. ಇದಲ್ಲದೆ ಅಂದಿನ ಜಾತಿ ಆಧಾರಿತ ಸಮಾಜವನ್ನು ಪ್ರಶ್ನಿಸುವ ಬದಲು ಧರ್ಮದ ಮೂಲಕ ಸಮಾಜವನ್ನು ನೋಡುವ, ಅಲೌಕಿಕ ಪ್ರಪಂಚವೊಂದನ್ನು ನಿರ್ಮಿಸುವ ಕೆಲಸ ಮಾಡಿದರು.

ಮಧ್ವಾಚಾರ್ಯರ ದ್ವೈತ ಸಿದ್ಧಾಂತ ವೇದಾಂತ ದರ್ಶನವನ್ನೇ ಅವಲಂಬಿಸಿದೆ. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ ದರ್ಶನಗಳಲ್ಲಿ ಅಡಕವಾಗಿದ್ದ ದ್ವೈತ ತತ್ತ್ವಗಳನ್ನು ಪ್ರಚುರಪಡಿಸಿದರು. ಇವರ ಪ್ರಕಾರ ಜಗತ್ತು ಮತ್ತು ಬ್ರಹ್ಮ ಬೇರೆ ಬೇರೆಯಾಗಿದೆ. ಜಗತ್ತು ಎಲ್ಲಾ ರೀತಿಯಿಂದಲೂ ಅಪೂರ್ಣವಾದದ್ದು. ಬ್ರಹ್ಮ ಮಾತ್ರ ಪೂರ್ಣ ಸತ್ಯವೆಂದು ಒಪ್ಪಿಕೊಂಡಿದೆ. ಜಗತ್ತಿನಲ್ಲಿರುವ ಮನುಷ್ಯನೂ ಅಪೂರ್ಣನೆ ಆಗಿರುತ್ತಾನೆ. ಜ್ಞಾನ, ಭಕ್ತಿಮಾರ್ಗಗಳ ಮೂಲಕ ದೇವರ ಸಾಮಿಪ್ಯ ಲಭಿಸಬಹುದೇ

ವಿನಃ ದೈವತ್ವ ಪ್ರಾಪ್ತಿಯಾಗುವುದಿಲ್ಲವೆಂದು ನಂಬಿರುವುದರಿಂದ ಪ್ರಪಂಚದ ದುಃಖದಿಂದ ದೂರವಾಗಿ ದೇವರ ಸಾಮಿಪ್ಯ ಪಡೆಯುವುದೇ ಮೋಕ್ಷವೆಂದು ನಂಬಿದ್ದಾರೆ. ಈ ದೇವರ ಸಾಮಿಪ್ಯಕ್ಕಾಗಿ ನಮ್ಮ ಜ್ಞಾನದ ಪ್ರತಿ ಹಂತದಲ್ಲೂ ನಾವು ತಾಳುವ ನಿಲುವು ಮುಂದಿನ ಜಿಜ್ಞಾಸೆಗೆ ಪ್ರಚೋದಕವಾದಾಗ ಮಾತ್ರ ಅದು ನಿರ್ದಿಷ್ಟವಾಗುತ್ತದೆ. ಆದ್ದರಿಂದ ಜಿಜ್ಞಾಸೆಯು ಸದಾ ಸಾಗುತ್ತಿರಬೇಕೆಂದು ಮಧ್ವರು ತಮ್ಮ ಸಿದ್ಧಾಂತದಲ್ಲಿ ವಿವರಿಸಿದ್ದಾರೆ.

ಮಧ್ವರ ಮೋಕ್ಷದ ಕಲ್ಪನೆ ಶಂಕರ ಮತ್ತು ರಾಮಾನುಜರಿಗಿಂತ ಭಿನ್ನವಾಗಿಯೇನು ಕಂಡುಬರುವುದಿಲ್ಲ. ಮಧ್ವರ ಪ್ರಕಾರ ಮೋಕ್ಷವೆಂದರೆ ಸಂಸಾರದ ಯಾತನೆಗಳಿಂದ ಬಿಡುಗಡೆ ಹೊಂದುವುದು. ಅದು ಭಗವಂತನ ಕೃಪೆಯಿಂದ ಮಾತ್ರ ಸಾಧ್ಯ. ಈ ಕಲ್ಪನೆ ಮನುಷ್ಯರ ಸಹಜ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿ ಭಗವಂತನನ್ನು ಅವಲಂಬಿಸುವಂತೆ ಮಾಡಿತು. ಇದು ಧಾರ್ಮಿಕ ಪ್ರಭುತ್ವವನ್ನು ಇನ್ನಷ್ಟು ಗಟ್ಟಿಗೊಳಿಸಬಹುದೇ ವಿನಃ ಮಾನವನನ್ನು ವಿವಿಧ ದಾಸ್ಯಗಳಿಂದ ಬಿಡುಗಡೆಗೊಳಿಸಲು ಸಾಧ್ಯವಿಲ್ಲ. ಲೌಕಿಕ ಜಗತ್ತಿನ ದಾಸ್ಯ ಮನೋಧರ್ಮವನ್ನು ಅಲೌಕಿಕತೆಯ ಹೆಸರಿನಲ್ಲಿ ಮುಂದುವರಿಸಿಕೊಂಡು ಹೋಗಿರುವುದನ್ನು ಕಾಣಬಹುದು.

ಅದ್ವೈತ, ದ್ವೈತ ಮತ್ತು ವಿಶಿಷ್ಟಾದ್ವೈತ ಸಿದ್ಧಾಂತಗಳು ಸಮಾಜದಲ್ಲಿನ ದಾಸ್ಯ ಮನೋಭಾವನೆ, ಅಸಮಾನತೆ, ಶೋಷಣೆಗಳನ್ನು ಸಮರ್ಥಿಸುವ ರೀತಿಯಲ್ಲಿ ಕಂಡುಬಂದವು. ಈ ಸಿದ್ಧಾಂತಗಳು ಸಮಕಾಲೀನ ಸಮಾಜದ ಸಮಸ್ಯೆಗಳನ್ನು ಪ್ರತಿಬಿಂಬಿಸಿದವೇ ಹೊರತು, ಪರಿಹಾರದ ಕುರಿತು ಚಿಂತಿಸಲಿಲ್ಲ. ಎಲ್ಲ ಸಮಸ್ಯೆಗಳಿಗೂ ಭಗವಂತನಿಗೆ ಶರಣಾಗತಿಯಾಗುವುದು ಪರಿಹಾರ ಎನ್ನುವ ದೇವಕೇಂದ್ರಿತ ವಾದವು ಸಮಾಜವನ್ನು ಇನ್ನಷ್ಟು ಸಂಕೀರ್ಣಗೊಳಿಸಿತು. ಆದರೆ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಈ ಮಧ್ವತತ್ತ್ವಗಳನ್ನು ಹರಿದಾಸರು ಒಪ್ಪಿಕೊಂಡಿದ್ದಾರೆ. ಇವರು ಪರಮಾತ್ಮನ ಅನುಭವವನ್ನು ಹೊಂದಲು ವಿದ್ವತ್ತು ಮುಖ್ಯವಲ್ಲ. ಅಚಲವಾದ ಸಾತ್ವಿಕ ಭಕ್ತಿ ಮುಖ್ಯ. ಆದ್ದರಿಂದ ಭಕ್ತಿಯಿಂದ ಪರಮಾತ್ಮ ಒಲಿಸುತ್ತಾನೆ ಎಂದು ನಂಬುತ್ತಾರೆ. ಪರಮಾತ್ಮನ ಕರುಣೆಯಿಂದ ಮನುಷ್ಯ ಸಂಸಾರ ಬಂಧನದಿಂದ ಬಿಡುಗಡೆ ಪಡೆಯುತ್ತಾನೆಂಬುದು ಹರಿದಾಸರ ತತ್ತ್ವಾಗಿದೆ.

ಪಾಶುಪತ, ಕಾಳಮುಖ, ಲಕುಲೀಶ, ವೀರಶೈವ ಮುಂತಾದ ಶೈವ ಶಾಖೆಗಳಲ್ಲಿ ಮೊದಲು ದ್ವೈತ ಭಾವನೆಯಿಂದ ಆರಂಭಗೊಂಡ ಜೀವನ ಕ್ರಮ, ಅದ್ವೈತ ಭಾವದಲ್ಲಿ ಒಂದಾಗುತ್ತದೆ. ಇಂದ್ರಿಯಾಸಕ್ತಿಯಿಂದ ಕೂಡಿದ ಮನುಷ್ಯ ಸಂಸಾರಿಕ ಸುಖ-ದುಃಖಗಳನ್ನು ಅನುಭವಿಸುತ್ತಾ ಬಂಧಿಯಾಗುತ್ತಾನೆ. ಸ್ವಪ್ರಯತ್ನದಿಂದ ಈ ಬಂಧನದಿಂದ ಹೊರಬರಬೇಕಾದರೆ ಶಾಸ್ತ್ರಜ್ಞಾನವನ್ನು ಗ್ರಹಿಸಿ ಸಾಧನಾಭ್ಯಾಸಗಳನ್ನು ಮಾಡಿದರೆ ಬ್ರಹ್ಮತ್ವವನ್ನು ಪಡೆದುಕೊಳ್ಳಬಹುದು. ಈ ಬ್ರಹ್ಮಜ್ಞಾನ, ಕ್ರಿಯೆ ಮತ್ತು ಜ್ಞಾನ ಸ್ವರೂಪದ್ದಾಗಿದೆ. ಶೈವ ದರ್ಶನಗಳಲ್ಲಿ ವೀರಶೈವ ತತ್ತ್ವಗಳು ಕರ್ಮ ಮತ್ತು ಜ್ಞಾನದ ಸಮನ್ವಯದಿಂದ ಕೂಡಿರುವುದರಿಂದ ಹೆಚ್ಚು ಪ್ರಚಾರಕ್ಕೆ ಬಂದ ಧರ್ಮವಾಗಿದೆ. ಇದು ಯೋಗ, ಕ್ರಿಯೆ, ಜ್ಞಾನ, ಕರ್ಮಗಳ ಸಂಗಮದಿಂದ ಹುಟ್ಟಿದೆ. ಇಷ್ಟಲಿಂಗಾರ್ಚನೆಗೆ ಅತ್ಯಂತ ಮಹತ್ವ ನೀಡುವ ವೀರಶೈವ ದರ್ಶನ, ಸ್ತ್ರೀ-ಪುರುಷರಿಬ್ಬರಿಗೂ ಇಷ್ಟಲಿಂಗಧಾರಣಕ್ಕೆ ಅವಕಾಶ ಕಲ್ಪಿಸಿದೆ.

ಜ್ಞಾನ-ಕ್ರಿಯೆಗಳ ಮೂಲಕ ಸ್ವಾನುಭವ ಪಡೆಯುವ ಈ ದರ್ಶನವು ಅರಿವೇ ಗುರು ಎನ್ನುವ ತತ್ತ್ವವನ್ನು ಮುಖ್ಯವಾಗಿ ಪ್ರತಿಪಾದಿಸುತ್ತದೆ. ನುಡಿದಂತೆ ನಡೆಯುವ ಆತ್ಮಸಾಕ್ಷಿಯ ವಾಣಿಯಂತೆ ನಡೆಯುವ ಸ್ವಾಭಿಮಾನದ ನಡೆ ಇವರಲ್ಲಿ ಕಾಣಬಹುದು.

ಒಂದೆಡೆ ವೈದಿಕಶಾಹಿ ಪ್ರಣೀತ ಆಲೋಚನಾ ಕ್ರಮಗಳು ಮನುಷ್ಯನ ಸೃಜನಶೀಲ ಆಲೋಚನಾ ಕ್ರಿಯೆಯನ್ನು ನಾಶಗೊಳಿಸಿದ್ದವು. ಅನುಭವ ಮಂಟಪದಲ್ಲಿ ಕಾಯಕದ ಮಹತ್ವವನ್ನು ಒತ್ತಿ ಹೇಳಿದ್ದರ ಉದ್ದೇಶ ದೇವಸ್ಥಾನ, ಅಗ್ರಹಾರ, ಮಠಗಳಲ್ಲಿ ಕುಳಿತು ಕಲಿಸುತ್ತಿದ್ದ ಕಾಯಕವಲ್ಲದ ವಿದ್ಯೆಗೆ ಎಂಬುದು ಮುಖ್ಯ ವಿಚಾರವಾಗಿತ್ತು. ಕಾಯಕ ಶಿಕ್ಷಣದಲ್ಲಿ ಸಾಮೂಹಿಕ ಜ್ಞಾನದ ಕ್ರಿಯಾಪ್ರಧಾನ ನೆಲೆಗಳು ಬಹುಮುಖ್ಯವಾದವು. ಪ್ರತಿಷ್ಠಿತ ವರ್ಗಗಳಿಗೆ ಮಾತ್ರ ಸೀಮಿತವಾಗಿದ್ದ ಜ್ಞಾನವು ಅನುಭವ ಜನ್ಯ ಜ್ಞಾನದ ನೆಲೆಗಳಾಗಿ ಸಾರ್ವತ್ರಿಕಗೊಳಿಸಿದವು. ವ್ಯಕ್ತಿಮುಖಿಯಾಗಿದ್ದ ಜ್ಞಾನವನ್ನು ಜನಮುಖಿಗೊಳಿಸಿದ ಕೀರ್ತಿ ಹನ್ನೆರಡನೆ ಶತಮಾನದ ವಚನಸಾಹಿತ್ಯಕ್ಕೆ ಸಲ್ಲುತ್ತದೆ.

ವಚನ ಸಾಹಿತ್ಯವು ತನ್ನ ಸ್ವಾಭಿಮಾನಿ ಬದುಕಿನ ತಿಳಿವಳಿಕೆಯ ಮೂಲಕ ಅಂದಿನ ಸಮಾಜದ ಲಕ್ಷಣಗಳಾದ ಜಾತಿವ್ಯವಸ್ಥೆ, ಅಸ್ಪೃಶ್ಯತೆ ದಾಸ್ಯ ಮನೋಭಾವ ಮುಂತಾದವುಗಳನ್ನು ಸಮರ್ಥವಾಗಿ ಪ್ರತಿಬಿಂಬಿಸಿ ಪರಿಹಾರದ ಮಾರ್ಗವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿತು. ಸಾಮಾಜಿಕ ಸಂದರ್ಭದಲ್ಲಿ ಬ್ರಾಹ್ಮಣ ವರ್ಗ ಮತ್ತು ಬ್ರಾಹ್ಮಣೇತರ ಮೇಲ್ವರ್ಗದ ಜನರು ನಡೆಸುತ್ತಿದ್ದ ಶೋಷಣೆ ಜನರಲ್ಲಿ ಅಸಮಾಧಾನ ಉಂಟು ಮಾಡಿದ್ದವು. ಕೃಷಿಕರು, ವರ್ತಕರು, ಕುಶಲಕರ್ಮಿ ವರ್ಗಗಳಂತಹ ಶ್ರಮಜೀವಿಗಳು ಬ್ರಾಹ್ಮಣವನ್ನು ವಿರೋಧಿಸಿದರೂ, ಧರ್ಮವನ್ನು ನಿರಾಕರಿಸುವಂತಿರಲಿಲ್ಲ. ಧರ್ಮವು ಅಂದಿನ ಸಂದರ್ಭದಲ್ಲಿ ಬದುಕಿನ ಅನಿವಾರ್ಯ ಅಂಗ ಎನ್ನುವ ರೀತಿಯಲ್ಲಿ ವ್ಯಾಖ್ಯಾನಗೊಂಡಿದೆ.

ವೀರಶೈವ ಧರ್ಮದ ಕಾಯಕವೇ ಕೈಲಾಸ ಎಂಬ ಸಿದ್ಧಾಂತ ವರ್ತಕರು, ಕುಶಲಕರ್ಮಿಗಳು, ಕೃಷಿಕರು ಇತರ ಸಾಮಾನ್ಯ ಜನರನ್ನು ಆಕರ್ಷಿಸಿತು. ಇವರಿಗೆ ವೃತ್ತಿ ಎಂದರೆ ಬರೀ ಕೆಲಸವಾಗಿರಲಿಲ್ಲ. ಅದೊಂದು ಜೀವನ ವಿಧಾನವಾಗಿತ್ತು. ಜಾತಿ, ಧರ್ಮ, ಲಿಂಗ ಮುಂತಾದ ಮಾನವ ನಿರ್ಮಿತ ಸಂಕೋಲೆಗಳನ್ನು ಮೀರಿದ್ದಾಗಿತ್ತು. ಆದರೆ ಅಂದಿನ ಸಮಾಜದಲ್ಲಿ ಶ್ರಮಕ್ಕೆ ತಕ್ಕ ಪ್ರತಿಫಲವಾಗಲಿ, ಗೌರವವಾಗಲಿ ಸಿಗುತ್ತಿರಲಿಲ್ಲ. ಇಲ್ಲಿ ಬಸವಣ್ಣನವರು ವ್ಯಕ್ತಿಯು, ತನ್ನ ಕೆಲಸದ ಮೇಲೆ ವಿಶ್ವಾಸವಿಡುವಂತೆ ಮಾಡಿ ಪರಿಶ್ರಮದಾಯಕ ಶ್ರದ್ಧೆಯ ಕೆಲಸದಲ್ಲಿಯೇ ಮೋಕ್ಷ ಕಾಣುವ ಮಾರ್ಗವನ್ನು ಸೂಚಿಸಿದರು. ಬದುಕೆ ಒಂದು ಕಾಯಕ. ಬದುಕನ್ನು, ಜಗತ್ತನ್ನು ದಿಟ್ಟತನದಿಂದ ಪರಾಕ್ರಮದಿಂದ ಎದುರಿಸಬೇಕು. ಮಾನವ ತನ್ನ ಶಕ್ತಿ ಸಾಮರ್ಥ್ಯದ ಮೇಲೆ ವಿಶ್ವಾಸವಿಟ್ಟು ಕೆಲಸ ಮಾಡಿದಾಗ ಮೋಕ್ಷ ಪ್ರಾಪ್ತಿ ಎನ್ನುವುದನ್ನು ತಮ್ಮ ವಚನಗಳ ಮೂಲಕ ತೋರಿಸಿಕೊಟ್ಟರು.

ಸಾಮಾಜಿಕ ಸುಧಾರಣಾ ಸಂದರ್ಭದಲ್ಲಿ ಶ್ರಮಿಕ ವರ್ಗಕ್ಕೆ, ಅದರ ಕೆಲಸಕ್ಕೆ ಮಾನ್ಯತೆ ಗೌರವಗಳನ್ನು ಒದಗಿಸಿಕೊಟ್ಟ ವಚನ ಚಳುವಳಿ ಮಹಿಳೆಯರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪ್ರೋತ್ಸಾಹಿಸುವುದರ ಜೊತೆಗೆ ಸ್ತ್ರೀಯರಿಗೆ ಒಂದು ಉನ್ನತವಾದ ಸ್ಥಾನವನ್ನು ದೊರಕಿಸಿಕೊಟ್ಟಿತು. ಸಾಮಾಜಿಕ ಚಳುವಳಿಯಲ್ಲಿ ಎಲ್ಲಾ ವರ್ಗದ ಮಹಿಳೆಯರು ಭಾಗವಹಿಸಿ ಸಮಾಜದಲ್ಲಿರುವಂತಹ

ಅಪನಂಬಿಕೆಗಳನ್ನು ಒಡೆದುಹಾಕುವಂತಹ ಪ್ರಯತ್ನ ಮಾಡಿದ್ದಾರೆ. ಇವರಲ್ಲಿ ಯಾರು ಉನ್ನತ ವಿದ್ಯಾಭ್ಯಾಸ ಮಾಡಿ ಬಂದವರಲ್ಲ. ತಮ್ಮ ಕಾಯಕದಿಂದ ಪಡೆದುಕೊಂಡ ಜ್ಞಾನದಿಂದಲೇ ಇಡೀ ವ್ಯವಸ್ಥೆಯ ವಿರುದ್ಧ ದಿಟ್ಟತನದಿಂದ ಪುರುಷ ಪ್ರಾಧಾನ್ಯತೆಯನ್ನು ಪ್ರಶ್ನಿಸುತ್ತಾ ಸಮಾಜದ ಡೊಂಕನ್ನು ತಿದ್ದುವ ಪ್ರಯತ್ನ ಮಾಡಿದ್ದಾರೆ. ಸ್ತ್ರೀ ಸ್ವಾತಂತ್ರ್ಯಕ್ಕೆ ಅನರ್ಹಳು ಎಂಬ ಮನುವಿನ ಮಾತನ್ನು ಧಿಕ್ಕರಿಸಿ ವೇದಶಾಸ್ತ್ರ ಆಗಮ ಪುರಾಣಗಳೆಲ್ಲವೂ ಕೊಟ್ಟಣ ಕುಟ್ಟಿದ ನುಚ್ಚು ತೌಡು ಕಾಣಿಬೋ ಎನ್ನುವ ಮೂಲಕ ವೈದಿಕ ಯುಗದ ಬೌದ್ಧಿಕ ಜ್ಞಾನ ಸಾಮಗ್ರಿಗಳನ್ನೆಲ್ಲಾ ಕುಟ್ಟಿ ಪುಡಿ ಮಾಡಿದ್ದಾರೆ. ಮನುಧರ್ಮ ನಿಯಂತ್ರಿಸಿದ ಸಾಂಸಾರಿಕ ಚೌಕಟ್ಟನ್ನು ದಾಟಿ, ಇದರಿಂದಾಚೆಗೆ ಬೇರೊಂದು ಅಸ್ತಿತ್ವ ಉಂಟು ಎಂಬುದನ್ನು ಮನಗಂಡು, ಅದನ್ನು ಪಡೆದುಕೊಂಡು ತಮ್ಮ ಇರುವಿಕೆಯನ್ನು ತೋರಿಸಿಕೊಟ್ಟಿದ್ದಾರೆ.

ಹಿಂದೂ, ಜೈನ, ಬೌದ್ಧ, ದರ್ಶನಗಳು ಸ್ವತಂತ್ರ ಧರ್ಮಗಳಾಗಿ ನೆಲೆನಿಂತಂತೆ, ಮಾನವೈಕ್ಯಭಾವದ ಒಂದು ಆಂದೋಲನವಾಗಿ ಸೂಫಿ ಅನುಭಾವ ಪಂಥ ಬೆಳೆಯಿತು. ಇಲ್ಲಿ ಗುರುವಿನ ಮೂಲಕವೇ ಸಾಧಕನು ರಹಸ್ಯ ವಿದ್ಯೆಯನ್ನು ಪಡೆಯುತ್ತಾನೆ. ಗುರುವಿಗೆ ತಮ್ಮನ್ನು ಅರ್ಪಿಸಿಕೊಳ್ಳುವ ಮೂಲಕ ತನ್ನ ತಾನು ತಿಳಿಯುವ ಸ್ವ ಸ್ವರೂಪ ಜ್ಞಾನವನ್ನು ಪಡೆದುಕೊಳ್ಳುತ್ತಾನೆ.

ಸೂಫಿಗಳ ಮೂಲತತ್ತ್ವ ಲೌಕಿಕ ಸುಖಗಳನ್ನು ತ್ಯಾಗ ಮಾಡಿ ಧ್ಯಾನ ಚಿಂತನೆಗಳ ಮೂಲಕ ಭಗವಂತನ ಪ್ರೇಮಕ್ಕಾಗಿ ಮಾಡುವ ಭಕ್ತಿಯಾಗಿದೆ. ನಿರ್ಮಲ ಭಕ್ತಿಯಿಂದ ಸರಳತೆ, ಪ್ರಾಮಾಣಿಕತೆ, ನೈಜವಾದ ನಡೆ–ನುಡಿಗಳಿಂದ ಜಗತ್ತನ್ನು ದೈವ ಸ್ವರೂಪದಲ್ಲಿ ಕಾಣುತ್ತಾ ತನ್ನ ಅಂತರಾತ್ಮವನ್ನು ಶೋಧ ಮಾಡಿಕೊಳ್ಳುವುದಾಗಿದೆ. ಅದಕ್ಕಾಗಿ ಜೈನ, ಬೌದ್ಧ, ವೈದಿಕ ಧರ್ಮಗಳ ತತ್ತ್ವದರ್ಶನಗಳನ್ನು ಎರವಲು ಪಡೆದುಕೊಂಡಿದೆ. ಅನೇಕತೆಯಿಂದ ಏಕತೆಯತ್ತ ಸಾಗಿ ದೈವ ಸಾಕ್ಷಾತ್ಕಾರ ಪಡೆಯುವುದೇ ಸೂಫಿಧರ್ಮದ ಮರ್ಮವಾಗಿದೆ. ಉಪನಿಷತ್ತು, ಅದ್ವೈತ ದರ್ಶನ, ಯೋಗ ಮಾರ್ಗದಲ್ಲಿರುವ ತತ್ತ್ವವನ್ನಾಧರಿಸಿ ಬೆಳೆದ ಇವರನ್ನು "ಅವರು ಯೋಗ ಸಾಧನೆ ಮಾಡುವ ಸಂತರಲ್ಲ ಅದೊಂದು ಬಹುರೂಪಿ ಲೋಕ"[೯] ಎಂದು ರಹಮತ್ ತರೀಕೆರೆಯವರು ಕರೆದಿದ್ದಾರೆ.

"ನಿನ್ನೊಳು ನೀನು ಶೋಧ ಮಾಡಲು ನೀನೇ ನೀನೆ ಸಂತ
ನಿನ್ನ ಬಿಟ್ಟು ಏನಿಲ್ಲಂತ ಇದನು ನೀನು ತಿಳಿಬೇಕಂತ"[೫]

ಎಂದು ಹೇಳಿದ ಗುರುಖಾದರಿ ಪೀರಾನ ಕಾವ್ಯ ತನ್ನ ತಾನರಿವ ದರ್ಶನದ ಕಾವ್ಯವಾಗಿದೆ. ತಾನು ಏನಾಗಬೇಕು ಎಂಬುದನ್ನು ಹೊರಗೆ ಹುಡುಕದೆ ತನ್ನೊಳಗೆ ಹುಡುಕಿಕೊಳ್ಳಬೇಕೆಂಬುದು ಈ ಕಾವ್ಯದ ತಿರುಳಾಗಿದೆ.

ಯೋಗಮಾರ್ಗವೆಂದು ಕರೆಸಿಕೊಳ್ಳುವ ನಾಥಪಂಥವೂ, ನಿರ್ದಿಷ್ಟ ವರ್ಗ, ವರ್ಣ, ಜಾತಿ, ಮತ, ಪಂಥ, ಪಂಗಡಗಳಿಗೆ ಸೇರದೆ ಸರ್ವಮತ ಧರ್ಮಗಳಲ್ಲಿ ನಿರೂಪಿತವಾಗಿರುವ ಬ್ರಹ್ಮತತ್ವದ ಸಾರವನ್ನು ಭಕ್ತಿಮಾರ್ಗದಲ್ಲಿ ಕಂಡುಕೊಂಡ ಪಾರಮಾರ್ಥಿಕರಾಗಿದ್ದಾರೆ. ಇವರು ದೇವರನ್ನು ಬಾಹ್ಯ

ಪ್ರಪಂಚದಲ್ಲಿ ಹುಡುಕದೆ ಅರಿವಿನ ಮುಖಾಂತರ ತಮ್ಮಂತರಂಗದಲ್ಲಿ ಹುಡುಕಿದವರಾಗಿದ್ದಾರೆ. ಧ್ಯಾನದಿಂದ ಮತ್ತು ಆತ್ಮಾರ್ಪಣ ಭಾವದಿಂದ ಪರಮಾತ್ಮನಲ್ಲಿ ಐಕ್ಯವಾಗುವಂತರಾಗಿದ್ದಾರೆ. ಇದಕ್ಕೆಲ್ಲಾ ಮಾರ್ಗದರ್ಶಕ ಗುರುವಾಗಿರುತ್ತಾನೆ. ಇವರಲ್ಲಿ ಗುರುವಿಗೂ, ಭಗವಂತನಿಗೂ ಬೇಧವಿಲ್ಲವೆಂದು ಹೇಳುತ್ತಾರೆ. ಈ ಯೋಗ ಸಾಧನೆಯು ದೈಹಿಕ ಕ್ರಿಯೆ ಮತ್ತು ಉಸಿರಿನ ನಿಯಂತ್ರಣದ ಮೂಲಕ ಮನಸ್ಸಿನ ಹತೋಟಿ ಪಡೆಯಲು ಕಲಿಸುತ್ತದೆ. ದೇಹವೇ ಎಲ್ಲಾ ತಿಳಿವಳಿಕೆಯ ಮೂಲವಾಗಿರುವುದರಿಂದ ಇಂದ್ರಿಯಗಳನ್ನು ನಿಯಂತ್ರಿಸಿಕೊಂಡು ಅವುಗಳ ಮೇಲೆ ಪ್ರಭುತ್ವ ಸಾಧಿಸಿವುದಾಗಿದೆ. ಬಸವಣ್ಣನ ಕಾಯಕವೇ ಕೈಲಾಸ. ದೇಹವೇ ದೇಗುಲ ಎಂಬ ತತ್ವಗಳಿಗೆ ಈ ದರ್ಶನದ ಪ್ರೇರಣೆ ಇದ್ದಂತೆ ಅನ್ನಿಸುತ್ತಿದೆ.

ಯೋಗ ಬರೀ ದೈಹಿಕ ಆರೋಗ್ಯಕ್ಕೆ ಸೀಮಿತವಾದದ್ದಲ್ಲ. ದೈಹಿಕ, ಮಾನಸಿಕ ಹಾಗೂ ಇವೆರಡಕ್ಕೂ ಮೀರಿದ ದೈವಿಕ ಸ್ಥಿತಿಯತ್ತ ಮಾನವನನ್ನು ಕೊಂಡೊಯ್ಯುವುದು ಇದರ ನಿಜವಾದ ಧ್ಯೇಯ. ಯೋಗವನ್ನು ಒಳಗೊಂಡಂತೆ ಯಾವುದೇ ವಿದ್ಯೆಯು ಮಾನವನನ್ನು ಸಮಾಜಮುಖಿ ವ್ಯಕ್ತಿಯನ್ನಾಗಿ ರೂಪಿಸಬೇಕು. ಸಮಾಜಮುಖಿ ಎಂದರೆ ಯಾವ ಸಮಾಜ ತನಗೆ ವಿದ್ಯೆ ಕಲಿಸಿ, ವ್ಯಕ್ತಿತ್ವ ರೂಪಿಸಿ, ಒಳ್ಳೆಯ ಜೀವನ ರೂಪಿಸಿಕೊಳ್ಳಲು ಅವಕಾಶ ಒದಗಿಸಿದಂತಹ ಜನ ಸಮುದಾಯಕ್ಕೆ ಕೇಡನ್ನು ಮಾಡದೆ ಬಾಳುವಂತಹ ನಡೆ-ನುಡಿಗಳನ್ನು ರೂಢಿಸಿಕೊಳ್ಳುವುದಾಗಿದೆ. ವಿದ್ಯೆಯ ಸಾಧನೆ ನಮ್ಮನ್ನು ಸಾಮಾಜಿಕ ವ್ಯಕ್ತಿಯನ್ನಾಗಿ ರೂಪಿಸುವಂತಿರಬೇಕೆಂಬುದು ಯೋಗ ವಿದ್ಯೆಯ ಹಿಂದಿನ ಉದ್ದೇಶವಾಗಿದೆ.

ಭಾರತೀಯ ಸಮಾಜದಲ್ಲಿ ವಿಚಾರ ಸ್ವಾತಂತ್ರ್ಯ ವ್ಯಕ್ತಿಗೆ ಎಷ್ಟಿತ್ತು ಎಂಬುದನ್ನು ಚಾರ್ವಾಕ ದರ್ಶನದಲ್ಲಿ ಕಾಣಬಹುದು. ವೇದ ಮತ್ತು ಉಪನಿಷತ್ತುಗಳ ವಿಚಾರಗಳನ್ನು ಅತ್ಯಂತ ಧೈರ್ಯದಿಂದ ಖಂಡಿಸಿ ವೇದಗಳ ಅಸ್ತಿತ್ವವನ್ನೇ ತಿರಸ್ಕರಿಸಿತು. ಚಾರ್ವಾಕರಿಗೆ ಭೂತ, ಭವಿಷ್ಯತ್ತಿಗಿಂತ ವರ್ತಮಾನದ ಜೀವನ ಮುಖ್ಯವಾಗಿತ್ತು. ಸತ್ತ ಮೇಲೆ ಸ್ವರ್ಗ ಸಿಕ್ಕುತ್ತದೆ ಎನ್ನುವ ಭ್ರಮೆಗಿಂತ, ಇರುವಾಗಲೇ ಸಾಧ್ಯವಾದಷ್ಟು ಸುಖ ಪಡೆಯುವುದು ನಮ್ಮ ಕರ್ತವ್ಯ ಎಂದು ಹೇಳುತ್ತಾ ವೈದಿಕರ ಶ್ರಾದ್ಧಾದಿ ಕರ್ಮಗಳನ್ನು ತಿರಸ್ಕರಿಸುತ್ತಾರೆ. ಮನುಷ್ಯನ ಜೀವನ ಏರುಪೇರುಗಳಿಗೆ ಅವನೇ ಕಾರಣನಾಗಿರುತ್ತಾನೆ ಹೊರತು ಅವನ ಪಾಪ-ಪುಣ್ಯಗಳಲ್ಲ. ಇವರಿಗೆ ಸುಖವೇ ಸ್ವರ್ಗ, ದುಃಖವೇ ನರಕ. ಆದ್ದರಿಂದ ಇರುವಷ್ಟು ದಿನ ಸುಖದ ಜೀವನ ನಡೆಸಬೇಕೆಂಬುದು ಇವರ ಜೀವನದ ಪ್ರಮುಖ ಗುರಿಯಾಗಿತ್ತು. ತನ್ನ ಸುಖಕ್ಕಾಗಿ ಅನುಕೂಲದ ಮಾರ್ಗದಲ್ಲಿ ಪ್ರಾಮಾಣಿಕವಾಗಿ ಪ್ರಯತ್ನಿಸಬೇಕೆ ವಿನಹ ಸುಳ್ಳು ಕಲ್ಪನೆಗಳಲ್ಲಿ ನಂಬಿಕೆಯಿಟ್ಟು ಜೀವನದ ಸುಖವನ್ನು ಆಹುತಿ ಕೊಡಬಾರದೆಂದಿದ್ದಾರೆ.

ಭಾರತೀಯ ಸಂಸ್ಕೃತಿಯು ಈ ಎಲ್ಲಾ ದರ್ಶನಗಳ ಸಾಂಸ್ಕೃತಿಕ ಮೌಲ್ಯಗಳನ್ನು ಅಳವಡಿಸಿಕೊಳ್ಳುತ್ತಾ ಬಂದಿದೆ. ವಿಚಾರ ಸ್ವಾತಂತ್ರ್ಯವು, ಅನ್ಯಮತ ಸಹಿಷ್ಣುತೆಯೂ ವಿಶೇಷ ಲಕ್ಷಣಗಳಾಗಿರುವ ಭಾರತದಲ್ಲಿ ಷಡ್ದರ್ಶನಗಳು ಜೈನ, ಬೌದ್ಧ ಧರ್ಮಗಳು, ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳೂ, ಸೂಫಿ, ಅವಧೂತ, ನಾಥ, ಚಾರ್ವಾಕ ಪಂಥಗಳಲ್ಲಿನ ಮೂಲತತ್ತ್ವಗಳು, ಉದ್ದೇಶಗಳು ಒಂದೇ ಆಗಿವೆ.

ಎಲ್ಲ ದರ್ಶನಗಳು ಅರಿವಿನ ಮೂಲವಾಗಿ ಮನುಷ್ಯನ ಮನಸ್ಸನ್ನು ಕೇಂದ್ರಬಿಂದುವನ್ನಾಗಿಸಿ ಕೊಂಡಿವೆ. ಮನಸ್ಸಿನ ಚಂಚಲತೆಯನ್ನು ಶಾಂತಗೊಳಿಸಿ, ಮಾನಸಿಕ ಕ್ರಿಯೆಗಳಿಗೆ ಕಡಿವಾಣ ಹಾಕಿ ಏಕಾಗ್ರತೆಯಿಂದ ಮನಸ್ಸಿನ ಪ್ರವೃತ್ತಿಗಳನ್ನು ಅಂತರ್ಮುಖಿಗೊಳಿಸಿಕೊಂಡು ಧ್ಯಾನದಲ್ಲಿ ತೊಡಗುವುದರಿಂದ ಅನುಭವ ವೇದ್ಯ ಅರಿವುಂಟಾಗುತ್ತದೆ. ಕೇವಲ ವಿಷಯಾಸಕ್ತಿಗಳಿಗೆ ಸೀಮಿತವಾಗದೆ ಅನುಭವಕ್ಕೆ ಸಾಕ್ಷಿಯಾಗಿ ನಿಲ್ಲುವ ಕ್ರಿಯಾಶೀಲ ಮನಸ್ಸು, ಮನುಷ್ಯನಲ್ಲಿ ಅಡಗಿರುವಂತಹ ಅಂಧಕಾರವನ್ನು ಅಳಿಯುವಂತೆ ಮಾಡುತ್ತದೆ. ವಿಷಯಾಸಕ್ತಿಗಳಿಂದ ಮುಕ್ತವಾಗಿ ತನ್ನಲ್ಲಿಯೇ ತಾನಡಗಿ ಪಡೆಯುವ ತಿಳಿವಳಿಕೆಯು ತಾನಾರೆಂಬ ಅರಿವನ್ನುಂಟು ಮಾಡುತ್ತದೆ.

ಭಾರತೀಯ ದಾರ್ಶನಿಕರಿಗೆ ಆಚಾರವಿಲ್ಲದ ವಿಚಾರವು ವ್ಯರ್ಥವಾದದ್ದಾಗಿದೆ. ಉತ್ತಮ ನಡತೆ, ಜ್ಞಾನ ಧರ್ಮದ ಪ್ರಮುಖ ಗುಣ. ಎಲ್ಲಾ ಮತೀಯರೂ ಧರ್ಮದ ಬಾಹ್ಯಾಚರಣೆಗಳಿಗೆ ಸಮನಾದ ಪ್ರಾಧಾನ್ಯತೆ ನೀಡಿದ್ದಾರೆ. ಬ್ರಾಹ್ಮಣರ ಯಜ್ಞೋಪವೀತ, ವೀರಶೈವರ ಶಿವದೀಕ್ಷೆಯಂತಹ ಬಾಹ್ಯಾಚರಣೆಗಳು ಸಾಧಕನಲ್ಲಿ ಅಪೇಕ್ಷಿತ ಚಿತ್ತಶುದ್ಧಿಯನ್ನುಂಟು ಮಾಡಿ ಅವನ ಮನಸ್ಸಿನಲ್ಲಿ ಏಕಾಗ್ರತೆಯನ್ನು ತಂದು ದೈವ ಸಾನಿಧ್ಯ ದೊರೆಯುವಂತೆ ಮಾಡುತ್ತದೆ ಎಂಬುದು ಅವರ ಅಭಿಮತವಾಗಿದೆ.

ಈ ದರ್ಶನಗಳೆಲ್ಲಾ ತಮ್ಮ ತಮ್ಮ ವಿಚಾರಗಳನ್ನು ವಿಭಿನ್ನವಾದ ರೀತಿಯಲ್ಲಿ ಪ್ರತಿಪಾದಿಸಿದರೂ ಪರಮಾತ್ಮನ ಒಲುಮೆ, ಸಾಕ್ಷಾತ್ಕಾರವೇ ಪರಿಪೂರ್ಣ ಅರಿವು ಎಂದು ಸಾರಿವೆ. ಪ್ರತಿಯೊಂದು ದರ್ಶನವು ಮಾನವನ ನೈತಿಕ ಹೊಣೆಗಾರಿಕೆ ಆಧ್ಯಾತ್ಮಿಕ ವಿಕಾಸಕ್ಕೆ ಸಮನಾದ ಸ್ಥಾನಗಳನ್ನು ನೀಡಿವೆ. ನೈತಿಕ ಮೌಲ್ಯಗಳನ್ನೇ ಧರ್ಮವೆಂದು ಒಪ್ಪಿಕೊಳ್ಳುವಷ್ಟರ ಮಟ್ಟಿಗೆ ದರ್ಶನಗಳಲ್ಲಿ ನೀತಿ ಪ್ರಧಾನವಾಗಿದೆ. ಇವು ಧರ್ಮದ ಜೊತೆ ಜೊತೆಯಾಗಿಯೇ ಸಾಗಬೇಕಾಗುತ್ತದೆ. ಮನುಷ್ಯನ ಅರಿವನ್ನು ಜಾಗೃತಗೊಳಿಸಲು ಧರ್ಮದ ಜೊತೆಗೆ ವೈಚಾರಿಕ ಚಿಂತನೆಗಳೂ ಪ್ರಮುಖವಾಗುತ್ತವೆ. ಧರ್ಮ ನಮ್ಮ ಸಂಶಯಗಳಿಗೆ ಉತ್ತರ ಕೊಡುವಂತಿರಬೇಕು. ಧರ್ಮಾಚರಣೆ ನಮ್ಮ ಜೀವನವನ್ನು ಹಸನುಗೊಳಿಸುವಂತಿರಬೇಕು. ಆದರೆ ಧರ್ಮಾಂಧತೆ ಇರಬಾರದು. ಬದುಕಿನ ಎಲ್ಲಾ ರೀತಿಗಳಲ್ಲೂ ಅಂಟಿಕೊಂಡ ಕಲ್ಮಶಗಳನ್ನು ತೆಗೆದುಹಾಕಿ ಜೀವನವನ್ನು ಸುಖಮಯವಾಗಿ ಮಾಡುವುದರಲ್ಲಿ ಮುಖ್ಯ ಪಾತ್ರ ವಹಿಸುತ್ತದೆ.

ಯಾವುದೇ ಧರ್ಮ ನಾಗರೀಕತೆಗೆ ಗುರಿಯಾಗುತ್ತಾ ಮೂಲಧರ್ಮದ ಅಂಶಗಳನ್ನು ಉಳಿಸಿಕೊಂಡರೂ, ಅದರ ಕೆಲವು ಸಿದ್ಧಾಂತಗಳು ಬದಲಾಗುತ್ತವೆ. ಲೋಕದಲ್ಲಿ ಇಷ್ಟೊಂದು ಬಗೆಯ ಜ್ಞಾನ ವಲಯಗಳು ವಿಸ್ತರಿಸಿಕೊಂಡಿರುವುದು ವೈವಿಧ್ಯಕ್ಕಾಗಿಯೇ ಹೊರತು ವೈಷಮ್ಯಕ್ಕಾಗಿ ಅಲ್ಲ. ಮಾನಸಿಕ ಸಮತೋಲನವನ್ನು ಕಾಪಾಡಿಕೊಂಡು ಮನುಷ್ಯ ಮನುಷ್ಯತ್ವದಿಂದ, ಮನುಷ್ಯನಾಗಿ ಬದುಕುವುದಕ್ಕಾಗಿ ಇದರಿಂದ ಜಗತ್ತಿನ ವಿಕಾಸವು ಸಾಧ್ಯವಾಗುತ್ತದೆ. ಇಂತಹ ಸ್ಥಿತ್ಯಂತರಗಳನ್ನಿಟ್ಟುಕೊಂಡು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಜಗತ್ತಿನ ಜ್ಞಾನದ ವಿವಿಧ ನೆಲೆಗಳನ್ನು ಗ್ರಹಿಸುವುದು ಮತ್ತು ಆ ಮೂಲಕ ಇಂದಿನ ಸಂದರ್ಭದ ಸವಾಲುಗಳನ್ನು ದಾಟುವ ಪ್ರಕ್ರಿಯೆಯಾಗಿ ಅರಿವನ್ನು ಹೇಗೆ

ಬಳಸಿಕೊಳ್ಳಬಹುದು ಎಂಬುದನ್ನು ಜಗತ್ತಿನ ಎಲ್ಲಾ ಶ್ರೇಷ್ಠ ಮನಸ್ಸುಗಳ ಮಿಡಿತಗಳನ್ನು ಧರ್ಮಗಳನ್ನು ಅಧ್ಯಯನ ಮಾಡಿದಾಗ ಎಲ್ಲಾ ಧರ್ಮಗಳು ಆತ್ಮಸಾಕ್ಷಾತ್ಕಾರಕ್ಕೆ ಅರಿವು, ಜ್ಞಾನವೇ ಪ್ರಧಾನ ಎಂದು ಸಾರುತ್ತವೆ. ಈ ಅನುಭಾವಿಗಳ ಅನುಭವದ ಹಿನ್ನೆಲೆಯಲ್ಲಿ ಜ್ಞಾನದ ಸ್ವರೂಪ ಮತ್ತು ಜ್ಞಾನದ ನೆಲೆಗಳು, ಕನ್ನಡ ಅನುಭಾವ ಸಾಹಿತ್ಯದ ಮೇಲಾದ ಪ್ರಭಾವ, ಜ್ಞಾನ ಮೀಮಾಂಸೆಯ ಕುರಿತು ಬದಲಾದ ತಿಳಿವಳಿಕೆಯ ವಿವಿಧ ಮಾದರಿಗಳನ್ನು ಅಧ್ಯಯನ ಮಾಡುವುದು ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

**ಅಡಿಟಿಪ್ಪಣಿ**

೧. ವೃಷಭೇಂದ್ರಸ್ವಾಮಿ ಎಸ್.ಎಂ., ಶಿಕ್ಷಣದ ಗುರಿ–ಗಮ್ಯಗಳು, ಪು.೧೪೬

೨. ನಾರಾಯಣಸ್ವಾಮಿ ಜ.ಹೊ., ವಿಚಾರಸಾಹಿತ್ಯ; ಬ್ರಾಹ್ಮಣದ ತಂತ್ರಗಳು ಅದರ ಭಾಷೆ ನುಡಿಗಟ್ಟು ಇತ್ಯಾದಿ; ೨೦೦೬; ಪು.೫೮

೩. ನಂಜಮ್ಮಣ್ಣಿ ಎಂ., ಭಾರತೀಯ ಸಾಮಾಜಿಕ ಸಂಸ್ಥೆಗಳು; ೨೦೦೩, ಪು.೨೯

೪. ರಹಮತ್ ತರೀಕೆರೆ; ಕರ್ನಾಟಕದ ಸೂಫಿಗಳು, ೨೦೧೧, ಪು.೨೭

೫. ಅದೇ, ಪು.೩೦

### ಅಧ್ಯಾಯ ನಾಲ್ಕು

## ವಚನ ಹಾಗೂ ಸ್ವರವಚನ ಸಾಹಿತ್ಯದಲ್ಲಿ ಜ್ಞಾನದ ಪರಿಕಲ್ಪನೆ

೧೨ನೇ ಶತಮಾನವು ಕರ್ನಾಟಕದ ಇತಿಹಾಸದಲ್ಲಿ ವ್ಯಕ್ತಿ ಪ್ರಜ್ಞೆಯ ನೆಲೆಯ ಮೂಲಕ ಸಮೂಹ ಪ್ರಜ್ಞೆಯ ಹುಡುಕಾಟದ ಕಾಲವಾಗಿದೆ. ಈ ಅವಧಿ ವ್ಯಕ್ತಿಯ ಯೋಗ್ಯತೆಯ ಜೊತೆಗೆ ಧಾರ್ಮಿಕ ಉನ್ನತಿಯನ್ನು ತನ್ನ ಆಶಯವಾಗಿಟ್ಟುಕೊಂಡು ಹಿಂದೂ ಸಂಸ್ಕೃತಿಯ ರಚನಾ ವ್ಯವಸ್ಥೆಯನ್ನು ಪ್ರಶ್ನಿಸಿತು. ಬೌದ್ಧ ಜೈನ ಧರ್ಮಗಳು ಈ ತತ್ತ್ವಗಳನ್ನು ಬೋಧನೆ ಮಾಡಿದ್ದರೂ, ಜೀವನಕ್ಕೆ ಅನುವಾಗುವ ಶಿಕ್ಷಣವನ್ನು ಬೋಧಿಸಲಿಲ್ಲ. ನಂತರ ಶೈವ ಧರ್ಮ ಹೆಚ್ಚು ಪ್ರಾಬಲ್ಯ ಸ್ಥಾಪಿಸಿತು. ಆದರೆ ಶೈವಧರ್ಮಕ್ಕಿಂತ, ವೈದಿಕ ಧರ್ಮ ಜನತೆಯನ್ನು ಹಲವಾರು ಜಾತಿಗಳಾಗಿ ವಿಂಗಡಿಸಿ ಅಜ್ಞಾನದಲ್ಲಿ ದೂಡಿತ್ತು. ವೇದವನ್ನು ಓದುವ ಹಕ್ಕು ಬ್ರಾಹ್ಮಣರಿಗೆ ಮಾತ್ರ, ಶೂದ್ರರಿಗೆ, ಸ್ತ್ರೀಯರಿಗೆ ಅವುಗಳನ್ನು ಕಲಿಯಲು ಅವಕಾಶವಿಲ್ಲ ಎಂದು ಜನರಲ್ಲಿ ಕೀಳರಿಮೆಯನ್ನು ಬೆಳೆಸಿತ್ತು. ವೈದಿಕರು ಹುಟ್ಟು ಹಾಕಿದ ಈ ಬೇಧ ಕಲ್ಪನೆಯಿಂದ ವಿದ್ಯೆ, ಅಧಿಕಾರ, ಸಂಪತ್ತು ಎಲ್ಲಾ ಅವಕಾಶಗಳು ಆಳುವ ವರ್ಗಗಳಿಗೆ ಮೀಸಲಾಗಿ ಉಳಿಯಿತು.

ಪ್ರತಿಷ್ಠಿತರ ವೈಭವದ ಕೇಂದ್ರಗಳಾದ ಮಠ-ಮಂದಿರಗಳಲ್ಲಿ ವೈದಿಕರಿಗೆ ಬೇಕಾದಂತಹ ವಿದ್ಯಾಭ್ಯಾಸ ಮಾತ್ರ ನಡೆಯುತ್ತಿತ್ತು. ಇಂತಹ ಅಸಮಾನತೆಗಳು ಜನರ ಜೀವನದ ಮೇಲೆ ವ್ಯತಿರಿಕ್ತ ಪರಿಣಾಮ ಉಂಟು ಮಾಡಿತು. ಕೇಶಿರಾಜ, ತೆಲುಗು ಜೊಮ್ಮಯ್ಯ, ಜೇಡರ ದಾಸಿಮಯ್ಯ ಮೊದಲಾದ ಬಸವಣ್ಣನ ಹಿರಿಯ ಸಮಕಾಲೀನ ಶರಣರು ಅರಸೊತ್ತಿಗೆಯನ್ನು ಧಿಕ್ಕರಿಸಿ, ಸ್ಥಗಿತ ವ್ಯವಸ್ಥೆಯನ್ನು ಒಡೆದು ಹಾಕಲು ಪ್ರಯತ್ನಿಸಿದರು. ಅಲ್ಲದೆ ಬಹುಮುಖಿ ಸಮುದಾಯಗಳ ಬದುಕನ್ನು ಉಪೇಕ್ಷಿಸಿದ ಇಂತಹ ಸ್ವಾರ್ಥಪರ ಚಿಂತನೆಗಳನ್ನು ವಿರೋಧಿಸಲು ಕ್ರಿಯಾಜ್ಞಾನ ಸಮ್ಮಿಳಿತವಾದ ವಚನ ಸಾಹಿತ್ಯವನ್ನು ಹುಟ್ಟು ಹಾಕಿದರು. ಅರಿವು, ಆಚಾರಗಳ ಮೂಲಕ ಹುಟ್ಟಿಕೊಂಡ ವಚನ ಸ್ವರವಚನಗಳಂತಹ ಸಾಹಿತ್ಯ ರೂಪಗಳು ಕಾಯಕದ ಮಹತ್ತ್ವವನ್ನು ಎತ್ತಿ ಹಿಡಿಯುವುದು, ಜ್ಞಾನ-ಭಕ್ತಿ-ಕರ್ಮಗಳ ಸಂಯೋಗದಿಂದ ಇಡೀ ಸಮಾಜವನ್ನು ಅರಿವಿನ ಮಾರ್ಗದತ್ತ ಕೊಂಡ್ಯೊಯುವುದು ಶರಣ ಧರ್ಮದ ಮುಖ್ಯ ಗುರಿಯಾಗಿತ್ತು.

ಕನ್ನಡ ಅನುಭಾವಿ ಪರಂಪರೆಯಲ್ಲಿ ಜ್ಞಾನದ ಪರಿಕಲ್ಪನೆಯನ್ನು ವಿಭಿನ್ನ ಪರಿಭಾಷೆಗಳಲ್ಲಿ ಗುರುತಿಸಿದ್ದಾರೆ. ಈ ಅನುಭಾವಿಗಳೆಲ್ಲಾ ಬರೀ ಜ್ಞಾನಕ್ಕಾಗಿ ಜ್ಞಾನ ಎನ್ನಲಿಲ್ಲ. ಏಕೆಂದರೆ ಜ್ಞಾನಕ್ಕಾಗಿ

ಜ್ಞಾನ ಎಂದರೆ ಅದು ಕೇವಲ ಚರ್ಚೆಯಾಗಿ, ವಾದವಾಗಿ ಉಳಿಯುತ್ತದೆ. ವಾಗ್ವಾದದಿಂದ ತಾ ಹೆಚ್ಚು, ನಾ ಹೆಚ್ಚು ಎನ್ನುವ ಪೈಪೋಟಿ ಬೆಳೆಯುತ್ತದೆ. ಜ್ಞಾನ ಕೇವಲ ವಾದವಲ್ಲ. ಬದುಕಿಗೆ ಅನ್ವಯವಾಗುವಂತದ್ದು. ಅಂದಾಗಲೇ ಅದು ಜ್ಞಾನದ ಚರ್ಚೆಯೊಂದಿಗೆ ಬದುಕಿನ ಚರ್ಚೆಯಾಗಿ ಉಳಿಯುತ್ತದೆ.

ಜ್ಞಾನ ಎಂದರೆ ಅರಿವು, ತಿಳಿವಳಿಕೆ, ಅತ್ಯುನ್ನತ ಪ್ರಜ್ಞೆ, ಒಂದು ವಿಷಯದ ಬಗ್ಗೆ ಆಳವಾದ ಜ್ಞಾನವಿದ್ದರೂ, ಅರಿವಿನ ಜ್ಞಾನಕ್ಕೂ ಅಕ್ಷರ ಜ್ಞಾನಕ್ಕೂ ವ್ಯತ್ಯಾಸವಿದೆ. ಪ್ರಜ್ಞೆ ಎಂಬುದು ವಸ್ತುವಿನ ಅನುಭವದಿಂದ ಬರುವಂಥದ್ದು. ಅರಿವು ಎಂಬುದು ಪರವಸ್ತುವಿನ ಅನುಭಾವದಿಂದ ಬರುವಂಥದ್ದು. ಅನುಭಾವಿಕ ಜ್ಞಾನ ನಿರಂಹಕಾರವನ್ನು ಬೆಳೆಸುತ್ತದೆ. ಅಕ್ಷರ ಜ್ಞಾನ ಹೃದಯ ವೈಶಾಲ್ಯತೆಯನ್ನು ಕುಗ್ಗಿಸಿ ಅಹಂಕಾರಿಯನ್ನಾಗಿ ಮಾಡುತ್ತದೆ. ವಸ್ತುವಿನ ಅನುಭವದಿಂದ ಬರುವ ಪ್ರಜ್ಞೆ ಪರವಸ್ತುವಿನ ಅನುಭಾವದಿಂದ ಬರುವ ಅರಿವಿಗೆ ಮೂಲವಾಗಿದೆ. ಆ ಮೂಲ ಇಷ್ಟಲಿಂಗವಾಗಿದೆ. ಶರಣರು ಇಷ್ಟಲಿಂಗವನ್ನು ಅರಿವು ಪಡೆಯುವ ಸಾಧನ ಎಂದು ಸೂಚಿಸುತ್ತಾರೆ. 'ಅಂತರಂಗದ ಅರಿವಿಗೆ ಆಚಾರವೇ ಕಾಯ' ಎಂದು ಹೇಳುವ ಪ್ರಭುದೇವರು ಅರಿವಿನ ಕ್ರಿಯಾ ರೂಪವೇ ಆಚಾರವೆನ್ನುತ್ತಾರೆ. 'ಅರಿವು ಬಾಹ್ಯದಲ್ಲಿ ಇಷ್ಟಲಿಂಗ, ಅರಿವು ಅಂತರಂಗದಲ್ಲಿ ಪ್ರಾಣಲಿಂಗ, ಅರಿವು ಭಾವದಲ್ಲಿ ಆತ್ಮಲಿಂಗ' ಎಂದು ಸಿದ್ಧರಾಮ ಅರಿವೇ ದೇವರು ಎಂದು ಹೇಳುತ್ತಾನೆ. ಈ ಆಚಾರವೆನ್ನುವುದು ಇಷ್ಟಲಿಂಗದಿಂದ ಮೂಡಿದ ಅರಿವು, ಅದೊಂದು ಪದ್ಧತಿ, ಮನುಷ್ಯನ ಐಹಿಕ ಹಾಗೂ ಪಾರಲೌಕಿಕ ಕ್ರಿಯೆಗಳಿಗೆ ಸಾಧನವಾದ ಸನ್ನಡತೆ. ನಮ್ಮ ಒಳಜಗತ್ತಿನ ಅರಿವು ಹೊರ ಜಗತ್ತಿನ ಆಚರಣೆಯಲ್ಲಿರಬೇಕು ಎಂಬುದು ಶರಣರ ಆಶಯ. ಅದಕ್ಕೆ ತನ್ನ ತಾನರಿದವಂಗೆ ಅರಿವೇ ಗುರು ಎಂದು ಮುಕ್ತಾಯಕ್ಕ ಹೇಳುತ್ತಾಳೆ. ಅರಿವು ಜ್ಞಾನದ ಬಲ, ಅರಿವು ಸಜ್ಜನ ಸಹವಾಸ ಬಲ, ಅರಿವು ಬಾಹ್ಯದಲ್ಲಿ ಇಷ್ಟಲಿಂಗ, ಅರಿವು ಅಂತರಂಗದಲ್ಲಿ ಪ್ರಾಣಲಿಂಗ ಅರಿವು ಭಾವದಲ್ಲಿ ಆತ್ಮಲಿಂಗವೆಂದು ಹೇಳುವ ಸಿದ್ಧರಾಮನು, ಅರಿತವನೇ ನಿಜವಾದ ಜ್ಞಾನಿ. ಶಾಶ್ವತವಾಗಿ ನಿಲ್ಲುವಂತವನು ಎಂಬ ಅವನ ಹೇಳಿಕೆ ಅರ್ಥಪೂರ್ಣವಾಗಿದೆ. ಅರುಹು ಬೇಕು ಆಚರಣೆಯಲ್ಲಿ ಮರಹು(ಅಜ್ಞಾನ) ಬೇಕು ವಿಷಯಂಗಳಲ್ಲಿ ಎಂಬ ಅವನ ಇನ್ನೊಂದು ಹೇಳಿಕೆಯೂ ವ್ಯಕ್ತಿತ್ವ ವಿಕಾಸವೇ ನಿಜವಾದ ಅರಿವು ಎಂಬ ಅಂಶವೂ ಗಮನಾರ್ಹವಾಗಿದೆ. ಅಲ್ಲದೆ 'ಅರಿದ ಅರಿವು ಮರವಿಂಗಪ್ಪುದೆ?' ಎನ್ನುವ ಮಾದಾರ ಧೂಳಯ್ಯ ಹಾಗೂ ತನ್ನಲ್ಲಿ ಅರಿವು ಸ್ವಯಂವಾಗಿರಲು ಅನ್ಯರ ಕೇಳಲುಂಟೆ? ಎನ್ನುವ ಅಕ್ಕಮಹಾದೇವಿಯ ವಚನಗಳಲ್ಲಿ ಎಲ್ಲಾ ಅರಿವುಗಳಿಗಿಂತ ತನ್ನನ್ನು ತಾನರಿತುಕೊಂಡ ಅರಿವು ಪ್ರಮುಖವಾಗುತ್ತದೆ.

'ಸಿದ್ಧಾಂತಿಯ ಜ್ಞಾನ ಸಾಧನೆಯಲ್ಲಿ ಹೋಯಿತ್ತು
ವೇದಾಂತಿಯ ಜ್ಞಾನ ವಾದದಲ್ಲಿ ಹೋಯಿತ್ತು
ಕ್ರಿಯಾವಂತನ ಜ್ಞಾನ ನುಡಿಯಲ್ಲಿ ಹೋಯಿತ್ತು
ವ್ಯವಹಾರಿಕನ ಜ್ಞಾನ ದ್ರವ್ಯಾರ್ಜನೆಯಲ್ಲಿ ಹೋಯಿತ್ತು

ಇವೆಲ್ಲ ಭವಕ್ಕೆ ಕಾರಣವಲ್ಲದೆ
ಭವರಹಿತ ಜ್ಞಾನವು ಸಾಧ್ಯವಾಗುವುದು ದುರ್ಲಭವಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನ'[೧]

ಇಂದು ವಿದ್ಯಾವಂತರ ರೀತಿ-ನೀತಿಗಳನ್ನು ಗಮನಿಸಿದರೆ ಯಾರ ಯಾರ ಜ್ಞಾನದ ಸ್ಥಿತಿ ಏನಾಯಿತು ಎಂಬುದನ್ನು ತಿಳಿಯಬಹುದು. ಚಾಡಿ ಹೇಳಲು ಭ್ರಷ್ಟರಾಗಲು, ಅನಿಷ್ಟ ಗುಣಗಳ ದಾಸರಾಗಲು ಅವರ ಓದು ಬಳಕೆಯಾಗುತ್ತಿದೆ. ಒಬ್ಬರನ್ನು ತುಳಿದು ಮತ್ತೊಬ್ಬರನ್ನು ಮೇಲೆತ್ತಲು ದುರುಪಯೋಗವಾಗುತ್ತಿದೆ. ಇಂಥದನ್ನು ಕಂಡು ವಿದ್ಯಾವಂತರ ಬಗೆಗೆ ತಾತ್ಸಾರದಿಂದ ಮಾತನಾಡುವ ಸಂದರ್ಭ ಸೃಷ್ಟಿಯಾಗಿದೆ.

ಜ್ಞಾನ ಎಂದಾಕ್ಷಣ ಕೇವಲ ತಿಳಿಯುವುದು ಅಥವಾ ಮತ್ತೊಬ್ಬರಿಗೆ ಉಪದೇಶ ನೀಡುವುದಲ್ಲ. ಒಳಿತು-ಕೆಡುಕುಗಳ ವಿವೇಚನೆಯೇ ಜ್ಞಾನ. ಅಂತಹ ಜ್ಞಾನ ಪಡೆದು ವ್ಯಷ್ಟಿ ಮತ್ತು ಸಮಷ್ಟಿಯ ಬದುಕಿಗೆ ಬೆಳಕು ನೀಡುವವನು ಜ್ಞಾನಿಯಾಗುತ್ತಾನೆ. ನಮಗೆ ಬೇಕಾಗಿರುವುದು ಇಂತಹ ಮೌಲ್ಯಾದರ್ಶನಗಳಿಂದ ಕೂಡಿದ ಜೀವನ ಶಿಕ್ಷಣ. ಇಂದಿನ ಶಿಕ್ಷಣ ಅಂಥ ವ್ಯಕ್ತಿತ್ವವನ್ನು ಬೆಳೆಸುವಲ್ಲಿ ವಿಫಲವಾಗಿದೆ. ವಾಸ್ತವವಾಗಿ ಕಲಿಕೆಗೆ ಮುಕ್ತಾಯವೆಂಬುದೇ ಇಲ್ಲ. ಅದು ಜೀವನದುದ್ದಕ್ಕೂ ನಡೆಯುವ ನಿರಂತರ ಕ್ರಿಯೆ. ಜ್ಞಾನಕ್ಕೆ ಮಿತಿ ಇಲ್ಲ. ಅದು ಕಲಿತಷ್ಟು ಇನ್ನೂ ಪಡೆಯಬೇಕಾದುದು ಬಹಳಷ್ಟು ಇದೆ ಎನ್ನುವ ವಿವೇಕ ನಮಗಿರಬೇಕು. ಸಮಕಾಲೀನ ಶಿಕ್ಷಣ ಇಂತಹ ಅರಿವು ಮೂಡಿಸುವಲ್ಲಿ ಸೋಲನನುಭವಿಸುತ್ತಿದೆ. 'ಅಲ್ಪವಿದ್ಯೆ ಮಹಾಗರ್ವಿ' ಎನ್ನುವ ಮಾತಿನಂತಾಗಿದೆ.

'ಮನವ ಗೆದ್ದೆಹನೆಂದು ತನುವ ಕರಗಿಸಿ ಕಾಯವ ಮರುಗಿಸಿ
ನಿದ್ರೆಯ ಕೆಡಿಸಿ, ವಿದ್ಯೆಯ ಕಲಿತಿಹೆನೆಂಬ ಬುದ್ಧಿಹೀನರಿರಾ,
ನೀವು ಕೇಳಿರೋ
ನಮ್ಮ ಶರಣರು ಮನವನೆಂತು ಗೆದ್ದಹರೆಂದಡೆ
ಕಾಮ ಕ್ರೋಧವ ನೀಗಿ ಮೋಹ, ಮದ, ಮತ್ಸರವ ಭೇದಿಸಿ
ಆಸೆ-ರೋಷವಳಿದು ಜಗದ ಪಾಶವ ಬಿಟ್ಟು
ಆ ಮರುಗಿಸುವ ಕಾಯವನೆ ಪ್ರಸಾದ ಕಾಯವ ಮಾಡಿ ಸಲಹಿದರು
ಕೆಡಿಸುವ ನಿದ್ರೆಯನೆ ಯೋಗ ಸಮಾಧಿಯ ಮಾಡಿ
ಸುಖವನೇಡಿಸಿ ಜಗವನೆ ಗೆದ್ದ ಶರಣರ ಬುದ್ಧಿಹೀನರೆತ್ತ ಬಲ್ಲರೊ
ಅಪ್ಪಣ್ಣಪ್ರಿಯ ಚನ್ನಬಸವಣ್ಣ'[೨]

ಶರಣರು ಪಡೆಯುತ್ತಿದ್ದ ವಿದ್ಯೆ ಎಂತಹುದೆಂಬುದನ್ನು ಲಿಂಗಮ್ಮ ಈ ವಚನದಲ್ಲಿ ಹೇಳಿದ್ದಾಳೆ. ವಿಷಯದ ಗುಣಗಳಿಂದ ವಿವೇಕ ಮರೆಯಾಗುತ್ತದೆ. ಇದರಿಂದ ಮುಕ್ತವಾಗಲು ಸೂಕ್ತ ವಾತಾವರಣ ಮತ್ತು ಶಿಕ್ಷಣ ಲಭ್ಯವಾಗಬೇಕು. ವಚನಕಾರರು ವಿಷಯ ಸಂಗ್ರಹಕ್ಕೆ ಒತ್ತು ಕೊಡದೆ ವ್ಯಕ್ತಿಯ ರೀತಿ-

ನೀತಿಗಳ ಪರಿಷ್ಕಾರಕ್ಕೆ, ಮಾನಸಿಕ ಬದಲಾವಣೆಗೆ, ಸ್ವಚ್ಛ ಬದುಕಿಗೆ ಮಾನ್ಯತೆ ನೀಡಿದ್ದಾರೆ. ಅವರದು ಸಮೂಹ ಶಿಕ್ಷಣ ಮಾಧ್ಯಮವಾಗಿತ್ತು. ಅವರ ಶಿಕ್ಷಣ ಧರ್ಮದ ತಳಹದಿಯ ಮೇಲೆ ರೂಪುಗೊಂಡಿದ್ದರಿಂದ ಸುಭದ್ರ ಸಮಾಜವನ್ನು ಕಟ್ಟುವ ಯೋಜನೆ ವಚನಕಾರರದಾಗಿತ್ತು.

'ವೇದ ಕಲಿತಲ್ಲಿ ಪಾಠಕನಲ್ಲದೆ ಜ್ಞಾನಿಯಲ್ಲ; ನಿಲ್ಲು
ಶಾಸ್ತ್ರ ಪುರಾಣವನೋದಿದಲ್ಲಿ ಪಂಡಿತನಲ್ಲದೆ ಜ್ಞಾನಿಯಲ್ಲ; ನಿಲ್ಲು
ವ್ರತ ನೇಮ ಕೃತ್ಯ ಪೂಜಕನಾದಡೇನು?
ದಿವ್ಯ ಜ್ಞಾನದ ಠಾವನರಿಯಬೇಕು
ಈ ಭೇದಂಗಳ ತಿಳಿದರಿದಲ್ಲಿ ಮನ ಸಂದಿತ್ತು ಮಾರೇಶ್ವರಾ'[೩]

ನಿಜವಾದ ವಿದ್ಯೆ ವೇದ, ಶಾಸ್ತ್ರ, ಪುರಾಣಗಳ ಪಠಣವಲ್ಲ. ವ್ರತ ನಿಯಮಗಳ ಆಚರಣೆಯಲ್ಲ. ದಿವ್ಯಜ್ಞಾನದ ಅರಿವು ಪಡೆಯುವುದೆಂದು ಮನಸಂದ ಮಾರಿತಂದೆ ಹೇಳಿದ್ದಾರೆ. ಇಂತಹ ನಿರಂಹಕಾರದ ವಿದ್ಯೆ, ಅಹಂಕಾರವನ್ನು ನಿರಶನ ಮಾಡುತ್ತದೆ. ಭೋಗ ಲಾಲಸೆ, ಅಧಿಕಾರದಾಹ, ಸ್ವಾರ್ಥ ದೂರ ಸರಿಯುತ್ತವೆ. ಶರಣರ ತತ್ವಗಳಲ್ಲಿ ಜೀವನ ಶಿಕ್ಷಣಕ್ಕೆ ಬೇಕಾದ ಎಲ್ಲಾ ಮಹತ್ವದ ಅಂಶಗಳು ಇವೆ. ಕೇವಲ ಪಠ್ಯ ವಿಷಯಗಳಲ್ಲಿ ಪರಿಣಿತನಾಗಿ ಅಹಂಕಾರ ಪಡುವ ವ್ಯಕ್ತಿಯನ್ನು ನಿಲ್ಲಿಸಿ, ಪಾಠಕ-ಜ್ಞಾನಿಗೂ, ಪಂಡಿತನಿಗೂ, ಜ್ಞಾನಿಗೂ ಇರುವ ಭೇದವನ್ನು ತಿಳಿ ಎಂದು ಎಚ್ಚರಿಸಿದ್ದಾನೆ. 'ಜ್ಞಾನದ ಬಲದಿಂದ ಅಜ್ಞಾನದ ಕೇಡು' ಎಂದ ಶರಣರು ಅಂಥ ಜ್ಞಾನದ ಮಹತ್ವವನ್ನು ತಮ್ಮ ಸಾಹಿತ್ಯದ ಮೂಲಕ ಸರಳ ರೀತಿಯಲ್ಲಿ ಹೇಳಿದ್ದಾರೆ. ಜ್ಞಾನವೆಂದರೆ ಕೇವಲ ವಿಷಯ ಸಂಗ್ರಹವಾಗಿಲ್ಲ. ವ್ಯಕ್ತಿಯ ದೇಹ-ಮನಸ್ಸು ಬುದ್ಧಿಗಳ ಸಂಸ್ಕಾರಕ್ಕೆ ಹೊಳಪು ನೀಡುವಂತಹದ್ದಾಗಿದೆ. 'ಅನುಭಾವವಿಲ್ಲದ ಭಕ್ತಿ ಅರಿವಿಂಗೆ ಬಾರದು' ಎನ್ನುವ ಬಸವಣ್ಣ ಅನುಭಾವ ಪ್ರಧಾನವಾದ ಶಿಕ್ಷಣದ ಬಗ್ಗೆ ಒತ್ತಿ ಹೇಳಿದ್ದಾನೆ.

ಶರಣರ ಜ್ಞಾನದ ಸ್ವರೂಪವನ್ನು ಕಾಯಕ ಮತ್ತು ಕ್ರಿಯೆಯ ಸಮ್ಮಿಳಿತದಲ್ಲಿ ಕಾಣುತ್ತೇವೆ. ಆದರೆ ನಮ್ಮ ದೇಶದಲ್ಲಿ ಶ್ರಮವಿಭಜನೆಯ ತತ್ವವನ್ನು ತಪ್ಪು ತಳಹದಿಯ ಮೇಲೆ ನಿಲ್ಲಿಸಲಾಗಿದೆ. ಜ್ಞಾನವೆಂಬುದು ಕೇವಲ ಬುದ್ಧಿಯ ಕೆಲಸವೆಂದು ಭಾವಿಸಿ ದುಡಿಯುವ ಕೈಯಗಳಿಂದ ಅದನ್ನು ಬೇರೆ ಮಾಡಲಾಯಿತು. ವಾಸ್ತವಿಕವಾಗಿ ಬುದ್ಧಿಪೂರ್ವಕವಾದ ದುಡಿಮೆಯಿಂದ ಮತ್ತು ಪ್ರಯೋಗದಿಂದ ಜ್ಞಾನ ಬೆಳೆಯುತ್ತದೆ. ಶತ-ಶತಮಾನಗಳಿಂದ ದೈಹಿಕ ಶ್ರಮ ಶೂದ್ರರಿಗೆ ಮಾತ್ರ ಮೀಸಲಾಯಿತು. ಆತ್ಮ-ಪರಮಾತ್ಮರ ಕುರಿತ ಆಧ್ಯಾತ್ಮ ಚಿಂತನೆ ಬುದ್ಧಿವಂತರ ಕೆಲಸವಾಯಿತು. ಬುದ್ಧಿ ಹಾಗೂ ದುಡಿಮೆ ಬೇರೆ-ಬೇರೆಯಾದಾಗ 'ಇತ್ತ ಬುದ್ದಿ ಇಲ್ಲದೆ, ಅತ್ತ ದುಡಿಮೆಯಿಲ್ಲದೆ ಉಣ್ಣುವವನು ಕಳ್ಳನಾಗುತ್ತಾನೆಂದು' ಗಾಂಧೀಜಿ ಹೇಳುತ್ತಾರೆ.

'ಕಾಸಿ ಕಮ್ಮಾರನಾದ
ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ
ವೇದವನೋದಿ ಹಾರುವನಾದ'[೪]

ಈ ತರಹದ ದೈಹಿಕ ಶ್ರಮ ಮತ್ತು ಬೌದ್ಧಿಕ ಶ್ರಮದ ಕಾಯಕಗಳು ಕ್ರಿಯಾ ವ್ಯತ್ಯಾಸಗಳೇ ಹೊರತು ಶ್ರೇಷ್ಠ-ಕನಿಷ್ಠ ಎಂಬ ನಿಲುವಿನದಲ್ಲ. ವೃತ್ತಿ ಶ್ರೇಷ್ಠತೆಯನ್ನು ಮುಂದು ಮಾಡಿ ಕೇವಲ ಕಂಠಪಾಠ ಮಾಡಿ, ಅದರ ಚೌಕಟ್ಟಿನಲ್ಲಿಯೇ ಓದಿನ ಅಹಂಕಾರದಿಂದ ಬದುಕನ್ನು ಹಿಂದೆ ಹಾಕುವುದು ಶಿಕ್ಷಣವೇ ಅಲ್ಲವೆಂದಿದ್ದಾರೆ. ಇಂತಹ ವೃತ್ತಿ ವ್ಯತ್ಯಾಸಗಳು ಶ್ರಮ ವಿಭಜನೆಯನ್ನು ಹೇಳುತ್ತವೆಯೇ ವಿನಃ ವೃತ್ತಿಯ ಹೆಸರಿನಲ್ಲಿ ವ್ಯಕ್ತಿಯನ್ನು ಕೀಳಿಕರಿಸುವುದಿಲ್ಲ. ಅಂದರೆ ಶರಣರು ಜ್ಞಾನಕ್ಕಿಂತ ಕ್ರಿಯೆಗೆ ಹೆಚ್ಚು ಒತ್ತು ನೀಡಿರುವುದು ಇಲ್ಲಿ ಮುಖ್ಯವೆನಿಸುತ್ತದೆ.

ಪುರೋಹಿತಶಾಹಿ ವರ್ಗಕ್ಕೆ ಕಂಠಸ್ಥ ಓದು ಮತ್ತು ಸಂಸ್ಕೃತ ಭಾಷೆ ಲಾಭಗಳಿಕೆಯ ಒಂದು ಸಾಧನವಾಗಿದೆ. ಭಾಷೆ(ಮಾತು) ಇರುವುದು ವಸ್ತುಗಳ ಸ್ವರೂಪವನ್ನು ಸ್ಪಷ್ಟಪಡಿಸುವುದಕ್ಕಾಗಿ, ಆದರೆ ಸಂಸ್ಕೃತ ಭಾಷೆ ಕ್ರೌರ್ಯ ಹಾಗೂ ದುರುದ್ದೇಶಗಳ ಧ್ವನಿಯಾಗಿದೆ. ಅದು ಜನಸಾಮಾನ್ಯರ ತಿಳಿವನ್ನು ಹೆಚ್ಚಿಸುವುದರ ಬದಲು ಗೊಂದಲವನ್ನೇ ಹೆಚ್ಚಿಸಿ, ವಸ್ತುವಿನಿಂದ ಅವರನ್ನು ದೂರ ಮಾಡುತ್ತದೆ. ಅಲ್ಲದೆ ವೇದ ಶಾಸ್ತ್ರಗಳಂತೆ ಶೋಷಣೆಗೆ ಸಂಕೇತವಾಗಿದೆ. ಪ್ರಭುತ್ವವು ತನ್ನ ದಮನ ನೀತಿಯನ್ನು ಅನುಸರಿಸಿ, ಬೌದ್ಧಿಕ ಸ್ವಾತಂತ್ರ್ಯವನ್ನು ಹರಣ ಮಾಡುವ ಮೂಲಕ ತನಗೆ ವಿರೋಧವಾದ ಶಕ್ತಿಯನ್ನು ಹತ್ತಿಕ್ಕುತ್ತಾ ಬಂದಿರುವುದು ಚರಿತ್ರೆಯಿಂದ ತಿಳಿದಿರುವ ಸಂಗತಿಯೇ ಆಗಿದೆ. ಆದರೂ ಪ್ರತಿಭಟನೆ ಮತ್ತು ದಮನ ನೀತಿಗಳು ಬದುಕಿನುದ್ದಕ್ಕೂ ಮುಖಾಮುಖಿಯಾಗಿ, ಒಂದು ಸಂಸ್ಕೃತಿಯ ಸತ್ವವನ್ನು ಒರೆಗೆ ಹಚ್ಚುತ್ತಾ ಬಂದಿದೆ. ಕುಲದ ಅಹಮ್ಮಿನ, ಬೌದ್ಧಿಕ ದಿವಾಳಿತನದ ಮೇಲುವರ್ಗ ವಿದ್ಯೆಗೆ ಚೌಕಟ್ಟು ಹಾಕಿ, ತಮ್ಮನ್ನು ಅಂಥ ವಿದ್ಯೆಗೆ ಮೀಸಲಾಗಿಸಿಕೊಂಡು ಇತರರನ್ನು ಕತ್ತಲಿನ ಕೂಪಕ್ಕೆ ತಳ್ಳಿದ್ದು, ಶರಣರ ತಳಮಳಕ್ಕೆ ಕಾರಣವಾಗಿದೆ. ವೇದ ಪಾರಂಗತರಾದ ಬ್ರಾಹ್ಮಣರು ಅತ್ಯಂತ ಶ್ರೇಷ್ಠರೆನಿಸಿಕೊಳ್ಳುತ್ತಿದ್ದ ಕಾಲದಲ್ಲಿ ಶೂದ್ರರು ವಿದ್ಯೆಯಿಂದ ವಂಚಿತರಾಗಿ ಕ್ರೌರ್ಯಕ್ಕೆ ಒಳಗಾಗಿ ಅಂಧಕಾರದಲ್ಲಿ ಉಳಿಯುವಂತೆ ಮಾಡಿತು.

'ವೇದಶಾಸ್ತ್ರ ಆಗಮಂಗಳ ನೋಡಿದವರು ಹಿರಿಯರೆ?
ಕವಿ, ಗಮಕಿ, ವಾದಿ, ವಾಗ್ಮಿಗಳು ಹಿರಿಯರೆ?
ನಟಿನಿ, ಬಾಯ, ವಿಲಾಸಿ, ಸುವಿದ್ಯೆವ
ಕಲಿತ ಡೊಂಬನೇನು ಕಿರಿಯನೆ?
ಹಿರಿತನವಾವುದೆಂದೆಡೆ
ಗುಣ, ಜ್ಞಾನ, ಆಹಾರ, ಧರ್ಮ
ಕೂಡಲಸಂಗನ ಶರಣರು ಸಾಧಿಸಿದ ಸಾಧನೆಯೇ ಹಿರಿತನ'[೫]

ಬಸವಣ್ಣ ಈ ವಚನದ ಮೂಲಕ ಹಿರಿತನದ ಮೌಲ್ಯವನ್ನು ನಿರ್ದಿಷ್ಟಗೊಳಿಸಿ, ವಿದ್ಯೆಯ ಡಂಭಾಚಾರದ ಪಾವಿತ್ರ್ಯಕ್ಕೆ ಮುಖಾಮುಖಿಯಾಗಿ ನಿಂತು, ವೇದಕ್ಕೆ ಒರೆಯನಿಕ್ಕಿ, ಶಾಸ್ತ್ರಕ್ಕೆ ನಿಗಳವನಿಕ್ಕಿ, ವಿದ್ಯೆಯ ಅಂತರಾಳವನ್ನು ಮನಗಾಣಿಸಿಕೊಟ್ಟರು. ಒಳಗೆ ಮೈಲಿಗೆಯಾಗಿದ್ದು, ಹೊರನೋಟಕ್ಕೆ ನಿರ್ಮಲವೆನಿಸುವವರ ವ್ಯಕ್ತಿತ್ವವನ್ನು ಗೌಣವಾಗಿಸುವ ವಿದ್ಯೆಗೆ ಅರ್ಥವಿಲ್ಲವೆಂದು, ತನ್ನ ತಾನು

ತಿಳಿಯುವ ಪರಿ ವಿದ್ಯೆಯ ವಾಸ್ತವ ಲಕ್ಷಣವೆಂದು, ಮೌಢ್ಯತೆಯನ್ನು ಬಿತ್ತಿ, ಆತ್ಮ ಜ್ಞಾನವನ್ನು ಕುಂದಿಸುವ ಬೋಧನೆ ವಿದ್ಯೆಯಾಗಲು ಸಾಧ್ಯವಿಲ್ಲವೆಂದು ಹೇಳಿದ್ದಾರೆ. 'ಅನಾಚಾರವಾದರೂ ಆಚಾರ ಬಿಡಬಾರದು' ಎಂಬ ಧೋರಣೆಯು, ವೈದಿಕ ವಿದ್ಯೆ ನೈಜ ಬದುಕಿಗೆ ದೂರಾಗಿದೆ ಎಂಬ ಸಂಗತಿಯನ್ನು ಪ್ರತಿಪಾದಿಸಿದ್ದಾರೆ.

ವಚನಕಾರರು ಲಿಖಿತಮುಖಿ ಅಭ್ಯಾಸಕ್ಕಿಂತ ಮೌಖಿಕ ಮುಖಿಯಾಗಿರುವುದು ಸ್ಪಷ್ಟವಾಗಿ ಕಾಣುತ್ತದೆ. ಬರೀ ಓದು ಅಂದರೆ ಗ್ರಂಥ ಪಠಣದಿಂದ ಒಬ್ಬನಲ್ಲಿ ಸಂಪೂರ್ಣವಾಗಿ ಅರಿವು ಮೂಡಲು ಸಾಧ್ಯವಿಲ್ಲವೆಂಬುದು ಅವರ ಸ್ಪಷ್ಟ ಅಭಿಪ್ರಾಯ. 'ವಿದ್ಯೆಯನರಿದವ ಗುದ್ದಾಟಕ್ಕೊಳಗಾದ ಅವಿದ್ಯೆಯನರಿದವ ಪ್ರಪಂಚದ ಒದ್ದು ಬಿಟ್ಟ ನೋಡಾ' ಎಂದ ಸಿದ್ಧರಾಮ ಹೇಳುತ್ತಾನೆ. ವಿದ್ಯೆಯು ನಮ್ಮಲ್ಲಿ ಜಾಣತನವನ್ನು ಹೆಚ್ಚಿಸುತ್ತದೆ. ಇದರ ಫಲ ಗುದ್ದಾಟ ಮಾತ್ರ. ಬರೀ ವಿದ್ಯಾವಂತನಾಗುವುದಕ್ಕಿಂತ ಅವಿದ್ಯೆಯನ್ನು ಅಂದರೆ ಅಜ್ಞಾನವನ್ನು ಅರಿಯುವಂತಾಗುವುದು ಮುಖ್ಯ. ಅಜ್ಞಾನವನ್ನು ಕಳೆದುಕೊಳ್ಳುವ ಮಾರ್ಗವನ್ನು ಅರಿತವನು ಪ್ರಪಂಚವನ್ನೇ ಗೆದ್ದುಬಿಡುತ್ತಾನೆಂಬ ಭರವಸೆ ಇಲ್ಲಿದೆ. 'ಓದಿಹೆನೆಂಬ ಒಡಲು ಕಂಡೆಹೆನೆಂಬ ಭ್ರಾಂತು... ತನ್ನ ಉದರದ ಕಕ್ಕುಲತೆ' ಎಂದ ಚೌಡಯ್ಯ ತನ್ನ ಓದು ಉದರ ಪೋಷಣೆಗೆ ಮಾತ್ರ ಮೀಸಲಾಗಿಸದೆ, ತನ್ನನ್ನು ತಾನು ಅರಿಯುವಲ್ಲಿ, ಜ್ಞಾನವಂತನಾಗಿ ಬೆಳೆಯಲು ಸಹಾಯವಾಗಬೇಕು. ನಮ್ಮ ಓದಿನಲ್ಲಿ ಕೇವಲ ಬದುಕುವ ಉದ್ದೇಶವಿರದೆ ಲೋಕವನ್ನು ಅರಿಯಲು ಸಹಾಯಕವಾಗುವಂತಿರಬೇಕು.



'ವೇದಗಳೆಂಬವು ಬ್ರಹ್ಮನ ಭೂತಾಟ
ಶಾಸ್ತ್ರಂಗಳೆಂಬವು ಸರಸ್ವತಿಯ ಗೊಡ್ಡಾಟ
ಆಗಮವೆಂಬವು ಋಷಿಯ ಮರುಳಾಟ
ಪುರಾಣಂಗಳೆಂಬವು ಪೂರ್ವದವರ ಗೊಡ್ಡಾಟ
ಇಂತಿವ ನೆನೆದವರನೀತಿಗಳೆದು ನಿಜದಲ್ಲಿ
ನಿಂದಪ್ಪಾನೆ ಗುಹೇಶ್ವರನಲ್ಲಿ ಅಚ್ಚಲಿಂಗೈಕ್ಯನು'[೬]

ವೇದ, ಶಾಸ್ತ್ರ, ಆಗಮ ಪುರಾಣಗಳನ್ನು ಅಲ್ಲಗಳೆಯುವುದೇ ಸತ್ಯಾನ್ವೇಷಕನ ಮೊದಲ ಹಂತವಾಗಿದೆ. ವೇದಾಧ್ಯಯನಗಳು ಜನರ ಆಲೋಚನೆಯ ಸ್ವಂತಿಕೆಯನ್ನು ಹತ್ತಿಕ್ಕುವಂತಹವುಗಳಾಗಿವೆ. ವೇದವು ಮಾತಿನ ನೆಲೆಯಲ್ಲಿಯೇ ನಿಲ್ಲುವ ಜ್ಞಾನವನ್ನು ನೀಡಬಲ್ಲವೇ ಹೊರತು, ಅನುಭವದ ಆರ್ದ್ರತೆಯನ್ನು ದಕ್ಕಿಸಿಕೊಳ್ಳುವುದಕ್ಕೆ ಸಹಾಯಕವಾಗಲಾರವು. ವಚನಕಾರರಿಗೆ ಅನುಭವವು ಅರಿವಿಗಿಂತ ಹೆಚ್ಚು ಬೆಲೆಬಾಳುವಂತಹುದಾಗಿದೆ.

ಶಿಕ್ಷಣವೆನ್ನುವುದು ಕೇವಲ ಪಠ್ಯದಲ್ಲಿರುವ ವಿಷಯ ಅಥವಾ ಮಾಹಿತಿಯನ್ನು ತಿಳಿದುಕೊಳ್ಳುವುದಲ್ಲ. ವ್ಯಕ್ತಿಯನ್ನು ಪರಿಪೂರ್ಣನನ್ನಾಗಿ ಮಾಡುವುದು ಮಾತ್ರ ಶಿಕ್ಷಣವಾಗುತ್ತದೆ. ಲಿಖಿತ ಬಗೆಯ ವಿದ್ಯೆಯ ಆಕರಗಳು ಕೇವಲ ಮಾಹಿತಿಯನ್ನಷ್ಟೇ ನೀಡಬಲ್ಲವು. ಅರಿವೆಂದರೆ ಕೇವಲ ಮಾಹಿತಿಯಲ್ಲ. ಓದಿ, ಕೇಳಿ, ತಿಳಿದ ಬಾಹ್ಯಜ್ಞಾನವಲ್ಲ. ಅದು ಸ್ವಂತ ಅನುಭವದ ಮೂಲಕ ಪಡೆದ ತಿಳಿವಳಿಕೆ, ಸ್ವಾವಲಂಬಿ

ಬದುಕನ್ನು ಕಟ್ಟಿಕೊಡುವ ಶ್ರಮದೊಳಗೆ ಒಂದಾಗಿರುವಂತಹದ್ದಾಗಿದೆ. ಇಂತಹ ಅರಿವು ಮಾತ್ರ ಆಚರಣೆಗೆ ಬಂದಾಗ ಬದುಕು ಸಾರ್ಥಕವಾಗುತ್ತದೆ. 'ಆವ ವಿದ್ಯೆ ಕಲಿತಡೇನು? ಸಾವವಿದ್ಯೆ ಬೆನ್ನ ಬಿಡದು' ಎಂದ ಅಕ್ಕಮಹಾದೇವಿಯ ಮಾತು ಅಕ್ಷರ ಕಲಿಕೆ, ಅಕ್ಷರ ಕಲಿತ ಅಹಂಕಾರಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳಿದ್ದಾಗಿದೆ.

'ವೇದವೆಂಬುದು ಓದಿನ ಮಾತು
ಶಾಸ್ತ್ರವೆಂಬುದು ಸಂತೆಯ ಸುದ್ದಿ
ಪುರಾಣವೆಂಬುದು ಪುಂಡರ ಗೋಷ್ಠಿ
ತರ್ಕವೆಂಬುದು ತಗರ ಹರಟೆ'[೭]

ವೇದ, ಶಾಸ್ತ್ರ, ಪುರಾಣಗಳನ್ನು ಓದಿ ಕರಗತ ಮಾಡಿಕೊಂಡಾಕ್ಷಣ ಬ್ರಾಹ್ಮಣರು ಶ್ರೇಷ್ಠರಾಗಲಾರರು. ಓದು ಆಡಂಬರ, ಪ್ರದರ್ಶನ ಅಹಂಕಾರದ ಮೂಲವಾದಾಗ ಅಕ್ಷರ ಕಲಿಕೆ ಶೋಷಣೆಯ ಸಾಧನವಾಗಿ ಪರಿಣಮಿಸುತ್ತದೆ. ವೈಯಕ್ತಿಕ ಲಾಭಗಳಿಗೆ ಬೇಕಾದ ಬುದ್ಧಿವಂತಿಕೆಯನ್ನು, ಹುನ್ನಾರವನ್ನು ಇಂತಹವುಗಳು ಒದಗಿಸಿಕೊಡುವುದರಿಂದ 'ಕಲಿತವರು' ಜನಸಾಮಾನ್ಯರಿಂದ ದೂರ ಉಳಿದಿದ್ದಾರೆ. ಅಕ್ಷರ ಕಲಿಕೆಯ ಅಂತರಾರ್ಥವನ್ನು ತಿಳಿಯದೆ, ವ್ಯವಹಾರಿಕ ಲಾಭದ ಸಾಮಗ್ರಿಯಾಗಿ ಬಳಸಲ್ಪಡುತ್ತಿದೆ. ಜ್ಞಾನ, ಅರಿವನ್ನು ಕಳೆದುಕೊಂಡು ಮಾಹಿತಿಗಳನ್ನಷ್ಟೇ ಮಕ್ಕಳಿಗೆ ಕಲಿಸುತ್ತಿರುವ ಇಂದಿನ ಶಿಕ್ಷಣ ಅವರನ್ನು ಕುರೂಪಿಗಳನ್ನಾಗಿಸುತ್ತಿದೆ. ಪಡೆದ ಮಾಹಿತಿಯನ್ನು ವ್ಯವಸ್ಥೆಗೆ ಒಳಪಡಿಸಿ ತನ್ನ ಅಂತಃಸತ್ವವಾಗಿ ಬೆಳೆಸಿಕೊಳ್ಳುವ ಸಾಮರ್ಥ್ಯಗಳನ್ನು ಇಂದಿನ ಶಿಕ್ಷಣ ಒದಗಿಸುತ್ತಿಲ್ಲ. ವ್ಯವಸ್ಥೆಗೆ ಒಳಪಡಿಸದಿರುವ ಸಂಗ್ರಹಿತ ಮಾಹಿತಿ ಜಡವಾಗಿ ಅವ್ಯವಸ್ಥೆಗೆ ದಾರಿ ಮಾಡಿಕೊಡುತ್ತಿದೆ. ಆದ್ದರಿಂದಲೇ ಶರಣರು 'ಅಜ್ಞಾನದಿಂದ ಜ್ಞಾನದ ಕಡೆಗೆ ಕರೆತರುವ ಶಕ್ತಿಯೇ ಅರಿವು' ಎಂದಿದ್ದಾರೆ. ಅರಿವೆಂದರೆ ಗ್ರಹಿಕೆ, ತಿಳಿವಳಿಕೆ. ಇದನ್ನೇ 'ಅರಿವೇ ಗುರು' ಎಂದು ಸಾರಿದ್ದಾರೆ. 'ಅಕ್ಷರವ ಬಲ್ಲೆವೆಂದು ಅಹಂಕಾರವೆಡೆಗೊಂಡು ಲೆಕ್ಕಗೊಳ್ಳರಯ್ಯಾ' ಎನ್ನುವ ಅಲ್ಲಮ ನಿತ್ಯ ಬದುಕಿನ ಅನುಭವಗಳೇ ಜೀವನದ ಪಾಠಗಳಾಗಿರುವಾಗ ಪತ್ರದ ಓದು ನಿರರ್ಥಕವಾಗುತ್ತದೆ ಎಂದಿದ್ದಾರೆ. ಇಂದಿನ ಅಕ್ಷರ ಬಲ್ಲವರ ಸ್ಥಿತಿಯೂ ಇದೆ ಆಗಿದೆ. ಅದಕ್ಕಾಗಿಯೇ ಅಕ್ಷರ ಕಲಿಕೆಯ ಜೊತೆಗೆ ಅರಿವು ಮತ್ತು ಕ್ರಿಯಾಶೀಲತೆಗೆ ಹೆಚ್ಚಿನ ಮಹತ್ವ ನೀಡಲಾಗಿದೆ.

ಇದೇ ವಚನ ಪರಂಪರೆಯ ಹಿನ್ನೆಲೆಯಲ್ಲಿ ಅಂದಿನ ಜನಸಾಮಾನ್ಯರಿಗೆ ವೇದಾಧ್ಯಯನಗಳಾಗಲಿ, ಸಂಸ್ಕೃತ ಅರಿವಾಗಲಿ ಸರಳವಾಗಿ ದಕ್ಕುತ್ತಿರಲಿಲ್ಲ. ಒಂದು ವೇಳೆ ಕಲಿತರೂ ಉಗ್ರ ಶಿಕ್ಷೆಗೆ ಒಳಪಡುವ ಸಂಗತಿಗಳು ತಿಳಿದೆ ಇವೆ. ಇಂತಹ ಸಂದರ್ಭದಲ್ಲಿ 'ಉರಿಲಿಂಗ ಪೆದ್ದಿ' ಎಂಬ ದಲಿತ ವಚನಕಾರ, ಉಳಿದ ವಚನಕಾರರಂತೆ ವೇದಾಗಮಗಳನ್ನು ಏಕಾಏಕಿ ಅಲ್ಲಗಳೆಯದೆ, ವೇದಾಗಮಗಳಲ್ಲಿರುವ ಸಾತ್ವಿಕ ಅಂಶಗಳನ್ನು ಮಾತ್ರ ಎತ್ತಿ ತೋರಿಸುತ್ತಾ, ಅವುಗಳಿಗೂ ಮಿಗಿಲಾದ ಸಿದ್ಧಿಯನ್ನು ಹೇಗೆ ಸಾಧಿಸಬಹುದೆಂಬ ಸತ್ಯವನ್ನು ಈ ವಚನದ ಮೂಲಕ ನಿರೂಪಿಸಿದ್ದಾನೆ.

'ವೇದ ವಾಕ್ಯ ವಿಚಾರಕ್ಕೆ ಬೀಜ
ಶಾಸ್ತ್ರ ವಾಕ್ಯ ಸಂತೆಗೆ ಬೀಜ
ಪುರಾಣ ವಾಕ್ಯ ಪುಣ್ಯಕ್ಕೆ ಬೀಜ
ಆಗಮ ವಾಕ್ಯ ಅರಿವಿಂಗೆ ಬೀಜ
ಭಕ್ತಿಯ ಫಲ ಸಿದ್ಧಿಭವನಕ್ಕೆ ಬೀಜ
ಐಕ್ಯನಿಷ್ಠೆ ಸಮ್ಯಗ್ ಜ್ಞಾನಕ್ಕೆ ಬೀಜ
ಸಮ್ಯಗ್ ಜ್ಞಾನ ಅದ್ವೈತಕ್ಕೆ ಬೀಜ
ಸುಜ್ಞಾನುಭಾವ ಮಹದನುಭಾವಕ್ಕೆ ಬೀಜ
ಅರಿವನಾರಡಿಗೊಂಡು ಕುರುಹಿಲ್ಲದ ಲಿಂಗದಲ್ಲಿ
ತೆರಹಿಲ್ಲದಿಪ್ಪುದನರಿಯಾ
ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರ'[೮]

ಸರಳವಾದ ಮಾತುಗಳಿಂದ ಅರ್ಥೈಸುವುದಾದರೆ ವೇದವು ಜ್ಞಾನ ಅಥವಾ ತಿಳುವಳಿಕೆಯ ಸಂಕೇತ. ಅದರಲ್ಲಿರುವ ಮಾತುಗಳು ವಿಚಾರ ಮಥನಕ್ಕೆ ಬೀಜ ರೂಪವಾಗಿವೆ. ಶಾಸ್ತ್ರ ಒಂದು ಬಗೆಯ ಸಂಪ್ರದಾಯ ಅಥವಾ ವಿಧಿ, ನಿಯಮ, ಕಟ್ಟಳೆ ಇಂತಹ ಸಾಂಪ್ರದಾಯಿಕ ನಿಯಮಗಳು ಜ್ಞಾನದ ಗ್ರಹಿಕೆಗೆ ಬೀಜರೂಪವಾಗಿವೆ. ಪುರಾಣದಿಂದ ಪುಣ್ಯ, ಆಗಮ ಪೂಜಾತಂತ್ರದ ನಿಯಮಗಳ ಅರಿವಿಂಗೆ ಎಂದರೆ ಆಳವಾದ ತಿಳುವಳಿಕೆ ಹಾಗೂ ಹೆಚ್ಚಿನ ಮಾಹಿತಿಗಾಗಿ ಬೀಜರೂಪವಾಗಿದೆ. ಈ ನಾಲ್ಕೂ ಸಾಲುಗಳು ಅಧ್ಯಯನ ವಿಚಾರಗಳಿಗೆ ಸಂಬಂಧಿಸಿವೆ. ಇಲ್ಲಿ ಅವುಗಳ ಸೂಕ್ಷ್ಮ ಅವಲೋಕನದಿಂದ ದೊರಕುವ ಸೂಕ್ತ ತಿಳುವಳಿಕೆಯನ್ನು ಪ್ರತಿಪಾದಿಸಿದ್ದಾನೆ. ಮುಂದಿನ ಹಂತದಲ್ಲಿ ಸಾಧನೆಯ ಅನುಭವದಿಂದ ಪೂರ್ಣಸಿದ್ಧತೆಯ ಅನುಭಾವದ ನೆಲೆಯನ್ನು ತಲುಪುವ ವಿವಿಧ ಹಂತಗಳನ್ನು ಪರಿಚಯಿಸಿದ್ದಾನೆ. ಅನುಭವ ಹಾಗೂ ಸಾಧನೆಗಳಿಂದ ಗಳಿಸಬಹುದಾದ ಸಿದ್ಧಿಯನ್ನು ಲಿಂಗಾಂಗ ಸಂಗಿಯಾಗುವುದರಿಂದ ಅನುಭಾವ ನೆಲೆಯನ್ನು ತಲುಪಬಹುದೆಂಬುದನ್ನು ಸ್ಪಷ್ಟಪಡಿಸಿದ್ದಾನೆ. ಇಲ್ಲಿ ಸಾಧನೆಗಳ ಗೊಂದಲವಿಲ್ಲ ಸಿದ್ಧಿಗಳ ಗೊಂದಲವಿಲ್ಲ. ಸರಳ ಅನುಸಂಧಾನವೇ ಪೂರ್ಣಸಿದ್ಧಿಗೆ ದಾರಿಯಾಗಿದೆ. ಇದಕ್ಕೆ ಪೂರಕವಾಗಿ ಅವನದೇ ಇನ್ನೊಂದು ವಚನವನ್ನು ನೋಡಬಹುದು. 'ಓಂ ನಮಃ ಶಿವಾಯಃ ಎಂಬುದೇ ವೇದ... ಓಂ ನಮಃ ಶಿವಾಯ ಎಂಬುದೇ ಸಕಲ ಕಲೆ...' ಎಂದು ಹೇಳುವುದರ ಮೂಲಕ ಅಧ್ಯಯನ ಮೂಲವಾದ ಸಕಲ ವೇದಾಗಮಗಳ ಒಟ್ಟಾರೆ ಸಾರಾಂಶ ಶಿವಸಾಕ್ಷಾತ್ಕಾರವೇ ಆಗಿದೆ ಎನ್ನುತ್ತಾನೆ.

ಒಂದೆಡೆ ಸಮತವಾದಿ ಬಸವಣ್ಣ 'ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ, ತರ್ಕದ ಬೆನ್ನಬಾರನೆತ್ತುವೆ, ಆಗಮದ ಮೂಗ ಕೊಯ್ಯುವೆ...' ಎಂದು ಉಗ್ರವಾಗಿ ವೇದಾಗಮಗಳ ನಿರಾಕರಣೆ ಮಾಡಿದ್ದಾನೆ. ಎಂದರೆ ಅಂದಿನ ಸಮಾಜ ಎಂತಹ ಅಧಃಪತನದ ಅಂಚಿಗೆ ತಲುಪಿತ್ತು ಎಂಬುದು ತಿಳಿದ ವಿಚಾರ. ಮತ್ತೊಂದೆಡೆ ಅಲ್ಲಮಪ್ರಭು ವೇದ, ಶಾಸ್ತ್ರ, ಆಗಮ ಭಕ್ತಿಯ ಬೂಟಾಟಿಕೆಯಲ್ಲಿ ಹೊಟ್ಟೆಯನ್ನು ಹೊರೆದುಕೊಳ್ಳುವ ಸಾಧನವೆಂಬಂತೆ ಬಿಂಬಿಸಿದ್ದಾನೆ. ಅಕ್ಕಮಹಾದೇವಿ ಇವುಗಳನ್ನೆಲ್ಲಾ

ಕುಟ್ಟುತ್ತಾ, ನುಚ್ಚು ತೌಡು ಕಾಣಿಬೋ... ಎಂದು ಅವುಗಳ ಸವಕಲುತನವನ್ನು ಒತ್ತಿ ಹೇಳುತ್ತಾಳೆ. ಪಂಡಿತರ ಸ್ವತ್ತಾಗಿದ್ದ ಈ ಜ್ಞಾನ ಮಾದರಿಗಳು ತಮ್ಮ ಮೂಲದ ವಿಶಾಲ ಪರಿಕಲ್ಪನೆಯನ್ನು ಕಳೆದುಕೊಂಡು ಕೆಲವೇ ಜನರ ಅನುಕೂಲಕ್ಕೆ ತಕ್ಕ ಬಂಡವಾಳವಾಗಿಬಿಟ್ಟಿವೆ. ವೇದ, ಶಾಸ್ತ್ರ, ಪುರಾಣ ಓದುವವರಿಗೂ ಡೊಂಬ, ಅಂಬಿಗ, ಅಗಸ, ಚಮ್ಮಾರರಂತಹ ಹಲವಾರು ಕುಶಲ ವಿದ್ಯೆಯನ್ನು ಕಲಿತ ಶ್ರಮಿಕರಿಗೂ ವ್ಯತ್ಯಾಸವಿಲ್ಲ. ಇಬ್ಬರದೂ ಉದರ ಪೋಷಣೆಯ ವಿದ್ಯೆ ಎಂಬುದು ಮುಖ್ಯವಾದ ಸಂಗತಿ. ಜ್ಞಾನವು(ವಿದ್ಯೆ) ವ್ಯಕ್ತಿಯ ಹುಟ್ಟಿನ ಹಿರಿತನದಿಂದಾಗಲೀ, ಓದಿನ ಬಲದಿಂದಾಗಲೀ ಬರುವಂತಹದ್ದಲ್ಲ. ಪಾಂಡಿತ್ಯಕ್ಕಿಂತ ಅನುಭಾವಕ್ಕೆ, ಹೃದಯ ಶುದ್ಧಿಗೆ, ಮಾತಿಗಿಂತ ನಡೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದಾರೆ ಇದನ್ನೇ ಸಿದ್ಧರಾಮ 'ಅನುಭವವೆಂಬುದು ಅನುಭಾವಿಕಗಲ್ಲದೆ ಹೊತ್ತಿಗೆಯಲ್ಲಿಲ್ಲ ನೋಡಾ' ಎಂದಿದ್ದಾನೆ.

ಈ ಅಭೇದ ಸ್ಥಿತಿಯನ್ನು ಅರ್ಥ ಮಾಡಿಸಲು ಗೋಚರವಾಗುವದನ್ನು ಬಳಸಿಕೊಂಡು, ಅಗೋಚರ ಶಕ್ತಿಯನ್ನು ಪರಿಚಯಿಸುವ ಕ್ರಿಯೆ ಇಲ್ಲಿದೆ. ಜಡವೆಂದು ಕಾಣುವ ಶಿಲೆಯೊಳಗೆ, ಚೈತನ್ಯ ಕಣ್ಣಿಗೆ ಕಾಣುವುದಿಲ್ಲ. ಆದರೆ ಅದರ ಇರುವಿಕೆ ಸುಳ್ಳಲ್ಲ. ಆ ಸತ್ಯವನ್ನು ಗ್ರಹಿಸಲಾರದ್ದು ನಮ್ಮ ಇಂದ್ರಿಯಗಳ ಮಿತಿಯನ್ನು ಸೂಚಿಸುತ್ತದೆ.

'ಶಿಲೆಯೊಳಗಣ ಪಾವಕನಂತೆ
ಉದಕದೊಳಗಣ ಪ್ರತಿಬಿಂಬದಂತೆ
ಬೀಜದೊಳಗಣ ವೃಕ್ಷದಂತೆ
ಶಬ್ದದೊಳಗಣ ನಿಶ್ಯಬ್ದದಂತೆ
ಗುಹೇಶ್ವರ ನಿಮ್ಮ ಶರಣ ಸಂಬಂಧ'[೯]

ಇವುಗಳಲ್ಲಿರುವ ಶಕ್ತಿಯ ಇರುವಿಕೆ ಸತ್ಯ. ಎಲ್ಲವನ್ನೂ ನಮ್ಮ ಇಂದ್ರಿಯಗಳ ಮಿತಿಯಲ್ಲೇ ಗ್ರಹಿಸುವ, ತರ್ಕದಿಂದ ಸಾಧಿಸುವ ವಿಜ್ಞಾನ ಕೂಡ ಅಪೂರ್ಣವಾದ ಜ್ಞಾನ ಮಾದರಿಯೇ ಆಗಿದೆ. ವಿಜ್ಞಾನಕ್ಕೆ ಕಾಣಲಾಗದ್ದು, ಅನುಭಾವಕ್ಕೆ ಕಾಣುವುದು ಈ ಕಾರಣದಿಂದಾಗಿಯೇ. ಅರ್ಥವನ್ನು ದೃಢಪಡಿಸುವ ಕುರುಹುಗಳನ್ನೇ ಅಲ್ಲಗಳೆಯುವ ಮೂಲಕ ಪರಿಚಿತವಾದ ಗ್ರಹಿಕೆಗಳಾಚೆಗೆ ಸಾಗಬೇಕಾಗಿದೆ. ಕುರುಹುಗಳ ಮೂಲಕ ಅರಿವನ್ನು ಕಂಡುಕೊಳ್ಳಲು ಹೊರಟರೆ, ನಿಜದ ಅರಿವಿಗೆ ಈ ಕುರುಹುಗಳೇ ತೊಡಕಾಗಿಬಿಡುತ್ತವೆ.

'ಒಲುಮೆಯ ಕೂಟಕ್ಕೆ ಹಾಸಿನ ಹಂಗೇಕೆ?
ಬೇಟದ ಮರಳಿಗೆ ಲಜ್ಜೆ ಮುನ್ನುಂಟೆ?
ನಿಮ್ಮನರಿದ ಶರಣರಿಗೆ ಪೂಜೆಯ ಹಂಬಲ ದುಂದುಗಬೇಕೆ?
ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ?
ಗುಹೇಶ್ವರ ಲಿಂಗಕ್ಕೆ ಕುರುಹು ಮುನ್ನುಂಟೆ?'[೧೦]

ಅರ್ಥಕೇಂದ್ರಿತ ನಿಲುವುಗಳನ್ನು ನಿರಾಕರಿಸುವ ಮೂಲಕ ನಿಜವನ್ನು ಕಾಣುವ ಹಂಬಲವಿಲ್ಲಿದೆ. ಧರ್ಮ, ಪೂಜೆ, ಆಚರಣೆಗಳೆಲ್ಲ, ವ್ಯವಸ್ಥೆಯ ಕುರುಹುಗಳನ್ನು ನಿರಾಕರಿಸುವುದು ಇಲ್ಲಿ ಅನಿವಾರ್ಯವಾಗುತ್ತದೆ. ಕುರುಹುಗಳೆಲ್ಲ ನಾಶವಾದ ಮೇಲೆ ಅಲ್ಲಿ ದ್ವೈತವಳಿಯುತ್ತದೆ. ಸಂಬಂಧಗಳೂ ಅಳಿಯುತ್ತವೆ. ಕೊನೆಗೆ ಚೈತನ್ಯವೊಂದೇ ಉಳಿಯುತ್ತದೆ. ಕೊನೆಗೆ 'ಅರುಹಿನ ಕುರುಹಿನ ಮರವಿನೊಳಗೆ ಗುಹೇಶ್ವರನೆಂಬುದು ತಾ ಬಯಲು ನೋಡಾ' ಎಂದು ಅರಿವೆಂಬುದು ನಮ್ಮಿಂದ ಹೊರಗೆ ಕೈಗೆಟುಕದ ಯಾವುದೋ ಅಮೂರ್ತ ನೆಲೆಯಲ್ಲಿ ಅಡಗಿದ ವಸ್ತುವಲ್ಲ. ಅದು ಯಾವ ಸೂತ್ರಕ್ಕೆ ಬದ್ಧವಾಗದ ಮನಸ್ಸಿನ ಮುಕ್ತಸ್ಥಿತಿಯಾಗಿದೆ. ಇಂಥ ಅರಿವನ್ನು ವಿವರಿಸಲು ಬೌದ್ಧಿಕತೆ, ತಾರ್ಕಿಕತೆಗಳು ಅಸಮರ್ಥ ಎಂಬುದನ್ನು ಅರ್ಥಮಾಡಿಸಲು ಅಲ್ಲಮ ಇಂತಹ ಪ್ರತಿಮೆಗಳನ್ನು ಬಳಸಿಕೊಂಡಿದ್ದಾನೆ.

'ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ
ಭಾರತವೆಂದಡೆ ಭರತ ದೇಶದಲ್ಲಿ ಜನಿಸಿ
ಕಾಮಿನಿಯರ ಸೋಗು ಹಾಕಿ
ಆ ದೇಶಕ್ಕಥಿಯಾದ ಕಥೆಯ ಭಾರತವಯ್ಯಾ
ರಾಮಾಯಣವೆಂದಡೆ ಆದಿನಾರಾಯಣನು
ಪೃಥ್ವಿಯೊಳು ಪುಟ್ಟಿ, ರಾಮನೆಂಬಭಿದಾನವ ಧರಿಸಿ
ಸರ್ವರಂತೆ ಪ್ರಪಂಚವ ಮಾಡಿ
ರಾಕ್ಷಸರ ಗರ್ವವನಳಿದುದೆ ರಾಮಾಯಣ
ಮಾಡಿ ಉದ್ಧಟವಾದಲ್ಲಿ ಕಾಲಾಂತರದಲ್ಲಾದರೂ
ಕುರುಹಿನೊಳಗಾದವಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನಾ'[೧೧]

ಈ ವಚನ ಮೇಲುನೋಟಕ್ಕೆ ಭಾರತ-ರಾಮಾಯಣಗಳನ್ನು ಖಂಡಿಸುವಂತಿದ್ದರೂ, ಅಷ್ಟಕ್ಕೆ ಅದರ ಉದ್ದೇಶ ಸೀಮಿತವಾಗಿಲ್ಲ. ಪರಂಪರೆಯಿಂದ ಪುರೋಹಿತಶಾಹಿಯ ಸಾಂಸ್ಕೃತಿಕ ದಬ್ಬಾಳಿಕೆಗೆ ಗುರಿಯಾಗಿದ್ದ, ಶೂದ್ರವರ್ಗದ ಸಾಂಕೇತಿಕ ಪ್ರತಿಕ್ರಿಯೆಯಾಗಿ ತೋರುತ್ತದೆ. ಅವುಗಳನ್ನು ಪಠಿಸಿದರೆ ಇಹ-ಪರ ಸುಖ ಪ್ರಾಪ್ತಿಯಾಗುವುದೆಂದೂ ಹಿಂದಿನಿಂದಲೂ ಜನ ನಂಬಿಕೊಂಡು ಬಂದಿದ್ದಾರೆ. ಈ ನಂಬಿಕೆಯ ಹಿಂದೆ 'ಪುಸ್ತಕ ವಿದ್ಯೆಯೇ ವಿದ್ಯೆ' ಎನ್ನುವ ಆಳವಾಗಿ ಬೇರುಬಿಟ್ಟ ತಿಳುವಳಿಕೆ ಪರಂಪರಾನುಗತವಾಗಿ ನಮ್ಮನ್ನು ಆಳುತ್ತಾ ಬಂದಿದೆ. ಅರ್ಜುನ ಶೌರ್ಯದ ಸಂಕೇತವಾಗಿ, ರಾಮ ಆದರ್ಶ ವ್ಯಕ್ತಿಯನ್ನಾಗಿ ತಿಳಿಯಲು ಈ ಪುಸ್ತಕ ವಿದ್ಯೆಯಿಂದ ಸಾಧ್ಯವಾಯಿತು. ಇಂತಹ ಹೇಳಿಕೆಗಳನ್ನು ಮುರಿದು 'ವಿದ್ಯೆ' ಎಂಬುದು 'ಅಭ್ಯಾಸಿಕನ ಕೈವಶ' ಎಂದ ಸಿದ್ಧರಾಮ. ವ್ಯಕ್ತಿಯು ಪರಿಶ್ರಮದಿಂದ ಗಳಿಸುವಂತಹ ವಿದ್ಯೆಗೆ ಒತ್ತು ನೀಡಿದ. ಅಲ್ಲದೇ ಲೌಕಿಕ ವಿದ್ಯೆಯೇ ನಿಜವಾದ ವಿದ್ಯೆ ಎಂಬ ಉತ್ತಮರ ತತ್ವಕ್ಕೆ ಬೆಲೆ ಇಲ್ಲದಂತಾಯಿತು. ಏಕೆಂದರೆ ವಚನಕಾರರಲ್ಲಿ ಬಹಳಷ್ಟು ಮಂದಿ ಕೆಳವರ್ಗದಿಂದ ಬಂದವರಾಗಿದ್ದರು. ವಿದ್ಯೆಯಿಂದ ಸಾಮಾಜಿಕ ಸವಲತ್ತುಗಳಿಂದ ವಂಚಿತರಾದವರಾಗಿದ್ದರು. ಅವರು

ವಿದ್ಯಾವಂತರಲ್ಲದಿದ್ದರೂ, ಲೌಕಿಕ ಭೋಗಭಾಗ್ಯಗಳು ಅವರಲ್ಲಿ ಇಲ್ಲದಿದ್ದರೂ, ತೃಪ್ತಿಯ ಬದುಕು ಸಾಗಿಸಿದ್ದರು. ತಮ್ಮ ಬದುಕನ್ನು ಲೌಕಿಕದಿಂದ ಅಲೌಕಿಕದತ್ತ ಹೊರಳಿಸುವ ತಿಳುವಳಿಕೆಯನ್ನು ಅವರು ಹೊಂದಿದ್ದರು. ಅವರಿಗೆ ಪುಸ್ತಕ ಒದಗಿಸುವ ವಿದ್ಯೆಗಿಂತ ಬದುಕು ಕಲಿಸುವ ಪಾಠ ಮುಖ್ಯವಾಗಿತ್ತು. ಅಲೌಕಿಕ ಸುಖದ ಬೆನ್ನು ಹತ್ತಿಹೋಗುವ 'ಆತ್ಮವಿದ್ಯೆ'ಯ ಅರಿವು ಶರಣರ ಸಂಗದಿಂದ ಲಭ್ಯವಾಗಿತ್ತು. ಈ ವಾಸ್ತವದ ನೆಲೆಯಲ್ಲಿ 'ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ' ಎಂಬ ನಿಲುವು ಇಲ್ಲಿದೆ.

'ಜ್ಞಾನದಲ್ಲಿ ಅರಿದರೇನಯ್ಯಾ ಸತ್ಕ್ರಿಯಾಚಾರಿಯಾಗದನ್ನಕ್ಕರ?
ನೆನೆದ ಮಾತ್ರದಲ್ಲಿ ಕಾಂಬುದೆ ಕಾರ್ಯದಲ್ಲಿಲ್ಲದೇ?
ಕುರುಡ ಕಾಣ ಪಥವ
ಹೆಳವ ನಡೆಯಲರಿಯ
ಒಂದಿಲ್ಲದಿದ್ದರೆ ಒಂದಾಗದು
ಜ್ಞಾನವಿಲ್ಲದ ಕ್ರಿ ಜಡ
ಕ್ರಿ ಇಲ್ಲದ ಜ್ಞಾನ ಭ್ರಾಂತಿ
ಇದು ಕಾರಣ ಸಿದ್ಧಸೋಮನಾಥನಲ್ಲಿ'[೧೨]

ಈ ವಚನದಿಂದ ಅಮುಗಿದೇವಯ್ಯನ ವ್ಯಕ್ತಿತ್ವವು ಸರ್ವತೋಮುಖವಾಗಿ ವಿಕಾಸ ಹೊಂದಿರುವುದನ್ನು ಗುರುತಿಸಬಹುದು. ದೇವಯ್ಯನದು ಬರಿಯ ಗೊಡ್ಡು ಪಾಂಡಿತ್ಯವಾಗಿರಲಿಲ್ಲ. ಜ್ಞಾನ ಮತ್ತು ಕ್ರಿಯೆಗಳು ಒಂದು ನಾಣ್ಯದ ಎರಡು ಮುಖವಿದ್ದಂತೆ. ಬರಿಯ ಬೌದ್ಧಿಕ ಜ್ಞಾನವು ಜೊಳ್ಳು. ಅದರೊಡನೆ ಆ ಜ್ಞಾನದಂತೆ ಕ್ರಿಯೆ ಇರಬೇಕು. ಅದು ಸತ್ಕ್ರಿಯೆಯೇ ಆಗಿರಬೇಕು. ಜ್ಞಾನ-ಕ್ರಿಯೆಗಳು ಜೊತೆಯಲ್ಲಿಯೇ ಸಾಗುತ್ತವೆ. ಜ್ಞಾನಕ್ಕೆ ಕ್ರಿಯೆಯ ಆಶ್ರಯವಿದೆ. ಕ್ರಿಯೆ ಇಲ್ಲದೆ ಜ್ಞಾನವು ವ್ಯಕ್ತವಾಗಲಾರದು. ಜ್ಞಾನಿಯು ಕ್ರಿಯಾರಹಿತನಾದರೆ ಅದರಿಂದ ಜ್ಞಾನವು ಹೀನವಾಗುವುದು. ಸಮರಸಭಾವವು ಸಾಧಿಸುವುದಿಲ್ಲ. ಅಂತರಂಗ-ಬಹಿರಂಗಗಳಲ್ಲಿ ಏಕರೂಪನಾದ ಪರಮಾತ್ಮನನ್ನು ಜ್ಞಾನ-ಕ್ರಿಯೆಗಳಿಂದ ಒಲಿಸಿಕೊಳ್ಳುವುದೇ ಉತ್ತಮ ಮಾರ್ಗ. ಬರೀ ಜ್ಞಾನದಿಂದ ಏನನ್ನೂ ಸಾಧಿಸಲಿಕ್ಕಾಗುವುದಿಲ್ಲವೆಂಬ ಮಾತನ್ನು ಅಮುಗಿದೇವಯ್ಯ ಈ ವಚನದಲ್ಲಿ ಪ್ರತಿಪಾದಿಸಿದ್ದಾನೆ.

'ಅರಿವನನಲೊಳಗಿಕ್ಕಿ ಅಗಿವುತ್ತಿದೆ ಮರ್ತ್ಯ ಲೋಕವೆಲ್ಲವು
ಅರಿವು ಉಳಿಯಲರಿಯದೆ ಕೆಟ್ಟಿತ್ತು ಲೋಕವೆಲ್ಲವು
ನಾನೆಂತು ಬದುಕುವೆನಣ್ಣಾ
ಕತ್ತಲೆ ಬೆಳಗ ಕಾಬ ಸಂದೇಹಿ ನಾನೊಬ್ಬಳು
ಎನ್ನ ಕಣ್ಣ ಕಟ್ಟಿ ಕನ್ನಡಿಯ ತೋರಿತ್ತೊ
ಅಜಗಣ್ಣಾ ನಿನ್ನ ಯೋಗ'[೧೩]

ಮುಕ್ತಾಯಕ್ಕನ ವೈಯಕ್ತಿಕ ಅಳಲು, ಬದುಕಿನ ಬಗೆ, ಅರಿವು ಅನುಭವವಾಗದ ಸ್ಥಿತಿಯನ್ನು ಕೆಲವು ಸಂಕೇತಗಳ ಮೂಲಕ ನಿರೂಪಿಸಲಾಗಿದೆ. ಅರಿವು ಮನುಷ್ಯನಲ್ಲಿ ಬೌದ್ಧಿಕ ಮಟ್ಟದಲ್ಲಿ ಮಾತ್ರ

ಇದ್ದು, ಅದು ಬದುಕಿಗೆ ಪ್ರಯೋಜನಕಾರಿಯಾಗಿರದಿದ್ದರೆ ಅಂತಹ ಜ್ಞಾನ ಇದ್ದೂ ವ್ಯರ್ಥ. ಜನರಿಗೆ ತಾವು ಯಾರು? ತಮ್ಮ ಬದುಕಿನ ಉದ್ದೇಶವೇನು? ಬದುಕನ್ನು ಹೇಗೆ ರೂಪಿಸಿಕೊಳ್ಳಬೇಕು? ಎಂಬಂತಹ ಅರಿವು ಇದೆ. ಇದು ಗುರುವಿನ ಮೂಲಕವೋ, ವಿದ್ಯೆಯ ಮೂಲಕವೋ ಲಭ್ಯವಾಗಿದೆ. ಆದರೆ ಹೀಗೆ ಬುದ್ಧಿಪೂರ್ವಕವಾಗಿ ಲಭ್ಯವಾದ ಜ್ಞಾನ ಬಾಳಿನಲ್ಲಿ ಶಾಂತಿ ನೆಮ್ಮದಿಯನ್ನು ತರುವಲ್ಲಿ ವಿಫಲವಾಗಿದೆ. ಅರಿವು ತೀರಾ ಸಮೀಪದಲ್ಲಿದ್ದರೂ, ಬದುಕಿಗೆ ಉಪಯುಕ್ತ ರೀತಿಯಲ್ಲಿ ಬಳಕೆಯಾಗುತ್ತಿಲ್ಲ. ಈ ಬೌದ್ಧಿಕ ಅಜ್ಞಾನ ಮುಕ್ತಾಯಕ್ಕನನ್ನೂ ಆವರಿಸಿರುವುದು ಅವಳಿಗೆ ತಿಳಿದಿದೆ. ಅಂದರೆ ಲೋಕಕ್ಕೆ ಅರಿವಿನ ಕೊರತೆ ಇಲ್ಲ. ಇರುವುದನ್ನು ಬಳಸಿಕೊಳ್ಳುವ ಜನರಲ್ಲಿ ಅಜ್ಞಾನ ಆವರಿಸಿದೆ ಅದನ್ನು ಗುರುತಿಸಲಾರದ ಗೊಂದಲದ ಸ್ಥಿತಿ, ಸರಿಯಾದುದನ್ನು ಆಯ್ಕೆ ಮಾಡುವ, ನಿರ್ಧರಿಸುವ ವಿವೇಕವನ್ನು ಮಸುಕುಗೊಳಿಸಿದೆ. ಮುಕ್ತಾಯಕ್ಕನ ಈ ವಿಚಾರಗಳು ಜ್ಞಾನದ ಎತ್ತರ ಅದರ ಸಮೃದ್ಧಿಯನ್ನು ಹೇಳುತ್ತಾ, ಲೌಕಿಕದಲ್ಲಿರುವ ಮಾನವನ ಪರಿಮಿತಿಯನ್ನು, ಅವನ ಸಂದೇಹ ಸ್ಥಿತಿಯನ್ನು ಹೇಳುತ್ತಾ ಜ್ಞಾನ ತೀರ ಸ್ಪರ್ಶ ಸಮೀಪದಲ್ಲಿ ಇದ್ದೂ, ಅದನ್ನು ಕಾಣದ, ಬದುಕಿಗೆ ಅಳವಡಿಸಿಕೊಳ್ಳಲಾರದ ಮನುಷ್ಯನ ಅಸಹಾಯಕ ಸ್ಥಿತಿಯನ್ನು ಈ ವಚನ ನಿರೂಪಿಸುತ್ತದೆ.

'ಆಚಾರ ರಹಿತ ಭಕ್ತರಿಗೆ ಶ್ವಾನವೆಂಬೆ
ಜ್ಞಾನಾವಧಾಂ ಸದಮಲಚರಿತ ಭವಿಗೆ ಶಿವನೆಂಬೆ
ಕ್ರಿಯೆಯಿಲ್ಲದ ಲಿಂಗವ ಶಿಲೆಯೆಂಬೆ
ಅಂತಪ್ಪ ಭಕ್ತರಿಗೆ ಛೀಯೆಂಬೆ'[೧೪]

ಹಡಪದ ಅಪ್ಪಣ್ಣ ಅನುಷ್ಠಾನಗೊಂಡಲ್ಲದೆ ಅಂತಃ ಸತ್ವಗಳು ಹೊರಹೊಮ್ಮುವುದಿಲ್ಲ ಎಂದಿದ್ದಾನೆ. ಜ್ಞಾನಕ್ಕೆ ಸಂಬಂಧಿಸಿದಂತೆ ಆತ್ಮಜ್ಞಾನ, ದೈವಜ್ಞಾನಗಳೆಂಬ ಪರಿಕಲ್ಪನೆಗಳಿವೆ. ಜ್ಞಾನವು ಸಂಸ್ಕಾರ ಬಲದಿಂದ ರೂಪುಗೊಳ್ಳುವಂಥದು. ಈ ಹಿನ್ನೆಲೆಯಲ್ಲಿ ಭಕ್ತ ಭವಿ ನಡುವಿನ ಸಂಬಂಧಗಳನ್ನು ಅರಿಯುವ ಸಾಧನಗಳನ್ನಾಗಿ ಭಕ್ತಿ ಜ್ಞಾನ ಮತ್ತು ಕ್ರಿಯೆ ಇವುಗಳನ್ನು ಪರಿಶೀಲಸಬೇಕಾಗಿದೆ. ಸ್ವಯಂ ಪ್ರಜ್ಞೆಯನ್ನು ಬೆಳೆಸಲು ನೈತಿಕತೆಯ ಬೋಧನೆಗೆ ಈ ವಚನ ಉತ್ತಮ ಉದಾಹರಣೆಯಾಗಿದೆ.

ಆಧ್ಯಾತ್ಮದಲ್ಲಿ ಭಕ್ತಿ ಮುಖ್ಯ. ಶರೀರ ನಿಮಿತ್ತ್ಯ ಮಾತ್ರ. ಇದು ಶರೀರವನ್ನು ಬೇಧಿಸಿ ಬುದ್ಧಿ ಮತ್ತು ಕ್ರಿಯೆಗಳನ್ನು ಒಡೆದು ವರ್ಗಭೇದವನ್ನು ಹುಟ್ಟು ಹಾಕುತ್ತಿದೆ. ಕ್ರಿಯೆ ಮತ್ತು ಅರಿವು ಕಸುಬುದಾರರ ಮೂಲ ಗುಣವಾಗಿರುವುದರಿಂದ ಶರೀರ ಶ್ರಮ ಮತ್ತು ಕೌಶಲ್ಯ ಜ್ಞಾನವನ್ನು ಸಮನ್ವಯಗೊಳಿಸಿ, ಶರೀರವನ್ನು ಉತ್ಪಾದನಾ ಶಕ್ತಿಯನ್ನಾಗಿ ಮಾರ್ಪಡಿಸಿಕೊಂಡಿರುವುದನ್ನು ಕಾಣುತ್ತೇವೆ.

'ಕುರಿ, ಕೋಳಿ ಕಿರುಮೀನು ತಿಂಬುವರ
ಊರೊಳಗೆ ಇರು ಎಂಬರು
ಅಮೃತಾನ್ನವ ಕರೆವ ಗೋವ ತಿಂಬವರ
ಊರಿಂದ ಹೊರಗಿರು ಎಂಬರು
ಆ ತನು ಹರಿಗೋಲಾಯಿತ್ತು

ಬೊಕ್ಕಣ ಸಿದಿಕೆ ಬಾರುಕೋಲು ಪಾದರಕ್ಷೆ
ದೇವರ ಮುಂದೆ ಬಾರಿಸುವುದಕ್ಕೆ ಮದ್ದಳೆಯಾಯಿತು
ಈ ಬದ್ಧಲಿಕೆಯೊಳಗಣ ತುಪ್ಪವ ಶುದ್ಧ ಮಾಡಿ
ತಿಂಬ ಗುಜ್ಜ ಹೊಲೆಯರ ಕಂಡಡೆ
ಉದ್ದನ ಚಮ್ಮಾಳಿಗೆಯ ತೆಕ್ಕೊಂಡು
ಬಾಯ ಕೊಯ್ಯುವೆನು ಎಂದಾತ ನಮ್ಮ ಅಂಬಿಗರ ಚವುಡಯ್ಯ'[೧೫]

ಕುಶಲಕರ್ಮಿ ವರ್ಗಗಳಾದ ಮಾದಿಗರು, ಚಮ್ಮಾರರು ತಾವು ತಿನ್ನುವ ಪ್ರಾಣಿಗಳ ಚರ್ಮದಿಂದ ಸಿದ್ಧಲಿಕೆ, ಸಗ್ಗಳೆ, ಹರಿಗೋಲು, ಬೊಕ್ಕಣ, ಮದ್ದಳೆ, ಪಾದರಕ್ಷೆ, ಬುದ್ಧಲಿಕೆ, ಬಾರುಕೋಲು ಮುಂತಾದ ದಿನನಿತ್ಯ ಬಳಕೆಯ ವಸ್ತುಗಳನ್ನು ತಯಾರಿಸುತ್ತಾರೆ. ಆರ್ಥಿಕತೆಗೆ ಮೂಲವಾದ ಇಂತಹ ವಸ್ತುಗಳನ್ನು ತಯಾರಿಸುವ ಇವರ ಕ್ರಿಯಾಶೀಲತೆಯಾಗಲೀ, ಇವರ ಜ್ಞಾನವಾಗಲೀ ಸಾಮಾಜಿಕ ಸಂರಚನೆಯಲ್ಲಿ ಮಾನ್ಯವಾಗುವುದೇ ಇಲ್ಲ. ಇದರ ಬದಲು ಇವರ ಅಸ್ತಿತ್ವವನ್ನು ನಿಷ್ಕ್ರಿಯಗೊಳಿಸಿ, ಅವರ ಶ್ರಮದ ದುಡಿಮೆಯನ್ನು ಅವಮಾನಗೊಳಿಸುವಂತಹ ವಾತಾವರಣ ಸೃಷ್ಟಿಸಿದ್ದಾರೆ. ಹೊಲೆತನದ ನೆಪದಲ್ಲಿ ಜನಸಮುದಾಯವನ್ನು ದೂರ ಮಾಡುವ ಮೂಲಕ ಅಂತರವನ್ನು ಸೃಷ್ಟಿಸಿದ್ದಾರೆ. ಇದನ್ನು ಬದಲಾಯಿಸಲು ಶರಣರು ಕಸುಬು ಮತ್ತು ಶ್ರಮವನ್ನು ಜ್ಞಾನದ ಮಾಧ್ಯಮವನ್ನಾಗಿ ಪರಿವರ್ತಿಸಿಕೊಂಡಿದ್ದಾರೆ.

ಇಂತಹ ಸಾಮೂಹಿಕ ವಿಘಟನೆಗೆ ಎಡೆಮಾಡಿಕೊಟ್ಟ ಅಕ್ಷರಸ್ಥ ಸಮುದಾಯವನ್ನು ಹೊಡೆದು ಹಾಕಿ, ಸ್ವಾವಲಂಬಿಗಳಾದ ನೀವೇ ಸ್ವಯಂ ಪರಿಪೂರ್ಣರು ಎಂದು ಸಾರಿದರು. ಶರಣರ ಈ ಕರೆ ಎಲ್ಲರಲ್ಲಿ ಆತ್ಮವಿಶ್ವಾಸ ಹುಟ್ಟಿಸಿತು. ಶಿಕ್ಷಣವೆನ್ನುವುದು ವ್ಯಕ್ತಿಮುಖಿಯಾಗಿ ವ್ಯಕ್ತಿತ್ವ ಬೆಳವಣಿಗೆಗೆ ಸಹಾಯಕವಾದರೆ, ಅನುಭವಮಂಟಪದ ಮೂಲಕ ದೊರೆತ ಶಿಕ್ಷಣ ಸಮಾಜಮುಖಿಯಾಗಿ, ಸಾಮಾಜಿಕ ಉನ್ನತಿಗೆ ನೆರವಾಗಿದೆ.

ಇಡೀ ಭಾರತೀಯ ಪರಂಪರೆಯಲ್ಲಿ 'ಪಾವಿತ್ರ್ಯತೆ' ಪ್ರಧಾನವಾದ ಶಿಕ್ಷಣ ನೀಡಿದರೆ, ಅನುಭವ ಮಂಟಪವು ಆತ್ಮಜ್ಞಾನದ ಬಗ್ಗೆ ಬೋಧಿಸಿತು. ಪಾವಿತ್ರ್ಯತೆ ಎನ್ನುವುದು ಹೊರಗಿನ ಡಂಭಾಚಾರವಾಗಿ ಕಂಡುಬಂದುದರಿಂದ ಶರಣರು ಅದನ್ನು ಆಷಾಢಭೂತಿಯೆಂದು ಕರೆದರು.

'ತಿಳಿ ನೀರೆಂಬೆ ತಿಳಿನೀರೆಂಬೆ
ತಿಳಿನೀ ಎಂದು ಒಂದು ದಿನ ಎಂದಿಲ್ಲೆಲೆ ಮಾನವ
ಕ್ಷಣಕ್ಕೆ ಕ್ಷಣಕ್ಕೆ ತಿಳಿ ನೀ ಎಂದಡೆ
ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧಮಲ್ಲಿಕಾರ್ಜುನ'[೧೬]

ಇಲ್ಲಿ 'ತಿಳಿನೀರು' ಮತ್ತು 'ತಿಳಿನೀ' ಎಂಬ ಎರಡು ಪದಗಳಿವೆ. ತಿಳಿ ನೀರು ಪವಿತ್ರವೆಂದರ್ಥ. ಧಾರ್ಮಿಕ ಪಾವಿತ್ರ್ಯತೆಯ ಸಂಕೇತ. ಆದರೆ ಶರಣರಲ್ಲಿ ನಿಜವಾದ ಶಿಕ್ಷಣವೆಂದರೆ ಪಾವಿತ್ರ್ಯತೆ ಅಲ್ಲ. ಜ್ಞಾನ. 'ತಿಳಿ ನೀ' ಎಂಬುದು ನಿನ್ನನ್ನು ನೀ ತಿಳಿ ಎಂದರ್ಥ ಕೊಡುತ್ತದೆ. ತನ್ನ ತಾ ತಿಳಿಯುವುದು

ಆತ್ಮಜ್ಞಾನವನ್ನೇ ಸೂಚಿಸುತ್ತದೆ. ಇಂಥ ಆತ್ಮಜ್ಞಾನಕ್ಕಾಗಿ ಶಿಕ್ಷಣವೆಂದು ಸಾರಿದ್ದಾರೆ. ಪಾವಿತ್ರ್ಯತೆಯಲ್ಲಿ ನಿರತನಾದವನು ತನ್ನ ತಾ ಅರಿಯಲು ಸಮಯವೇ ಇಟ್ಟುಕೊಳ್ಳುವುದಿಲ್ಲ. ಅದು ನೆಲ ಮೂಲದ ಜನರ ಬದುಕಿನ ವಾಸ್ತವತೆಯಿಂದ ದೂರವಾಗಿರುತ್ತದೆ. ವಾಸ್ತವ ಬದುಕನ್ನು ಗ್ರಹಿಸದೇ ಇರುವುದು ಬೋಧಿಸದಿರುವುದು ಬೋಧನೆ ಎನಿಸುವುದಿಲ್ಲ. 'ನೂರನೋದಿ ನೂರ ಕೇಳಿದಡೇನು? ಆಸೆ ಹರಿಯದು; ರೋಷ ಬಿಡದು' ಎನ್ನುವಲ್ಲಿ ವೈದಿಕ ಬದುಕಿನ ಕ್ರಮಗಳ ಖಂಡನೆಯಿದೆ. ಪ್ರಾಚೀನ ಶೈಕ್ಷಣಿಕ ಪಠ್ಯಗಳಾದ ವೇದ ಮೊದಲಾದ ಕೃತಿಗಳ ಓದಿಯೂ ಆಸೆ ಹರಿಯದೇ, ರೋಷ ಬಿಡದಿರುವುದನ್ನು ವಿಡಂಬಿಸುತ್ತಲೇ ಪ್ರಶ್ನಿಸಿದ್ದಾನೆ. ಈ ಮಾತು ಸ್ಥಗಿತ ಓದನ್ನು ಕುರಿತು ವಿವರಣೆ ನೀಡುತ್ತದೆ. ವ್ಯಕ್ತಿಯೊಬ್ಬನಿಗೆ ಸ್ವಂತಕ್ಕೆ ಉಪಯೋಗವಿಲ್ಲದ ಬೋಧನೆಯ ಪ್ರಯೋಜನವೇನೆಂಬುದು ಇಲ್ಲಿ ವಿವರಿಸಲಾಗಿದೆ. ಆತ್ಮಜ್ಞಾನವನ್ನು ಬೋಧಿಸುವ ಮೂಲಕ, ಜನರ ದಿನನಿತ್ಯದ ಬದುಕಿನ ಉಪಯುಕ್ತತೆಯ ನೆಲೆಗೆ ಒಯ್ಯಬೇಕೆಂಬುದು ಅನುಭವ ಮಂಟಪದ ಆಶಯವಾಗಿತ್ತು.

ಶರಣರ ಪರಿಕಲ್ಪನೆಯಲ್ಲಿ ನಡೆ–ನುಡಿಗೆ ಕೇವಲ ನಿಘಂಟಿನ ಅರ್ಥವಿಲ್ಲ. ಅದು ಜ್ಞಾನ–ಕ್ರಿಯೆಗಳ ಸಂಬಂಧ. ನುಡಿಗೆ ಅರ್ಥವಿದೆ. 'ನಡೆ'ಗೆ ದಾರಿಯಿದೆ ಗುರಿಯಿದೆ.

'ನೀರು ನೆಲನಿಲ್ಲದೆ ಇರಬಹುದೆ?
ಬೀಜ ನೆಲೆಯಿಲ್ಲದೆ ಹುಟ್ಟಬಹುದೆ?
ಜ್ಞಾನ ಕ್ರಿಯೆಯಿಲ್ಲದೆ ಅರಿಯಬಹುದೆ?
ಚಿತ್ತ ಚಿತ್ತುವಿಲ್ಲದ ವಸ್ತುವ ಲಕ್ಷಿಸಿ ಗ್ರಹಿಸಬಲ್ಲುದೆ?
ಇಂತಿ ಕ್ರೀ ಜ್ಞಾನ ಸಂಬಂಧ ಸ್ಥಲಭಾವ
ಎನ್ನಯ್ಯ ಪ್ರಿಯ ಇಮ್ಮಡಿ ನಿ:ಕಳಂಕ
ಮಲ್ಲಿಕಾರ್ಜುನನಲ್ಲಿ ಉಭಯಸ್ಥಲಭೇದ'[17]

ಇಲ್ಲಿ ಕ್ರಿಯೆ ನಡೆಯ ಸಂಕೇತವಾದರೆ, ಜ್ಞಾನ ನುಡಿಯ ಸಂಕೇತವಾಗುತ್ತದೆ. ಅಂದರೆ ಅರಿವು–ಆಚರಣೆಗಳ ಸಮನ್ವಯ ಸಂಬಂಧವೇ ಶರಣ ಪರಿಕಲ್ಪನೆಯ 'ನಡೆ–ನುಡಿ' ಆಗಿದೆ. ಇದರಿಂದ ವ್ಯಕ್ತಿ ಜೀವನ ಶ್ರದ್ಧೆಯನ್ನು ಬೆಳೆಸಿಕೊಳ್ಳಬೇಕು. ಇಂತಹ ವಿಚಾರಗಳೇ ಬದುಕಿನ ಸಮತೋಲನವನ್ನು ಕಾಯ್ದುಕೊಳ್ಳುವ ಸಾಧನಗಳು.

ಅರಿವು ಮತ್ತು ಪ್ರಜ್ಞೆ ಶಬ್ದಗಳನ್ನು ಶರಣರು ವೈಶಿಷ್ಟ್ಯಪೂರ್ಣವಾಗಿ ಬಳಸಿದ್ದಾರೆ. ಅರಿವು ಎಂಬುದು ಪರವಸ್ತುವಿನ ತಿಳುವಳಿಕೆ. ಪ್ರಜ್ಞೆ ವಸ್ತುವಿನ ತಿಳುವಳಿಕೆ. ಆದ್ದರಿಂದ ಮೂಲವಸ್ತುವಿನ ಅರಿವಿನೊಂದಿಗೆ ವಸ್ತು ಜಗತ್ತಿನಲ್ಲಿ ಪ್ರಜ್ಞಾಪೂರ್ವಕವಾಗಿ ಬದುಕಿದಾಗ ಅರಿವಿನ ನುಡಿ ಮತ್ತು ಪ್ರಜ್ಞೆಯ ನಡೆಯಲ್ಲಿ ವ್ಯತ್ಯಾಸವಿರುವುದಿಲ್ಲ. 'ಕ್ರಿಯೆಯೇ ಜ್ಞಾನ, ಆ ಜ್ಞಾನವೇ ಕ್ರಿಯೆ. ಜ್ಞಾನವೆಂದೆಡೆ ತಿಳಿಯುವುದು ಕ್ರಿಯೆ ಎಂದರೆ ತಿಳಿಯುವಂತೆ ಮಾಡುವುದು. ಪರಸ್ತ್ರೀಯ ಭೋಗಿಸಬಾರದೆಂಬುದೆ ಜ್ಞಾನ, ಅದರಂತೆ ಆಚರಿಸುವುದೇ ಕ್ರಿಯೆ' ಎಂದು ಚನ್ನಬಸವಣ್ಣ ನಡೆನುಡಿ ಸಿದ್ಧಾಂತವನ್ನು ಕಾಯಕ ಸಮೇತವಾಗಿ ನಮ್ಮೆಲ್ಲ ನಡವಳಿಕೆಗಳು ಅರಿವಿನಿಂದ ಕೂಡಿರಬೇಕೆಂದು ತಿಳಿಸಿದ್ದಾರೆ.

'ಅರಿವು ಅರಿವು ಎನ್ನುತ್ತಿಪ್ಪಿರಿ, ಅರಿವು ಸಾಮಾನ್ಯವೇ?
ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ
ನಿಂದ ಹೆಜ್ಜೆಯನರಿಯಬಾರದು
ಮುಂದ ಹೆಜ್ಜೆಯರಿದಲ್ಲದೆ ಒಂದು ಪಾದ ನೆಲೆಗೊಳ್ಳದು
ನೆಲನ ಬಿಟ್ಟು ಆಕಾಶದಲ್ಲಿ ನಿಂದು ಮಗುಲೊಳಗೆ ಮಿಂಚಿದಲ್ಲದೆ
ತಾನಾಗಬಾರದು-ಗುಹೇಶ್ವರನೆಂಬುದು ಬರಿದೆಬಹುದೆ ಹೇಳಿರೆ?'[೧೮]

ಅರಿವು ತರ್ಕವಲ್ಲ, ನೆನಪಲ್ಲ, ಭಾವನೆಯಲ್ಲ, ಅರಿವಿಗೆ ಕುರುಹುಗಳಿಲ್ಲ. ಆದರೆ ಕುರುಹುಗಳು ಕೇವಲ ಸೂಚಕಗಳಷ್ಟೇ. ಅವೇ ಮುಖ್ಯವಲ್ಲ. ದೇಹ, ಮನಸ್ಸು, ಬುದ್ಧಿಗಳಿಗೆ ಬದ್ಧವಾದ 'ನಾನು'ತನವನ್ನು ಇಲ್ಲವಾಗಿಸಿಕೊಂಡ ಶರಣರು ಪರಂಪರೆ ಮತ್ತು ಪ್ರಸ್ತುತವನ್ನು ಒಪ್ಪಿಕೊಂಡವರು. ಪ್ರಸ್ತುತವನ್ನರಿಯಲು ಪರಂಪರೆಯ ಜ್ಞಾನ ಅವಶ್ಯವೆನ್ನುವುದು ಅಲ್ಲಮನ ವಿಚಾರ. ನಾಳೆ ಎನ್ನುವುದು ಪರಂಪರೆ ಮತ್ತು ಪ್ರಸ್ತುತವನ್ನವಲಂಬಿಸಿದೆ. ಈ ಹಿಂದಣ ಇಂದಣ ಪ್ರಜ್ಞೆಯಿಂದಲೇ ಮುಂದಿನ ಬದುಕಿನ ಹೊಳಹುಗಳನ್ನು ಭಾವಿಸಿಕೊಳ್ಳಲು ಸಾದ್ಯವಾಗುತ್ತದೆ. 'ಮುಂದಣ ಹೆಜ್ಜೆಯರಿದಲ್ಲದೆ ಒಂದು ಪಾದ ನೆಲೆಗೊಳ್ಳದು' ಎಂಬ ಮಾತು ವ್ಯಕ್ತಿ ಕಳೆದ ಬದುಕನ್ನು ಅರಿಯಬೇಕು. ಈ ತಿಳುವಳಿಕೆ ಅವನಲ್ಲಿ ಇಂದಿನ ಬದುಕನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ. ಪರಂಪರೆಯನ್ನು ಮತ್ತು ಭವಿಷ್ಯವನ್ನು ಗ್ರಹಿಸುವ ಶಕ್ತಿ, ಇಂದಿನ ಸಂಕೀರ್ಣ ಬದುಕನ್ನು ಅರ್ಥಪೂರ್ಣವಾಗಿ ಅರಿಯಲು ಸಾಧ್ಯವಾಗುತ್ತದೆ. ಲೋಕಾನುಭವವನ್ನು ಗ್ರಹಿಸಿ ಅರಿವಿನ ಸಹಾಯದಿಂದ ಸ್ವಾನುಭಾವವಾಗಿಸಿಕೊಳ್ಳದ ಹೊರತು ಅನುಭಾವಿಯಾಗಲು ಸಾಧ್ಯವಿಲ್ಲ. ಈ ಅನುಭಾವ ಲೋಕಜ್ಞಾನ ಮತ್ತು ಅರಿವು ಕೂಡಿ ಉಂಟಾದ ಆಂತರಿಕ ಶಕ್ತಿಯಾಗಿದೆ.

'ಪೈರಿಗೆ ನೀರು ಬೇಕೆಂಬಲ್ಲಿ ಉಚಿತವನರಿತು ಬಿಡಬೇಕು
ಕ್ರೀಗೆ ಅರಿವು ಬೇಕೆಂಬಲ್ಲಿ ಉಭಯವನರಿದು ಘಟಿಸಬೇಕು
ಏರಿ ಹಿಡಿವನ್ನಕ್ಕ ನೀರ ಹಿಡಿದಡೆ ಸುಖವಲ್ಲದೆ ಮೀರಿದರುಂಟೆ?
ಕ್ರೀಯ ಬಿಡಲಿಲ್ಲ, ಅರಿವ ಮರೆಯಲಿಲ್ಲ
ಬೆಳೆಯ ಕೊಯಿದ ಮತ್ತೆ, ಹೊಲಕ್ಕೆ ಕಾವಲುಂಟೆ?
ಫಲವ ಹೊತ್ತ ಪೈರಿನಂತೆ, ಪೈರನೊಳಕೊಂಡ ಫಲದಂತೆ
ಅರಿವು ಆಚರಣೆಯಲ್ಲಿ ನಿಂದು
ಆಚರಣೆ ಅರಿವಿನಲ್ಲಿ ಲೇಪನಾದ ಮತ್ತೆ
ಕಾಮಭೀಮ ಜೀವಧನದೊಡೆಯನೆಂಬುದ ಭಾವಿಸಲಿಲ್ಲ'[೧೯]

ಕೃಷಿಯ ಅನುಭವದ ಮೂಲಕ ಅನುಭವಾದ ಎತ್ತರಕ್ಕೆ ಏರುವ ಮಾರ್ಗವನ್ನು ಒಕ್ಕಲಿಗ ಮುದ್ದಣ್ಣ ತಿಳಿಸಿದ್ದಾನೆ. ಕಡಿಮೆ ನೀರು ಬಿಟ್ಟರೆ ಪೈರು ಒಣಗುವುದು. ಹೆಚ್ಚು ನೀರು ಬಿಟ್ಟರೆ

ಎರೆಭೂಮಿ ಸವುಳಾಗಿ ಪೈರು ಕೊಳೆಯುತ್ತದೆ. ಅರಿವಿಲ್ಲದ ಕ್ರಿಯೆಯಿಂದಾಗಿ ಇಂಥ ಸಮಸ್ಯೆಗಳು ಘಟಿಸುತ್ತವೆ. ನಮ್ಮ ಕ್ರಿಯೆಗೆ ಅರಿವು ಬೇಕೆಂದರೆ ಕ್ರಿಯೆ ಮತ್ತು ಅರಿವಿನ ಸಂಬಂಧವನ್ನು ಅರ್ಥೈಸಿಕೊಂಡು ಅವು ಪರಿಪೂರ್ಣವಾಗಿ ಒಂದಾಗುವಂತೆ ಮಾಡಬೇಕು. ಮಡಿಯ ಏರಿಯ ಸಾಮರ್ಥ್ಯದಷ್ಟೇ ನೀರಿನ ಸದುಪಯೋಗ ಮಾಡಿಕೊಂಡರೆ ನೀರಿನ ಕೊರತೆ ಉಂಟಾಗುವುದಿಲ್ಲ. ಮತ್ತು ಪೈರಿಗೂ ತೊಂದರೆಯಾಗುವುದಿಲ್ಲ. ಕರ್ತವ್ಯವನ್ನು ಅರಿವಿನೊಂದಿಗೆ ಪಾಲನೆ ಮಾಡುವುದರಿಂದ ಯಾವುದೇ ರೀತಿಯ ಹಾನಿ ಸಂಭವಿಸುವುದಿಲ್ಲ. ಹಿಂದಿನ ಕಾಲದಲ್ಲಿ ರೈತರು ಅತಿ ಆಸೆಯಿಂದ ಸಂಗ್ರಹ ಮಾಡುತ್ತಿರಲಿಲ್ಲ. ಕಂಬಾರ, ಕುಂಬಾರ, ಹಡಪದ, ಮಡಿವಾಳ, ಬಡಿಗ ಮುಂತಾದ ಆಯಗಾರರ ಕುಟುಂಬಗಳಿಗೂ ಆಹಾರಧಾನ್ಯ ಪೂರೈಸುತ್ತ, ಇದ್ದುದರಲ್ಲೇ ಸಂತೃಪ್ತಿಯಿಂದ ಬದುಕುವವರಾಗಿದ್ದರು. ಬೆಳೆ ಕೊಯ್ದ ಮೇಲೆ ಹೊಲ ಕಾಯಬೇಕಿಲ್ಲ. ಆದರೆ ಬೆಳೆ ಕೊಯ್ಯುವವರೆಗೆ ಕ್ರಿಯೆ ಮತ್ತು ಅರಿವು ಒಂದಾಗಿರಬೇಕು. ಅರಿವು ಆಚರಣೆಯಲ್ಲಿ ಇರಬೇಕು. ಆಚರಣೆ ಅರಿವಿಗೆ ಅಂಟಿಕೊಂಡಿರಬೇಕು ಎಂಬುದು ಇಲ್ಲಿನ ಆಶಯ.

'ಕನಿಷ್ಠದಲ್ಲಿ ಹುಟ್ಟಿದೆ ಉತ್ತಮದಲ್ಲಿ ಬೆಳೆದೆ
ಸತ್ಯಶರಣರ ಪಾದವಿಡಿದೆ
ಆ ಶರಣರ ಪಾದವಿಡಿದು ಗುರುವ ಕಂಡೆ, ಲಿಂಗವ ಕಂಡೆ
ಜಂಗಮ ಕಂಡೆ, ಪಾದೋದಕವ ಕಂಡೆ, ಪ್ರಸಾದವ ಕಂಡೆ
ಇಂತಿವರ ಕಂಡೆನ್ನ ಕಂಗಳ ಮುಂದಣ ಕತ್ತಲೆ ಹರಿಯಿತು
ಕಂಗಳ ಮುಂದಣ ಕತ್ತಲೆ ಹರಿಯಲೊಡನೆ
ಮಂಗಳದ ಮಹಾಬೆಳಗಿನೊಳಗೋಲಾಡಿ ಸುಖಿಯಾದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ'[೨೦]

ವ್ಯಕ್ತಿತ್ವ ವಿಕಸನಕ್ಕೆ ಸಂಬಂಧಿಸಿದ ಈ ವಚನ, ಬೇಧಭಾವವಿಲ್ಲದ ಸಮಾಜದಲ್ಲಿ ಸಜ್ಜನರ ಸಹವಾಸದಿಂದ ವ್ಯಕ್ತಿ ಮನಸ್ಸು ಒಳ್ಳೆಯ ಯೋಚನೆಯಲ್ಲಿ ಸಾಗುವಂತೆ ಮಾಡಿರುವುದನ್ನು ಕಾಣುತ್ತೇವೆ. ಮಗು ಹುಟ್ಟಿದಾಗ ಮುಗ್ಧವಾಗಿರುತ್ತದೆ. ಬೆಳೆದಂತೆಲ್ಲ ಹೊಸ ಹೊಸ ಅನುಭವಗಳ ಮೂಲಕ ಜ್ಞಾನ ಸಂಪಾದನೆ ಮಾಡಿಕೊಳ್ಳುತ್ತದೆ. ಆದರೆ ತನ್ನ ಮುಗ್ಧತೆಯನ್ನು ಕಳೆದುಕೊಳ್ಳುತ್ತಾ ಹೋಗುತ್ತದೆ. ಆದರೆ ಜ್ಞಾನದೊಂದಿಗೆ ಮುಗ್ಧತೆಯನ್ನು ಉಳಿಸಿಕೊಳ್ಳುವ ಕ್ರಮ ಇಲ್ಲಿದೆ. ಮಾನವನ ಪ್ರಜ್ಞಾಪೂರ್ಣವಾದ ಜ್ಞಾನ ಸೃಷ್ಟಿಗೆ ಧರ್ಮ, ಸಂಸ್ಕೃತಿ, ಶಿಕ್ಷಣ ಸಹಾಯಕವಾಗುತ್ತವೆ. ಶರಣರು ಇಂತಹ ಪ್ರಜ್ಞಾಪೂರ್ಣ ಮುಗ್ಧತೆ ಹೊಂದಿದ್ದರು. ಬದುಕಿನ ಕಷ್ಟಗಳು, ಒತ್ತಡಗಳು ಮತ್ತು ಸವಾಲುಗಳನ್ನು ಎದುರಿಸಿ ಆ ಅನುಭವವನ್ನು ಪ್ರಜ್ಞೆಯ ವಿಸ್ತಾರಕ್ಕೆ ಬಳಸಿಕೊಳ್ಳಬೇಕು. ಇಂತಹ ತಿಳುವಳಿಕೆಯಿಂದ ವ್ಯಕ್ತಿತ್ವ ವಿಕಸನಗೊಳ್ಳುತ್ತಾ ಅಜ್ಞಾನವೆಂಬ ಕತ್ತಲೆ ಕರಗಿ ಹೋಗುತ್ತದೆ. ಈ ಬದಲಾವಣೆ ವ್ಯಕ್ತಿಯ ಒಳಗಿನಿಂದಲೇ ಆಗಬೇಕು.

ಮನುಷ್ಯನ ವ್ಯಕ್ತಿತ್ವದಲ್ಲೇ ರೂಪಗೊಳ್ಳಬೇಕಾದ ವ್ಯಕ್ತಿಯ ಗುಣಾತ್ಮಕ ಅಂಶಗಳ ಬೆಳವಣಿಗೆಗೆ ಮನಸ್ಸು ಕ್ರಿಯೆಗಳ ಪ್ರಾಮಾಣಿಕತೆ ಅಗತ್ಯವಾಗಿದೆ. ಅದು ಅಂತರಂಗ ಮತ್ತು ಬಹಿರಂಗದ ಸಮನ್ವಯವನ್ನು ಹಾಗೂ ವ್ಯಕ್ತಿಯ ವ್ಯಕ್ತಿತ್ವದ ಅಂತರಂಗದ ಬೆಳವಣಿಗೆ, ಶುದ್ಧತೆಯನ್ನು ವಿವರಿಸುವಂಥದ್ದಾಗಿದೆ.

'ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?
ತನುವಿನೊಳಗೆ ಹುಸಿ ತುಂಬಿ ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲಾ
ಕೂಡಲಸಂಗಮದೇವಾ'[೨೧]

ಈ ವಚನ ಸಂಪೂರ್ಣವಾಗಿ ವ್ಯಕ್ತಿಯ ಅಂತರಂಗದ ಶೋಧನೆ ಬಗ್ಗೆ ಹೇಳುತ್ತದೆ. ಸಂಶಯ ಹಾಗೂ ಶೋಧನೆಯ ಧಾಟಿಯಲ್ಲಿ ಸಾಗುವ ಈ ವಚನ ಹಾಳು ಬಿದ್ದ ಮನೆಯ ಹೋಲಿಕೆ ಮತ್ತು ವ್ಯಕ್ತಿತ್ವವನ್ನು ರೂಪಿಸಿಕೊಳ್ಳದ ಮನುಷ್ಯನಿಗೂ ಸಾಮ್ಯತೆಯನ್ನು ಕೊಡುತ್ತದೆ. ದೇಹ ಮತ್ತು ವ್ಯಕ್ತಿತ್ವವನ್ನು ರೂಪಿಸಿಕೊಳ್ಳದ ಮನುಷ್ಯನಿಗೂ ಹೋಲಿಕೆ ಕೊಡುತ್ತದೆ. ದೇಹ ಮತ್ತು ಮನಸ್ಸನ್ನು ಆವರಿಸಿರುವ ಹುಸಿ ಹಾಗೂ ವಿಷಯಗಳು ವ್ಯಕ್ತಿತ್ವದ ಹಾಳು ಬಿದ್ದ ಸ್ಥಿತಿಯನ್ನು ವಿವರಿಸುತ್ತವೆ. ತನ್ನ ಅಸ್ತಿತ್ವದ ನಿಖರ ಸ್ವರೂಪಗಳು ತನ್ನಿಂದಲೇ ರೂಪುಗೊಳ್ಳಬೇಕು.

ವಚನಗಳು ಮನುಷ್ಯನ ಅಸ್ತಿತ್ವ ಹಾಗೂ ಅವನ ಕ್ರಿಯೆಗಳ ಮಧ್ಯದ ಕಂದರವನ್ನು ಕೆಲವೊಂದು ಕಡೆ ಹೇಳುತ್ತವೆ. ಮನುಷ್ಯನ ವ್ಯಕ್ತಿತ್ವಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗಿದೆ. ಕ್ರಿಯೆ ಮತ್ತು ಮನಸ್ಸಿನ ಸಾಮರಸ್ಯಕ್ಕಾಗಿ ಒತ್ತಾಯ ಮಾಡಲಾಗಿದೆ.

'ಅವಳ ವಚನ ಬೆಲ್ಲದಂತೆ ಹೃದಯದಲ್ಲಿಪ್ಪುದು ನಂಜು ಕಂಡಯ್ಯಾ
ಕಂಗಳಲೊಬ್ಬನ ಕರೆವಳು ಮನದಲ್ಲೊಬ್ಬನ ನೆರೆವಳು
ಕೂಡಲಸಂಗಮದೇವ ಕೇಳಯ್ಯಾ
ಮಾನಿಸಗಳ್ಳೆಯ ನಂಬದಿರಯ್ಯಾ'[೨೨]

ಈ ವಚನ ಲೈಂಗಿಕ ಸಂಬಂಧದ ಕುರಿತು ಹೇಳುತ್ತದೆ. ಈ ಸಂಬಂಧದ ಮುಖ್ಯ ವಸ್ತುಗಳಾದ ಮನಸ್ಸಿನ ಬಯಕೆ ಹಾಗೂ ಕ್ರಿಯೆಯ ಚಟುವಟಿಕೆಗಳು ಒಂದಕ್ಕೊಂದು ಅನಿವಾರ್ಯವಾದ ನಂಟನ್ನು ಬಯಸುವಂಥವು. ಆದರೆ ವಾಸ್ತವವಾಗಿ ಈ ಆತ್ಮೀಯ (ಮನಸ್ಸು-ಕ್ರಿಯೆ) ಸಂಬಂಧ ಇಲ್ಲವಾಗಿರುವ ವಾತಾವರಣವನ್ನು ಈ ವಚನ ಹೇಳುತ್ತವೆ. ಕ್ರಿಯೆ ಮತ್ತು ಮನಸ್ಸು ಅಥವಾ ಅಂತರಂಗ ಮತ್ತು ಬಹಿರಂಗ ಇವೆರಡರಲ್ಲಿ ಇರುವ ಪರಸ್ಪರ ವಿರೋಧವನ್ನು ಸೂಚಿಸುತ್ತಲೇ 'ಮಾನಿಸಗಳ್ಳೆಯ ನಂಬದಿರಯ್ಯಾ' ಎಂದು ಇಂತಹ ವಾತಾವರಣದ ನಿರಾಕರಣೆ ಮಾಡುತ್ತದೆ. ಇದು ಮನುಷ್ಯನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳದ ಬಗೆಯನ್ನು ಸೂಚಿಸುತ್ತದೆ. ಇಂತಹ ಆತ್ಮವಿಮರ್ಶೆಯ ಅಂಶಗಳನ್ನು ವ್ಯಕ್ತಿಯ

ಒಳಗನ್ನು ಅರಿಯಲು ಹಾಗೂ ಅಂತರಂಗ ಮತ್ತು ಬಹಿರಂಗದ ಶುದ್ಧತೆಯ ಮೂಲಕ, ವ್ಯಕ್ತಿತ್ವ ರೂಪುಗೊಳ್ಳುವಿಕೆಗೆ ಕಾರಣವಾಗುತ್ತವೆ ಎನ್ನುವುದು ಇಲ್ಲಿನ ಆಶಯವಾಗಿದೆ.

ಅಲ್ಲಮನ ಪ್ರಕಾರ ವ್ಯಕ್ತಿತ್ವದಲ್ಲಿ ಉಂಟಾಗುವ ಬೆಳವಣಿಗೆಗಳು ಕೇವಲ ಜ್ಞಾನ ಅಥವಾ ಬುದ್ಧಿ ತರ್ಕಕ್ಕಾಗಲೀ ಬದ್ಧವಾದವುಗಳಲ್ಲ. ಜ್ಞಾನ ಹಾಗೂ ಬುದ್ಧಿ ತರ್ಕಗಳು ಪುನಃ ವ್ಯಕ್ತಿಯ ಅಹಂಕಾರಕ್ಕೆ ಕಾರಣವಾಗುತ್ತವೆ. ಪುರೋಹಿತಶಾಹಿಯು ಈ ತರ್ಕಗಳಿಂದಲೇ ಮನುಷ್ಯನ ಶೋಷಣೆಗೆ ಕಾರಣವಾಗಿದೆ. ಅರಿವು ಜ್ಞಾನಗಳು ಕೇವಲ ಬೌದ್ಧಿಕ ತರ್ಕಗಳಿಗೆ ಗುರಿಯಾಗುವುದರ ಬಗ್ಗೆ ಅಲ್ಲಮನಿಗೆ ವಿರೋಧವಿದೆ. ಇವನು ಅರಿವನ್ನು ಎರಡು ನೆಲೆಯಲ್ಲಿ ಗುರುತಿಸಿದ್ದಾನೆ. ಒಂದು ಅರಿವು ಕೇವಲ ಲೌಕಿಕದ ಬುದ್ಧಿಗೆ ಸಂವಾದಿಯಾಗಿರುವುದು. ಇನ್ನೊಂದು ಲೌಕಿಕ ಮಿತಿಗಳನ್ನು ಮೀರಿದ ನೆಲೆಯಲ್ಲಿ ಅರಿವಿನ ಸ್ವರೂಪಗಳನ್ನು ಬೆಳೆಸಿಕೊಳ್ಳುವುದು. 'ಅರಿವರಿದು ಅರಿವು ಬಂಜೆಯಾಯಿತ್ತು ಮರೆ ಮರೆದು ಮರಹು ಬಂಜೆಯಾಗಿತ್ತು. ಗುಹೇಶ್ವರನೆಂಬ ಶಬ್ದ ಸಿನೆ ಬಂಜೆಯಾಯಿತ್ತು' ಎನ್ನುವ ವಚನವೇ ವಿವರಿಸುವಂತೆ ಇವುಗಳು ಆಧ್ಯಾತ್ಮದ ಎತ್ತರಕ್ಕೊಯ್ಯುವಲ್ಲಿ ನಿಷ್ಫಲವೆನಿಸುವುದು.

'ಮನದ ಮರವೆ ತನುವಿನಲ್ಲಿರಲು ಅದೆಂತೋ ಅರಿವು?
ಎರಡು ಬೆಟ್ಟಕ್ಕೆ ಹಿಂದೆ ತಲೆಯೊಡ್ಡಿ ಧರಿಸಿದ ಬಳಿಕ ತಲೆಕಾಲಿಗಿಕ್ಕಿದ
ಬಳ್ಳಿಯೆಂತು ಹರಿವುದೋ, ಗುಹೇಶ್ವರ
ನಿಮ್ಮ ಶರಣರು ಬಾರದ ಭವದಲ್ಲಿ ಬಂದ ಕಾರಣ ಸುಖಿಗಳಾದರಯ್ಯ'[೨೩]

ಭವದ ಲಾಭಗಳಲ್ಲಿ ತನ್ನನ್ನು ಒಡ್ಡುವಂತೆ ಮಾಡುವ ಮರೆವು ಭವದ ನೆಲೆಯಲ್ಲಿಯೇ ಸಿಕ್ಕಿಸುವುದನ್ನು ಕುರಿತು ಈ ವಚನ ಹೇಳುತ್ತಿದೆ. ಇಂತಹ ಮರೆವನ್ನು ಮೀರುವ ಶರಣತ್ವವನ್ನು ಅಲ್ಲಮ ಅಪೇಕ್ಷಿಸುತ್ತಿದ್ದಾನೆ. ಲೌಕಿಕದಲ್ಲಿ ಅರಿವಿನ ಲಕ್ಷಣಗಳು ಕೇವಲ ಮಾತಿನ, ತನ್ನನ್ನು ತಾನು ಬೇರೆಯವರಿಗಿಂತ ಮೇಲು ಎಂಬ ಅಹಂಕಾರಗಳಾಗಿ ಬಿಡುತ್ತವೆ.

'ಅರಿಯದಂತಿರಲೊಲ್ಲದೆ ಅರಿದು ಕುರುಹಾದೆಯಲ್ಲಾ
ಹಿರಿಯರೆಲ್ಲರು ನೆರೆದು
ನಿನ್ನ ಕಟ್ಟಿದರೆ, ಅಯ್ಯ ಉಪಚಾರಕ್ಕೋಸುಗರ?
ಸಾವಿಂಗ ಸಂಗಡವಾದೆಯಲ್ಲ ಗುಹೇಶ್ವರ'[೨೪]

ಮನುಷ್ಯ ಅಮಾನವೀಯ ಸಂಬಂಧಗಳನ್ನು ಬೆಳೆಸಿಕೊಳ್ಳುವ ಸಂದರ್ಭವನ್ನು ವಿವರಿಸುತ್ತಾ, ಲೌಕಿಕದಲ್ಲಿ ಅರಿತವರು, ಅರಿಯದವರ ಮೇಲೆ ಮಾಡುವ ಪ್ರಭುತ್ವವನ್ನು ಕುರಿತು ಹೇಳಲಾಗಿದೆ. ಇಲ್ಲಿ 'ಸಾವು' ಅಥವಾ 'ನಾಶ' ಅಂತಿಮ ಘಟ್ಟ, ಅರಿವಿನ ಇಂಥ ಸ್ವರೂಪ ಲೌಕಿಕದಲ್ಲಿ ಯಾವ ಲಾಭದಾಯಕ ನೆಲೆಗಳಿಗೆ ಕೊಂಡೊಯ್ಯುವುದಿಲ್ಲ. ಆದ್ದರಿಂದ ಲೌಕಿಕದ ಗಡಿಗಳನ್ನು ದಾಟಿ, ತನುವಿನ ವ್ಯಾಮೋಹ ಮೀರಿದ ನೆಲೆಗಳಲ್ಲಿ ಅರಿವು ಸಫಲತೆಯನ್ನು ಸಾಧಿಸುತ್ತದೆ. ಲೌಕಿಕದ ಗುಣಗಳು ನಾಶವಾಗದ ಹೊರತು, ಜ್ಞಾನದ ಅಹಂಕಾರ ನಿವಾರಣೆಯಾಗುವುದಿಲ್ಲ. ಆದ್ದರಿಂದ ಆಚರಣೆಗೆ

ಮಾತ್ರ ಒಳಗಾಗಿ ಬಿಡುವ ಎಲ್ಲಾ ಧಾರ್ಮಿಕ ಕ್ರಿಯೆಗಳನ್ನು ನಿರಾಕರಿಸಿ, ಲೌಕಿಕ ಮಿತಿಯನ್ನು ದಾಟುವ ನೆಲೆಯಲ್ಲಿ ಅರಿವಿನ ಸ್ವರೂಪವನ್ನು ಬೆಳೆಸಿಕೊಳ್ಳಬೇಕಾಗಿದೆ.

'ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯಾ
ತ್ರೇತ್ರಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯಾ
ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದನಯ್ಯಾ
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯಾ
ಗುಹೇಶ್ವರಾ ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆನು'[೨೫]

ಅಲ್ಲಮನ ವಚನದಲ್ಲಿ ಯುಗಕಲ್ಪನೆ, ಗುರು ಶಿಷ್ಯ ಸಂಬಂಧ, ವಿದ್ಯೆ ಕಲಿಸುವ ರೀತಿ ಮತ್ತು ಕಾಲದ ಕಟ್ಟಳೆ ಅಂಶಗಳು ಇಲ್ಲಿವೆ. ಅದರಲ್ಲಿ ಶಿಷ್ಯನ ಆತ್ಮವಿಕಾಸದ ಸಮಗ್ರ ಚಿತ್ರಣವಿದೆ. ಇಲ್ಲಿ ವಿದ್ಯೆ ಎಂದರೆ ಆತ್ಮವಿದ್ಯೆಯೇ ಹೊರತು ಲೌಕಿಕ ವಿದ್ಯೆಯಲ್ಲ. ಬಡಿದು, ಬೈದು, ಝುಂಕಿಸಿ ಮತ್ತು ವಂದಿಸಿ ಕಲಿಸುವುದರ ಸಂಕೇತ ಶಿಕ್ಷೆ ಕಡಿಮೆಯಾಗಿ ಆತ್ಮೋನ್ನತಿ ಸಾಧಿಸಿದ್ದರ ಸೂಚಕವಾಗುತ್ತದೆ. ಗುರು ನೀಡುವ ಶಿಕ್ಷೆ ಮತ್ತು ಯುಗಾಂತರದಲ್ಲಾದ ಬದಲಾವಣೆ ಶಿಷ್ಯನನ್ನು ಪೂರ್ಣಾವಸ್ಥೆಗೆ ಮುಟ್ಟಿಸುವ ಮೆಟ್ಟಿಲುಗಳು. ಗುರುವೇ ಶಿಷ್ಯನ ಅರಿವಿನಲ್ಲಿ ಅಂತರ್ಗತವಾಗುತ್ತಾನೆ. ಇಲ್ಲಿ ಗುರುವು ಸ್ಥಾಯಿಯಲ್ಲ. ಗುರು ಶಿಷ್ಯರು ಚಲನಶೀಲರಾಗಿ ಆತ್ಮೋನ್ನತಿಯನ್ನು ಸಾಧಿಸುವರು. ಯುಗ ಕಿಂಚಿತ್ತಾಗುವ, ಶಿಷ್ಯ ಗುರುವಾಗುವ, ಮರೆವು ಅರಿವಾಗುವ, ಶಿಕ್ಷೆ ಅನುಗ್ರಹವಾಗುವ ಅನಂತರ ಇವೆರಡುಗಳನ್ನು ಮೀರಿ ತಾನೇ ತಾನಾಗುವ ಸಾಧಕನ ಸಿದ್ಧಿ ಅರಿವಿನ ಅತ್ಯುನ್ನತ ಸ್ಥಿತಿಯಾಗಿದೆ.

ಆಧುನಿಕ ಸಂದರ್ಭದಲ್ಲಿ ಈ ವಚನವನ್ನು ಇನ್ನೊಂದು ಅರ್ಥದಲ್ಲಿ ವಿವರಿಸಬಹುದು. ಅರಿವು ಒಂದು ಕೇಂದ್ರ ಬಿಂದು. ಶಿಷ್ಯನ ಸಾಧನೆ ಬದುಕಿನಲ್ಲಿ ಯುಗ, ಗುರು, ವಿದ್ಯೆ ಮತ್ತು ಶಿಕ್ಷೆ ಮತ್ತೆ ಮತ್ತೆ ಬಂದು ಹೋಗುತ್ತವೆ. ಕಾಲಾಂತರದಲ್ಲಿ ಗುರುವಿನ ಸ್ಥಾನ ತಗ್ಗುತ್ತಾ ಬಂದಿದೆ. ಆತ್ಮಸಾಕ್ಷಾತ್ಕಾರಕ್ಕೆ ಕಾರಣವಾದ ವಿದ್ಯೆ ಅಕ್ಷರ ಓದಿಗೆ ಸೀಮಿತವಾಗಿ ಓದಿನ ಅಹಂಕಾರದಿಂದ ಗುರುವಿನ ಅವಶ್ಯಕತೆಯನ್ನು ಇಲ್ಲವಾಗಿಸಿದೆ. ಅರಿವಿಗೆ ದಾರಿ ತೋರುವ ಗುರು ಎಲ್ಲಾ ಕಾಲಕ್ಕೂ ಮುಖ್ಯನಾಗುತ್ತಾನೆ. ಆದರೆ ಅರಿವಿಗೆ ಸಹಾಯಕವಾಗುವ ವಸ್ತುಗಳನ್ನೇ, ಪಠ್ಯಗಳನ್ನೇ ಅರಿವು ಎಂದು ತಿಳಿಯಬಾರದು. ಇಲ್ಲಿ ಅರಿವಿಗೆ ಸಹಾಯಕವಾಗುವ ವಸ್ತುಗಳಿಂದ ತಮ್ಮನ್ನು ತಾವು ಅರಿತುಕೊಳ್ಳುವುದು ಮುಖ್ಯವಾಗಿದೆ.

ಶರಣರು ದೇಹದಿಂದ ಒದಗಿ ಬರುವ ಎಲ್ಲಾ ಅನಿವಾರ್ಯತೆಗಳನ್ನು ಮಿತಿಗೊಳಿಸಿದರು. ತಮ್ಮ ಅಭಿವ್ಯಕ್ತಿಯಲ್ಲಿ ಹೊರಗಿನ ಎಲ್ಲಾ ಕೃತಕ ವ್ಯವಸ್ಥೆಗಳನ್ನು ಮೀರುವುದರ ಜೊತೆಗೆ ಮನಸ್ಸು

ಪ್ರಜ್ಞೆಗಳಾಚೆಗಿರಬಹುದಾದ ಬಯಲಿನೆಡೆಗೆ ಸಾಗಿದ್ದಾರೆ. ಅದಕ್ಕೆ ಉದಾಹರಣೆಯಾಗಿ ಅಲ್ಲಮನ ವಚನ

> 'ಎನ್ನ ನಾನರಿಯದಂದು ಮುನ್ನ ನೀನೇನಾಗಿದ್ದೆ ಹೇಳಾ
> ಮುನ್ನ ನೀ ಬಾಯಿಮುಚ್ಚಿಕೊಂಡಿದ್ದೆಯೆಂಬುದ ನಾ ನಿನ್ನ ಕಣ್ಣಿಂದ ಕಂಡೆನು
> ಎನ್ನ ನಾನರಿದ ಬಳಿಕ ಇನ್ನು ನೀ ಬಾಯ್ದೆರೆದು ಮಾತನಾಡಿದರೆ
> ಅದೆನ್ನ ಕಣ್ಣಿಂದ ಕಂಡು ನಾಚಿದೆ ನೋಡಾ, ಎನ್ನ ಕಾಬ ನಿನಗೆ
> ನಿನ್ನ ಕಾಬ ನನಗೆ ಸಂಚದ ನೋಟ ಒಂದೇ ನೋಡಾ ಗುಹೇಶ್ವರಾ
> ನಿನ್ನ ಬೆಳಗಿನ ಬಿನ್ನಾಣವರಿದೆ ನೋಡಾ'[೨೬]

ನಾನು-ನೀನು ಎನ್ನುವ ದ್ವೈತಭಾವವು ಹುಟ್ಟುವುದಕ್ಕೂ ಮೊದಲಿದ್ದ ಮೌನವನ್ನು ಮತ್ತೆ ಆವಾಹಿಸಿಕೊಂಡು ನೋಡುತ್ತಾನೆ. ಶೂನ್ಯದ ಸ್ಥಿತಿಗೆ ಕಾಲದ ಪರಿಮಾಣಗಳಿರುವುದಿಲ್ಲ. ನಾನೆಂಬುದೇ ಇಲ್ಲದಿರುವಾಗ 'ನೀನು' ಎಂಬುವುದಕ್ಕೆ ಅರ್ಥವೇ ಇಲ್ಲ. ಅಂತಹ ಮೌನದೊಳಗೆ ಪ್ರಜ್ಞೆ ಉದಯಿಸಿತು. ಇನ್ನೊಂದು ವಚನದಲ್ಲಿ 'ನುಡಿಗೆಟ್ಟ ನುಡಿಯ ನುಡಿವುದಯ್ಯ' ಎನ್ನುತ್ತಾನೆ. ನುಡಿಗೆಟ್ಟ ನುಡಿ ಎಂದರೆ ಮೌನವೇ ಆಗಿದೆ. ಆ ಪ್ರಜ್ಞೆ ತನ್ನನ್ನು ನೋಡಿಕೊಳ್ಳುವುದನ್ನು ಕಲಿಯಿತು. ನನ್ನ ಕಣ್ಣಿಂದ ಪರವನ್ನು ಕಾಣುವ ಹಾಗೂ ಪರದ ಕಣ್ಣಿಂದ ತನ್ನನ್ನು ಕಾಣುವ ಕಲ್ಪನೆಯೇ ವಿಭಜಿತವಾಗಿ ನೋಡುವ ಕ್ರಮವನ್ನು ಸೂಚಿಸುತ್ತದೆ. ಇಂಥ ದ್ವಂದ್ವ ಭಾವದಿಂದ ಅರಿವನ್ನು ಕಾಣಲು ಹೋಗಿ ಕಾಣಲಾರದೇ ಲಜ್ಜೆಗೊಳಗಾದ ಭಾವನೆ ಇಲ್ಲಿದೆ. ನಾನು-ನೀನು ಬೇರೆಯಲ್ಲದ ಕಾರಣ ನನ್ನನ್ನು ನಾನು ಅರಿಯುವುದೇ ನಿನ್ನನ್ನು ಅರಿಯುವುದೇ ಆಗಿದೆ. ನೋಟದ ರಹಸ್ಯ ಬಯಲಾಗುವುದೇ ಅರಿವು. 'ಬಯಲು ಬಯಲಾಗಿ ಬಯಲಾಯಿತ್ತಯ್ಯ' ಎಂಬಲ್ಲಿ ಒಳ-ಹೊರಗುಗಳೆಂಬ ಭೇದವಳಿದು ಬಯಲಾದ ಭಾವ ಗೋಚರಿಸುತ್ತದೆ. ನಾನು ಬಯಲಾದಾಗ ಸತ್ಯವೂ ಬಯಲಾಗುತ್ತದೆ. ಅಂಥ ಬಯಲು ಭಾವವೇ ತಾನಾಗುವ ಮತ್ತು ನಾನು-ನೀನೆಂಬುದನ್ನು ಮೀರಿದ ಅಪಾರ ವಿಸ್ತಾರವಾದ ಪ್ರಜ್ಞೆಯೇ ಬಯಲೆಂದಿದ್ದಾನೆ. ಇಂತಹ ಅರಿವನ್ನು ಕೇವಲ ಗ್ರಹಿಸದೇ ಅದನ್ನು ಅನುಭವವಾಗಿ ಪಡೆಯಬೇಕೆಂಬದು ಎಲ್ಲಾ ದಾರ್ಶನಿಕರ ಹಂಬಲವಾಗಿದೆ.

ಅರಿವಿನ ಅಮೂರ್ತ ಸ್ವರೂಪವನ್ನು ಹೇಳುತ್ತಲೇ ಅದು ನಮ್ಮೊಳಗೇ ಅಭೇದವಾಗಿ ಬೆರತಿರುವ ರೀತಿಯನ್ನು ಈ ವಚನದ ಮೂಲಕ ಹೇಳುತ್ತಾನೆ.

> 'ತನ್ನಲ್ಲಿ ತಾನೆಯಾಯಿತ್ತು ಭಿನ್ನವಿಲ್ಲದೆ ನಿಂದ ನಿರಾಳ
> ಅನಾಯಾಸದನುವ ಕಂಡು ಆನು ಬೆರಗಾದೆನು
> ಅಂತು ಇಂತು ಎನಲಿಲ್ಲ ಚಿಂತೆಯಿಲ್ಲದ ಮಹಾಘನವು
> ಗುಹೇಶ್ವರ ಲಿಂಗವ ಹೊರಗರಸಲಿಲ್ಲಯ್ಯ'[೨೭]

ಭಿನ್ನತೆಯ ಘರ್ಷಣೆಯಿಲ್ಲದ ಆ ನಿರಾಳವನ್ನು, ಅದರ ಆನಂದವನ್ನು ಹೊರಗೆ ಹುಡುಕದೇ ತನ್ನೊಳಗೆ ಕಂಡುಕೊಳ್ಳುವುದಾಗಿದೆ. ಇಂತಹ ಭೇದವಳಿಯಬೇಕಾದರೆ 'ಕರ್ಪೂರದ ಗಿರಿಯ ಉರಿಹಿಡಿದಡೆ

ಇದ್ದಿಲುಂಟೆ' ಎನ್ನುವ ಹಾಗೆ ಕರಗುವ ಮೂಲಕ ಮತ್ತೆ ತಾನಾಗುವುದಾಗಿದೆ. 'ನಾನು' ಎಂಬುದು ಎಚ್ಚೆತ್ತಾಗಲೇ ಅದನ್ನು ಕಳೆದುಕೊಂಡು, ಅನಂತದೊಳಗೆ ಒಂದಾಗಿ ಬಿಡಬೇಕೆಂದು ಬಯಸುವುದೇ ಒಂದು ವಿಶೇಷ. ಕುರುಹುಗಳಿಲ್ಲದ ಇಂತಹ ಕರಗುವಿಕೆಯಲ್ಲಿ ಅರಿವಿನ ದ್ವಂದ್ವ ರಹಿತ ಸ್ವರೂಪ ಕಾಣಿಸುತ್ತದೆ. ಇದು ಬಯಲು ಭಾವನೆಯಾಗಿದೆ.

'ಅಕ್ಕ ಕೇಳವ್ವ ನಾನೊಂದು ಕನಸ ಕಂಡೆ
ಅಕ್ಕಿಯಡಕೆ ತೆಂಗಿನಕಾಯಿಕಂಡೆ
ಚಿಕ್ಕ-ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಬಂದುದ ಕಂಡೆನವ್ವಾ
ಮಿಕ್ಕು ಮೀರಿ ಮೋಹನ ಬೆಂಬತ್ತಿ ಕೈ ವಿಡಿದೆನು
ಚೆನ್ನಮಲ್ಲಿಕಾರ್ಜುನನ ಕಂಡ ಕಣ್ತೆರೆದನು'[೨೮]

ಎಚ್ಚರದಲ್ಲಿದ್ದಾಗ ಕಂಡು ಬಯಸಿದ್ದವನನ್ನು ಕನಸಿನಲ್ಲಿ ಅವನನ್ನು ಮುಟ್ಟುವ ಹಂಬಲದಿಂದ ಕೈಹಿಡಿಯುವ ಕ್ರಿಯೆ, ಅನುಭಾವವನ್ನು ಮುಟ್ಟುವ ಹಂಬಲವುಳ್ಳದ್ದಾಗಿದೆ. ಆತನನ್ನು ಕಂಡು ಕಣ್ತೆರೆಯುವುದು ಅರಿವಿನ ಸೂಚನೆಯೂ ಹೌದು. ಕಣ್ತೆರೆಯುವುದು ಅರಿವನ್ನು ಕಾಣುವ ಕ್ರಮವೂ ಆಗಿದೆ. ಇದು ಅರಿವು ಅನುಭವವಾಗುವ ರೀತಿಯಾಗಿದೆ. ಕಣ್ತೆರೆದು ಎಚ್ಚರಗೊಳ್ಳುವುದೆಂದರೆ ಅರಿವಿನ ಜಾಗೃತ ಸ್ಥಿತಿಯಾಗಿದೆ. ಇಲ್ಲಿ ಮೋಹ, ದಾಹಗಳ ಜೊತೆ ತಿಳಿವಿನ ಎಚ್ಚರವೂ ಜೊತೆಯಾಗಿದೆ. ಅರಿವನ್ನು ಮುಟ್ಟುವ ಕ್ಷಣಕ್ಕಾಗಿ ಕಾತರಗೊಳ್ಳುವ ಹಂಬಲವಿಲ್ಲಿದೆ.

'ಜ್ಞಾನದ ಬಲದಿಂದ ಅಜ್ಞಾನದ ಕೇಡನೋಡಯ್ಯಾ
ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯಾ
ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯಾ
ಪುರುಷದ ಬಲದಿಂದ ಅವಲೋಹದ ಕೇಡ ನೋಡಯ್ಯಾ
ಕೂಡಲ ಸಂಗನ ಶರಣರ ಅನುಭಾವದಿಂದ ಎನ್ನಮನದ
ಕೇಡ ನೋಡಯ್ಯಾ'[೨೯]

ಅಂತರಂಗದ ಶೋಧನೆಯಲ್ಲಿ ಅರಿವಿಗೆ ಎರವಾಗುವ ಅವಗುಣಗಳನ್ನು ಗುರುತಿಸಿ, ದ್ವಂದ್ವ, ವೈರುಧ್ಯಗಳ ಮೂಲಕವೇ ನಿಜವನ್ನು ಕಂಡುಕೊಳ್ಳಬೇಕಾಗಿದೆ. ಜ್ಞಾನದ ಬಲದಿಂದ ಅಜ್ಞಾನವನ್ನು, ಸತ್ಯದ ಬಲದಿಂದ ಅಸತ್ಯವನ್ನು, ಶರಣರ ಅನುಭಾವದ ಬಲದಿಂದ ತನ್ನ ಮನದ ಕೇಡನ್ನು ಕಳೆಯುವ ಚೈತನ್ಯದ ಬಲ ಎಷ್ಟು ಎಂಬುದು ಅರಿವಾಗುತ್ತದೆ. ಕೇಡು ಯಾವುದು? ಮಿತಿಯಾವುದು? ಎಂಬುದನ್ನು ಅರಿವುದೇ ಅನುಭಾವ. ಕೇಡುಗಳೇ ಇಲ್ಲದೆ ದಿವ್ಯತೆಯನ್ನು ಕಾಣಲಾಗುವುದಿಲ್ಲ. ಕೇಡುಗಳೇ ಇಲ್ಲದ ಅರಿವಿನ ಭಾವ ಸಾಧ್ಯವಾದಾಗ, ತೊಡಕುಗಳು ತಾವೇ ತೊಲಗಿ ಹೋಗುತ್ತವೆ.

'ಅಂಬಿನ ಹಿಳಿಕಿನಲ್ಲಿ ಕಟ್ಟಿದ ವಿಹಂಗನ ಗರಿಯಂತೆ
ತಾಗುವ ಮೊನೆಗಾಧಾರವಾಗಿ

ದೂರ ಎಯಿದುವುದಕ್ಕೆ ಸಾಗಿಸುವ ಗುಣ ತಾನಾಗಿ
ಕ್ರೀ ಅರಿವಿನ ಭೇದದ ನೆರಿಗೆಯ ಕಾಬನ್ನಕ್ಕ
ಅರಿವು ಕುರುಹು ಎರಡೂ ಬೇಕೆಂದನಂಬಿಗ ಚೌಡಯ್ಯ'[೩೦]

ಜ್ಞಾನ ಮತ್ತು ಕ್ರಿಯೆಗಳಿಗೆ ಇರುವ ಸಂಬಂಧವನ್ನು ಈ ವಚನ ವಿವರಿಸುತ್ತದೆ. ಕ್ರಿಯೆ ಎಂಬುದು ಬಾಣ, ಅರಿವು ಬಾಣದ ಹಿಳಿಕಿನಲ್ಲಿರುವ ಗರಿ. ಗರಿಯನ್ನು ಕಾಣಲು ಬಾಣದ ಅವಶ್ಯಕತೆ ಇದೆ. ಅರಿವು ಮತ್ತು ಕ್ರಿಯೆಯ ವ್ಯತ್ಯಾಸ ಸಂಬಂಧವನ್ನು ಅರಿಯುವವರೆಗೆ ಅರಿವು, ಕುರುಹು ಎಲ್ಲವೂ ಬೇಕು. ಆಧುನಿಕ ಜಗತ್ತಿನಲ್ಲಿ ಜ್ಞಾನ ಕೇವಲ ಅರಿಯುವವರೆಗೆ ಅರಿವು, ಕುರುಹು ಎಲ್ಲವೂ ಬೇಕು. ಆಧುನಿಕ ಜಗತ್ತಿನಲ್ಲಿ ಜ್ಞಾನ ಕೇವಲ ಶಿಸ್ತಾಗುತ್ತಿದೆ. ಮೂಲ ಮೌಲ್ಯಗಳೊಂದಿಗೆ ಅನುಸಂಧಾನಗೊಳ್ಳುತ್ತಿಲ್ಲ. ತಂತ್ರಜ್ಞಾನದ ಆವಿಷ್ಕಾರ ಮತ್ತು ವೈವಿಧ್ಯತೆಯನ್ನು ಬದಲಾವಣೆ, ಉನ್ನತಿ ಎನ್ನುವುದಾದರೆ ಇಲ್ಲಿ ಮೌಲ್ಯದ ಹುಡುಕಾಟ ಹೆಚ್ಚು ಅರ್ಥ ಪಡೆದುಕೊಳ್ಳುತ್ತದೆ. ಏಕೆಂದರೆ ಆಧುನಿಕ ಶಿಕ್ಷಣ ವ್ಯವಹಾರಿಕ ಜ್ಞಾನದ ಮಟ್ಟದಲ್ಲಿ ಭೌತಿಕ ಪ್ರಗತಿ ಕಂಡಿದೆ. ಆದರೆ ಸಾಂಸ್ಕೃತಿಕ ಲೋಕದೊಂದಿಗಿನ ಸಂಬಂಧವನ್ನು ಆಂತರಿಕವಾಗಿ ಕಳೆದುಕೊಳ್ಳುತ್ತಿದೆ. ಆಧುನಿಕ ಪೂರ್ವ ಕಾಲದಲ್ಲಿ ಇಂತಹ ಕ್ರಿಯಾವ್ಯತ್ಯಾಸಗಳಿಲ್ಲದೆ ಜ್ಞಾನ ಮತ್ತು ಕ್ರಿಯೆಗಳು ಒಟ್ಟಿಗೆ ಸಾಗುತ್ತಿದ್ದವು ಎಂಬುದಕ್ಕೆ ಈ ವಚನ ನಿದರ್ಶನವಾಗಿದೆ.

'ಓದಿ ಬೋಧಿಸಿ ಇದಿರಿಗೆ ಹೇಳುವನ್ನಬರ ಚದುರತೆಯಲ್ಲವೆ
ತಾ ತನ್ನನರಿದಲ್ಲಿ
ಆ ಅರಿಕೆ ಇದಿರಿಗೆ ತೋರಿದಲ್ಲಿ
ಅದೆ ದೇವತ್ವವೆಂದನಂಬಿಗ ಚೌಡಯ್ಯ'[೩೧]

ಕೆಲವರಿಗೆ ಜ್ಞಾನದ ಬಲ ಇರುತ್ತದೆ. ಅದನ್ನು ಬಳಸಿಕೊಂಡು ಅರಿಯದವರನ್ನು ಗೆಲ್ಲಬೇಕೆಂದು ಪ್ರಯತ್ನಿಸುತ್ತಲೇ ಇರುತ್ತಾರೆ. ಈ ಚಾತುರ್ಯ ನಮಗೆ ಗೊತ್ತಿರುವುದನ್ನು ಇನ್ನೊಬ್ಬರಿಗೆ ಹೇಳಲು ಉಪಯೋಗವಾಗುತ್ತದೆ. ಆದರೆ ನಮ್ಮನ್ನು ನಾವೇ ಅರಿತುಕೊಳ್ಳಲು ಈ ಚಾತುರ್ಯದ ಉಪಯೋಗವೇ ಇಲ್ಲವೆನಿಸುತ್ತದೆ. ಆಧುನಿಕ ಶಿಕ್ಷಣ ಸಂಸ್ಥೆಗಳು ಇಂತಹ ಚಾತುರ್ಯವನ್ನು ಉಪಯೋಗಿಸಿಕೊಂಡು ದುಡ್ಡು ಮಾಡುವ ಹುನ್ನಾರದಲ್ಲಿವೆ. ಶಿಕ್ಷಣವು ಜ್ಞಾನ ಸಂಪಾದನೆಯ ಜೊತೆಗೆ ಬದುಕಿನ ಆಸರೆಯೂ ಹೌದು. ಜ್ಞಾನ ಮತ್ತು ಬದುಕುಗಳ ಮಧ್ಯೆ ಆಯ್ಕೆ ಪ್ರಶ್ನೆ ಬಂದಾಗ ಎಲ್ಲರೂ ಬದುಕಿನ ಭದ್ರತೆಗೆ ಒತ್ತು ಕೊಡುವುದು ಸಹಜ. ಇವೆಲ್ಲವುಗಳ ನಡುವೆಯೂ ವ್ಯಕ್ತಿ ತನ್ನ ತಿಳುವಳಿಕೆಯಿಂದ ತನ್ನತನವನ್ನು ಕಾಯ್ದುಕೊಳ್ಳುವುದು ಮುಖ್ಯವೆನಿಸುತ್ತದೆ. ದುಡ್ಡು ಮಾಡುವುದು ಒಂದೆಡೆಯಾದರೂ, ನಮ್ಮ ಒಳಗನ್ನು ನಾವು ಅರಿಯುವ ಜ್ಞಾನಕ್ಕೂ ಬೆಲೆ ಕೊಡಬೇಕಾಗಿದೆ.

'ಗಾಣದಲ್ಲಿ ಸಿಲುಕಿದ ಎಳ್ಳು
ನೋಯದೆ ಎಣ್ಣೆಯ ಬಿಡುವುದೆ
ಕಾಯದಲ್ಲಿ ಸಿಲುಕಿದ ಜೀವ

ನೋಯದೆ ಕರಣಂಗಳ ಬಿಡುವನೆ
ಭಾವದಲ್ಲಿ ಸಿಲುಕಿದ ಭ್ರಮೆ
ನೋಯದೆ ವಿಕಾರವ ಬಿಡುವುದೆ
ಇಂತಿವನರಿದಲ್ಲದೆ ಜ್ಞಾನಲೇಪವಿಲ್ಲ
ನಿಃ ಕಳಂಕ ಮಲ್ಲಿಕಾರ್ಜುನಾ'[೨]

ದೇಹವನ್ನು ಕ್ರಿಯಾಮಥನಕ್ಕೊಳಪಡಿಸುವ ಹಾಗೂ ಅಂತರಂಗದ ಶುದ್ಧತೆಯಿಂದ ತನ್ನ ಒಳ-ಹೊರಗನ್ನು ಅರ್ಥೈಸಿಕೊಳ್ಳುವುದಾಗಿದೆ. ನೋಯದೆ ಜ್ಞಾನವಿಲ್ಲ. ಮಥನಕ್ಕೊಳಪಡಿಸುವ ಕ್ರಿಯೆಗಳಿಂದ ಎಳ್ಳಿನೊಳಗಿರುವ ಎಣ್ಣೆ ಗಾಣಕ್ಕೆ ಸಿಕ್ಕಿ ನೋಯದೆ ಎಣ್ಣೆ ಕಾಣಸಿಗುವುದಿಲ್ಲ. ಅದರಂತೆ ಜೀವ ಮತ್ತು ದೇಹ ಬೇರೆ ಎಂದುಕೊಂಡರೆ ಕರಣಗಳ ಮಿತಿ ತಿಳಿಯುವುದಿಲ್ಲ. ಬದುಕಿನ ಕಷ್ಟಗಳನ್ನು ನೋವೆಂದು ಭಾವಿಸಿದರೇ ಖುಷಿಯ ಸುಖ ಅರ್ಥವಾಗುವುದಿಲ್ಲ. ನೋವನ್ನೇ ತಿಳುವಳಿಕೆಯ ಮೂಲ ಎಂಬುದನ್ನು ಮೋಳಿಗೆ ಮಾರಯ್ಯ ಹೇಳುತ್ತಾನೆ.

'ಜ್ಞಾನವಿಲ್ಲದ ಕ್ರಿಯೆ ಮಾಡಿದಲ್ಲಿ ಫಲವೇನಯ್ಯ?
ಆ ಜ್ಞಾನವು ಕ್ರೀಯನು ಸಂಬಂಧಿಸಲು
ಸಂಬಂಧ ಸ್ವಯವಾಯಿತ್ತಯ್ಯ
ಆ ಪ್ರಮಾಣದ ಪ್ರಕಾಶವ ಕಂಡು
ಅರುವನರಿದು ತಿಳಿಯಲು ಸಂಗಯ್ಯನಲ್ಲಿ ಪ್ರಸಾದಿಯಾದೆನಯ್ಯಾ'[೩೩]

ಇಲ್ಲಿ ಜ್ಞಾನವೆಂದರೆ ವಿವೇಕ, ಸ್ವಪ್ರಜ್ಞೆ, ಇದನ್ನು ಪಡೆದುಕೊಳ್ಳಲು ಮಾಡುವ ಪ್ರಯತ್ನವೇ ಕ್ರಿಯೆ. ಜ್ಞಾನ ಮತ್ತು ಕ್ರಿಯೆಗಳು ಒಂದನ್ನೊಂದು ಅವಲಂಬಿಸಿವೆ ಎಂಬುದನ್ನು ನೀಲಮ್ಮ ಸೂಚಿಸಿದ್ದಾರೆ. ವಸ್ತು ಸ್ಥಿತಿಯನ್ನು ಅರಿಯಲು ಜ್ಞಾನ ಮತ್ತು ಕ್ರಿಯೆ ಎರಡನ್ನು ಅಳವಡಿಸಿಕೊಳ್ಳಬೇಕೆಂದು ಸೂಚಿಸುತ್ತಾಳೆ.

ವಚನ ಸಾಹಿತ್ಯವು ಒಬ್ಬೊಬ್ಬರಿಗೆ ಒಂದೊಂದು ವಿಧದಲ್ಲಿ ಅಂಟಿಕೊಂಡಿದ್ದ ಜ್ಞಾನದ ಮದವನ್ನು ಬಿಡಿಸಲು ಸಹಾಯಕವಾಯಿತು. ಅದು ತನ್ನನ್ನು ಮರೆಯಲು ಹೇಳಲಿಲ್ಲ.

'ಓದಿಸುವಣ್ಣಗಳೆನ್ನ ಮಾತನಾಡ ಕಲಿಸಿದಲ್ಲದೆ
ಮರಕ್ಕೆ ಮಾತನಾಡ ಕಲಿಸಲಿಲ್ಲವಯ್ಯ'[೩೪]

ಈ ವಚನದಲ್ಲಿ 'ಓದಿಸುವ' ಎಂಬುದು ಶಿಕ್ಷಣ ಅಥವಾ ಅಕ್ಷರಜ್ಞಾನಕ್ಕೆ ಸಂಬಂಧಿಸಿದ್ದಾಗಿದೆ. ಆದ್ದರಿಂದ ಸಂಸ್ಕೃತನಾಗಬಹುದು. ಒಳ್ಳೆಯ ವಾಗ್ಮಿಯಾಗಬಹುದು. ಅಂದರೆ ಇಂತಹ ಮಾತುಗಳನ್ನು ಯಾರು ಬೇಕಾದರೂ ಕಲಿಸಬಹುದು. ಆದರೆ ಮನದಿಂದ ಮಾತನಾಡುವುದಕ್ಕೆ ದೈವಿ ಪ್ರೇರಣೆಯೇ ಬೇಕು. ಮನದಿಂದ ಮಾತನಾಡುವ ಕ್ರಿಯೆಗೆ ಹೊರಗಿನ ಕ್ರಿಯೆಯೇ ಪ್ರತಿಭಾ ಕ್ರಿಯೆಯಾಗಿದೆ. ಅವು ಬಾಯಿ ನುಡಿಗಳಲ್ಲ ಅಂತರಂಗದ ಆತ್ಮಿಕ ನುಡಿಗಳಾಗಿವೆ.

'ಕ್ರಿಯೆಯೆ ಜ್ಞಾನ ಆ ಜ್ಞಾನವೇ ಕ್ರಿಯೆ
ಜ್ಞಾನವೆಂದರೆ ತಿಳಿಯುವುದು

ಕ್ರಿಯೆಯೆಂದರೆ ತಿಳಿದಂತೆ ಮಾಡುವುದು
ಪರಸ್ತ್ರೀಯ ಭೋಗಿಸಬಾರದೆಂಬುದು ಜ್ಞಾನ
ಅದರಂತೆ ಆಚರಿಸುವುದೇ ಕ್ರಿಯೆ
ಅರಿತು ಆಚರಿಸದಿದ್ದರೆ ಅದೇ ಅಜ್ಞಾನ
ನೋಡಾ ಕೂಡಲ ಸಂಗಮದೇವಾ'[೩೫]

ಶಿಕ್ಷಣ ಕ್ಷೇತ್ರಕ್ಕೆ ಅನ್ವಯಿಸಿ ಹೇಳುವುದಾದರೆ, ಜ್ಞಾನವೆಂದರೆ ವಿಷಯ ಗ್ರಹಿಕೆ. ಇದು ಇಂದಿನ ಮಕ್ಕಳ ಕಲಿಕಾ ಮಟ್ಟವೆಂದು ಗ್ರಹಿಸಲಾಗಿದೆ. ಕ್ರಿಯೆ ಎಂದರೆ ಗ್ರಹಿಸಿದ ವಿಷಯವನ್ನು ಕಾರ್ಯರೂಪಕ್ಕೆ ತರುವುದಾಗಿದೆ. ಇಂದಿನ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಸಾಕಷ್ಟು ಜ್ಞಾನವನ್ನು ಸಂಪಾದಿಸಿದ್ದರೂ ಕೂಡ ಅದನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಯಶಸ್ವಿಗೊಳ್ಳುತ್ತಿಲ್ಲ. ಪಡೆದುಕೊಂಡ ಜ್ಞಾನವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಮುಂದಿನ ಜನಾಂಗಕ್ಕೆ (ವರ್ಗಾಯಿಸುವುದು) ತಲುಪುವಂತೆ ಮಾಡುವುದು ಒಂದು ಕ್ರಿಯೆಯಾಗಿದೆ. ವಿದ್ಯಾರ್ಥಿಗಳ ಜ್ಞಾನವನ್ನು ಕ್ರಿಯೆಯ ಮೂಲಕ ಚಾಲನೆಯಲ್ಲಿ ತರಬೇಕೆಂಬುದು ಈ ವಚನದ ಶೈಕ್ಷಣಿಕ ಉದ್ದೇಶವಾಗಿದೆ.

ಶರಣ ಸಂಸ್ಕೃತಿಯಲ್ಲಿ ಅರಿವು-ಆಚಾರಕ್ಕೆ ಬಹಳ ಮಹತ್ವವಿದೆ. ಅರಿವುಯೆಂದರೆ ಜ್ಞಾನ, ಆಚಾರವೆಂದರೆ ಒಳ್ಳೆಯ ನಡತೆ, ಆಚರಣೆಯೆಂದರೆ ಕ್ರಿಯೆ. ಮನುಷ್ಯ ಒಳ್ಳೆಯ ನಡೆಯುಳ್ಳವನಾಗಿದ್ದು ಅರಿವು ಆಚರಣೆಗಳ ಮೂಲಕ ಬೆಳೆದು ನಿಲ್ಲಬೇಕೆಂಬುದು ಶರಣರ ಆಶಯ. ಅರಿವು ಹೇಗಿರಬೇಕೆಂಬುದರ ಬಗೆಗೆ ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ ಈ ವಚನದಲ್ಲಿ ಹೇಳಿದ್ದಾಳೆ.

'ಎನ್ನನರಿಯಿಸದಿರುವೆ, ಎನ್ನರಿಯಿಸು, ನಿನ್ನನರಿಯಿಸಬೇಡ
ಎನ್ನನರಿಯದ ನಿನ್ನನರಿಯ
ಎನ್ನನರಿಯದವ ನಿನ್ನನರಿಯಸಿದಡೆ
ನೀ ನೆನಗೆ ಗುರುವಲ್ಲ, ನಾ ನಿನಗೆ ಶಿಷ್ಯನಲ್ಲ
ಎನ್ನನರಿಯಿಸಿದಡೆ ನೀ ನನಗೆ ಗುರು, ನಾ ನಿನಗೆ ಶಿಷ್ಯ
ಮಸಣಯ್ಯ ಪ್ರಿಯ ಗಜೇಶ್ವರಾ'[೩೬]

ಇಲ್ಲಿ ನಾನು ನೀನು ಎಂಬುದು ವ್ಯಕ್ತಿ-ಸಮಾಜದ ಸಂಕೇತವಾಗಿ ಬಳಕೆಯಾಗಿದೆ. ವ್ಯಕ್ತಿ ಬೆಳೆಯದೆ ಸಮಾಜ ಸುಧಾರಿಸುವುದಿಲ್ಲ. ಆದ್ದರಿಂದ ವ್ಯಕ್ತಿಯೊಬ್ಬನಿಗೆ ಅರಿವುಂಟಾದರೆ ಸಾಲದು, ಆ ಅರಿವು ಎರಡೂ ಕಡೆ ಉತ್ಪತ್ತಿಯಾಗಬೇಕೆಂದು ತಿಳಿಸಿದ್ದಾಳೆ. ವ್ಯಕ್ತಿಯನ್ನು ಬೆಳೆಸದೆ, ಆತನಿಗೆ ಸಂಸ್ಕಾರ ನೀಡದೆ, ಆತನಲ್ಲಿ ಅರಿವು ಮೂಡಿಸದೆ, ಆ ಅರಿವನ್ನು ಆಚರಣೆಗೆ ತರಿಸದೆ ಇದ್ದರೆ ಸಮಾಜ ಬೆಳೆಯುವುದಿಲ್ಲ. ಸಮುದಾಯ ಅಭಿವೃದ್ಧಿಯಾಗುವುದಿಲ್ಲ. ಅದಕ್ಕೆ 'ಎನ್ನರಿಯಿಸದೆ ನಿನ್ನನರಿಯಿಸಿದಡೆ ನೀನೆನಗೆ ಗುರುವಲ್ಲ' ವೆಂದು ಸ್ಪಷ್ಟಪಡಿಸಿದ್ದಾಳೆ. ಇನ್ನೊಬ್ಬರಿಗೆ ತಿಳಿಹೇಳುವುದೆಂದರೆ ತಾನು ತಿಳಿದುಕೊಳ್ಳುವುದೆಂದು ಅರ್ಥ. ಹೀಗೆ ವ್ಯಕ್ತಿ-ಸಮುದಾಯ, ಗುರು-ಶಿಷ್ಯ, ಸತಿ-ಪತಿ ಇವರಿಬ್ಬರಲ್ಲಿಯೂ ಅರಿವು-ಆಚಾರವನ್ನುಂಟು ಮಾಡುವುದೇ ಅನುಭಾವವಾಗಿದೆ.

'ನುಡಿಯೆನೆಂಬಲ್ಲಿಯೆ ನುಡಿ ಅದೆ
ನಡೆಯನೆಂಬಲ್ಲಿಯೆ ನಡೆ ಅದೆ
ಭಾವಿಸೆನೆಂಬಲ್ಲಿಯೆ ಭಾವ ಅದೆ
ಅರಿದು ಮರೆದೆನೆಂಬಲ್ಲಿಯ ಅರಿವು ಮರವೆ ಅದೆ...'[೩೭]

ನಡೆ–ನುಡಿಗಳ ಬಗೆಗೆ ಹೊಸ ವ್ಯಾಖ್ಯಾನ ನೀಡುವ ಮೂಲಕ ಅರಿವಿನ ಸಾಧ್ಯತೆಗಳ ಬಗ್ಗೆ ಚಿಂತನೆಯಿರುವುದು ಕಾಣುತ್ತದೆ. ನಡೆ–ನುಡಿಗಳಲ್ಲಿ ಸಾಮ್ಯತೆಯುಂಟಾಗಬೇಕಾದರೆ ಸಾಧನೆ ಬಹಳ ಮುಖ್ಯ. ಇದು ಒಂದು ದಿನದ ನಡೆಯಲ್ಲ, ನಿರಂತರವಾದ ನಡೆ. ಇದು ಒಮ್ಮೆ ಹೇಳುವ ನುಡಿಯಲ್ಲ, ನಿರಂತರವಾದ ಜಾಗೃತಿ. ಆದರೆ ಮುಕ್ತಾಯಕ್ಕ ಇದಕ್ಕೆ ತದ್ವಿರುದ್ಧವಾಗಿ 'ನುಡಿಯೆನು' ಎಂಬಲ್ಲಿಯೇ 'ನುಡಿ ಇದೆ' ಯೆಂದು ಹೇಳುತ್ತಾಳೆ. ಯಾವುದನ್ನು ನಾವು ನೇತ್ಯಾತ್ಮಕವೆಂದು ಭಾವಿಸಿರುತ್ತೇವೆಯೋ ಅಲ್ಲಿಯೇ ಇತ್ಯಾತ್ಮಕ ಸಾಧ್ಯತೆಗಳಿವೆ ಎಂದು ತಿಳಿಸಿದ್ದಾಳೆ. ನಾನು ನಾನಾದೆನೆಂಬಲ್ಲಿಯೇ ನೀನೆಂಬುದಿದೆಯೆಂದು ಮುಂದಿನ ನುಡಿಯಲ್ಲಿ ವಿವರಿಸಿದ್ದಾಳೆ. ಅರಿಯದೇ ಮರೆಯುವುದು ಒಂದು ಹಂತವಾದರೆ, ಅರಿತು ಮರೆಯುವುದು ಮತ್ತೊಂದು ಹಂತ. ಅರಿದ ಅರಿವನ್ನು ಮರೆಯದೇ, ಮಾಡಿದೆನೆಂಬ ಅಹಂಕಾರವ ಮರೆಯುವುದು ಅರಿವಿನ ನಿಜವಾದ ಸಾಕ್ಷಾತ್ಕಾರವಾಗುತ್ತದೆ.

'ಕೃಷಿಯ ಮಾಡಿ ಉಣ್ಣದೆ ಹಸಿದ ಹರಿವ ಪರಿ ಇನ್ನೆಂತೊ?
ಕರ್ಮ ಯೋಗವ ಮಾಡದೆ ನಿರ್ಮಲ ಸುಚಿತ್ತವನರಿದ ಪರಿ ಇನ್ನೆಂತೊ
ಬೇಯದ ಆಶನವನುಂಬ ತಾವಾವುದು
ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ?'[೩೮]

ಕಾಯಕ ತತ್ತ್ವ ವಿಶ್ವದ ಶ್ರಮ ಸಂಸ್ಕೃತಿಗೆ ನೀಡಿದ ಕೊಡುಗೆಯಾಗಿದೆ. ಕರ್ಮಯೋಗದ ವ್ಯಾಪ್ತಿಯನ್ನು ಸಮಾಜದ ಹಿತಕ್ಕಾಗಿ ತಿರುಗಿಸುವ ಉದಾತ್ತ ದೃಷ್ಟಿಯಿಂದ ಕೂಡಿದೆ. ಈ ಶ್ರಮ ಸಂಸ್ಕೃತಿಯು ಧರ್ಮ ಮತ್ತು ವಿಜ್ಞಾನದಲ್ಲಿ ಅಂತರ್ಗತವಾಗಿದೆ. ಆದರೆ ಸಮಾಜದಲ್ಲಿ ಅದನ್ನು ಶಿಕ್ಷಣದ ಮೂಲಕ ಅನುಷ್ಠಾನಕ್ಕೆ ತರುವ ಪ್ರಯತ್ನ ನಡೆದಿಲ್ಲ. ಇಂದು ಶ್ರಮದ ವಿಕೃತ ಸಂಸ್ಕೃತಿ ನಿರ್ಮಾಣವಾಗಿದೆ. ಭಾರತದ ಧರ್ಮ, ಸಂಸ್ಕೃತಿ ಮತ್ತು ದೇಶೀಯ ಶಿಕ್ಷಣಕ್ಕೆ ಒಂದು ಬಲವಾದ ಹೊಡೆತ ನೀಡಿದೆ. ನಮ್ಮತನದ ಶಿಕ್ಷಣ ಮೌಲ್ಯವನ್ನು ಕಳೆದುಕೊಂಡು ಆಂಗ್ಲ ಪ್ರಣೀತ ಶಿಕ್ಷಣ ಬೇರೂರಿದೆ. ಆಕ್ರಮ ಹಣ ಸಂಪಾದನೆ, ಸ್ವಾರ್ಥಮೂಲ ದುಡಿಮೆ, ಮಾನವ ಯಂತ್ರಗಳನ್ನು ನಿರ್ಮಿಸುವ ಶಿಕ್ಷಣ ಮನುಷ್ಯನ ದುಷ್ಕೃತ್ಯಕ್ಕೆ ಕಾರಣವಾಗಿದೆ.

ವಚನ ಸಂಸ್ಕೃತಿಯು ಅಸ್ಪೃಶ್ಯತೆಯನ್ನು ಒಂದು ಚಿಂತನಾ ಮಾದರಿಯ ಭಾಗವಾಗಿ ಪರಿಗಣಿಸಿದೆ. ಜ್ಞಾನದ ವಾರಸುದಾರಿಕೆ ಕುರಿತ ಸಂಗತಿಯ ಹಿನ್ನೆಲೆಯಲ್ಲಿ ಅವರು ಅಸ್ಪೃಶ್ಯತೆಯನ್ನು ಚರ್ಚಿಸಿದ್ದಾರೆ. ಯಾರು ಒಳಗಿನವರು ಯಾರು ಹೊರಗಿನವರು ಎಂಬ ವರ್ಗೀಕರಣವನ್ನು ಅವರು ಪ್ರಶ್ನೆ ಮಾಡಿದ್ದಾರೆ.

ಅವರು ಎತ್ತಿರುವ ಒಳ-ಹೊರಗೆಂಬ ಸಂಗತಿಗಳು ಕೇವಲ ವ್ಯಕ್ತಿಗತವಾಗಿರಲಿಲ್ಲ. ಅವು ಸಾಮಾಜಿಕ ಸಂಗತಿಗಳಾಗಿದ್ದವು.

'ತೆಂಗಿನೊಳಗಣ ತಿರುಳು ಸೇವಿಸಬರ್ಪುದಲ್ಲದೆ
ಹೊರಗಣ ಪರಟೆ ಸೇವಿಸಲು ಬಾರದು
ಚಾಂಡಾಲಂಗೆ ಜ್ಞಾನವಂಕುರಿಸಲು
ಆತನ ಅಂತರಂಗದ ವೃತ್ತಿಗೆ ಪೂಜ್ಯತೆಯಲ್ಲದೆ
ಬಹಿರಂಗದ ತನುವಿಗೆ ಪೂಜ್ಯತೆಯಾಗದು
ಒಳಹೊರಗೆಂಬ ಬೇಧವಿಲ್ಲದೆ ಸೇವಿಸಲು ಚಿತವಪ್ಪಂತೆ
ಶಿವಕುಲ ಪ್ರಸೂತಂಗೆ ಶಿವಜ್ಞಾನವಾಗಲು
ಆತನ ತನು ವೃತ್ತಿಗಳೆರಡೂ ಸೇವಿಸಲಾಗಿರ್ಪವು
ಕೂಡಲ ಚನ್ನಸಂಗಮದೇವಾ'[೨೯]

ಈ ವಚನದಲ್ಲಿ ಎರಡು ವಿರೋಧವಾದ ಸಂಗತಿಗಳನ್ನು ಮುಖಾಮುಖಿಯಾಗಿಸಲಾಗಿದೆ. ಪರಟೆ, ದೇಹ ಮತ್ತು ಹೊರಗಣ ಇವು ಚಾಂಡಾಲನನ್ನು ಪ್ರತಿನಿಧಿಸಿದರೆ, ತಿರುಳು, ಅಂತರಂಗ, ಒಳಗಣ ಇವು ಕುಲಜನನ್ನು ಪ್ರತಿನಿಧಿಸುತ್ತವೆ. ಇಲ್ಲಿ ಕುಲಜರು ಮಾತ್ರ ಜ್ಞಾನಕ್ಕೆ ಅಧಿಕಾರಸ್ಥರಾಗಿದ್ದಾರೆ. ಏಕೆಂದರೆ ಅವರಲ್ಲಿ ಒಳಹೊರಗೆಂಬ ಬೇಧವಿಲ್ಲ. ಒಂದು ವೇಳೆ ಚಾಂಡಾಲಂಗೆ ಜ್ಞಾನ ಅಂಕುರಿಸಿದರೆ ಅಲ್ಲಿ ಅವನ ಜ್ಞಾನಕ್ಕೆ ಗೌರವ ನೀಡಲಾಗುತ್ತದೆ. ವಿನಃ ದೇಹಕ್ಕಲ್ಲ. ಕುಲಜರ ಜ್ಞಾನ, ದೇಹ ಎರಡಕ್ಕೂ ಮನ್ನಣೆಯಿದೆ. ಇದು ಅಂದು ಆಚರಣೆಯಲ್ಲಿದ್ದ ವರ್ಣ ಸಮಾಜದ ಬಗ್ಗೆ ಚಿತ್ರಿಸುತ್ತದೆ. 'ಊರ ಒಳಗಣ ಬಯಲು ಊರ ಹೊರಗಣ ಬಯಲೆಂದುಂಟೆ?' ಎಂದು ಬೊಂತಾದೇವಿ ಪ್ರಶ್ನಿಸುತ್ತಾ, ಬಯಲು ಎರಡಿರಲು ಸಾಧ್ಯವಿಲ್ಲ. ಒಳಹೊರಗೆಂಬ ತಾರತಮ್ಯವು ಸಾಮಾಜಿಕವಾಗಿ ಕಟ್ಟಿಕೊಂಡ ಸಂಗತಿಗಳು ಎಂಬುದನ್ನು ಸ್ಪಷ್ಟವಾಗಿ ಹೇಳುತ್ತಾಳೆ. ಇಲ್ಲಿರುವುದು ಕೂಡ ವರ್ಣ. ಸಮಾಜವೇ ಆಗಿದೆ. ಅದನ್ನು ಮೀರುವ ಬಗ್ಗೆ ಹೇಳುತ್ತಾ ಇವು ಜೈವಿಕವಾದ ಸಂಗತಿಗಳಲ್ಲವೆಂಬುದು ಇಲ್ಲಿನ ಮುಖ್ಯ ಸಂದೇಶವಾಗಿದೆ. ದಲಿತ ವರ್ಗದ ಶರಣರು ಇಂತಹ ಅನೇಕ ಸಂಗತಿಗಳ ಮೂಲಕ ವ್ಯಕ್ತಿತ್ವದಲ್ಲಿ, ವಿವೇಕದಲ್ಲಿ ಯಾರಿಗೂ ಕಡಿಮೆಯಿಲ್ಲವೆಂದು ಬದುಕಿನಲ್ಲಿ ತೋರಿಸಿಕೊಟ್ಟರು. ಇದರಿಂದ ಅವರಿಗೆ ಮಾನ್ಯತೆ ಸಿಕ್ಕಿತೇ ಹೊರತು ಅಸಮಾನತೆ ಅಳಿಯಲಿಲ್ಲ.

ಆಧ್ಯಾತ್ಮದಲ್ಲಿ ಭಕ್ತಿ ಮಾತ್ರ ಮುಖ್ಯವಾಗಿದ್ದು, ಶರೀರ ನಿಮಿತ್ತ್ಯ ಮಾತ್ರ ಆಗಿದೆ. ಇದು ಶರೀರವನ್ನು ಬೇಧಿಸಿ ಬುದ್ಧಿ ಮತ್ತು ಕ್ರಿಯೆಗಳನ್ನು ಒಡೆದು ವರ್ಗಬೇಧವನ್ನು ಹುಟ್ಟು ಹಾಕುತ್ತಿದೆ. 'ದೇಹಾರವ ಮಾಡುವ ಅಣ್ಣಗಳಿರಾ, ಒಂದು ತುತ್ತು ಆಹಾರವನಿಕ್ಕಿರೆ' ಎನ್ನುವ ಅಂಬಿಗರ ಚೌಡಯ್ಯ ದೇಹದ ಕ್ರಿಯಾಶೀಲತೆಗೆ, ಶಕ್ತಿಗೆ ಬೇಕಾದ ಅನ್ನದ ಅನಿವಾರ್ಯತೆ, ಅವಶ್ಯಕತೆ ಎಷ್ಟಿದೆ ಎಂಬುದನ್ನು ಹೇಳುತ್ತಾನೆ. ಇಲ್ಲಿ ಆಧ್ಯಾತ್ಮಕ್ಕಿಂತ ಮೊದಲು ಅನ್ನ ಮುಖ್ಯ ಇದು ವ್ಯಕ್ತಿಯೊಬ್ಬನ ಹಸಿವಲ್ಲ. ಇಡೀ ಸಮುದಾಯದ ಸಮಸ್ಯೆಯಾಗಿದೆ.

'ಒಡಲುಗೊಂಡವ ಹಸಿವ
ಒಡಲುಗೊಂಡವ ಹುಸಿವ
ಒಡಲುಗೊಂಡವನೆಂದು
ನೀನೆನ್ನ ಜಡಿದೊಮ್ಮೆ ನುಡಿಯದಿರಾ
ನೀನೆನ್ನಂತೆ ಒಮ್ಮೆ ಒಡಲುಗೊಂಡು ನೋಡಾ
ರಾಮನಾಥ'[೬೦]

ಶರೀರ ಧರ್ಮದ ಹಸಿವು ಇರುವವರೆಗೆ ಸುಳ್ಳು ಇರುತ್ತದೆ. ದೇಹ ಇರುವ ಮನುಷ್ಯ ಹಸಿಯದೆ, ಸುಳ್ಳು ಹೇಳದೆ ಇರಲಾರ. ಸುಮ್ಮನೆ ಒಣ ನೀತಿಯನ್ನು ದೇವರೇ ಹೇಳಿದರೂ ಅದನ್ನು ಒಪ್ಪಲಾರ. ಹಸಿವು, ಸುಳ್ಳುಗಳು, ಮನುಷ್ಯನಿಗೆ ಅನಿವಾರ್ಯವಾಗುವ ಸ್ಥಿತಿ ಬಂದಿದೆಯಲ್ಲಾ ಅನ್ನುವ ನೋವು ಕಾಣಿಸುತ್ತದೆ. ಸುಳ್ಳನ್ನು ಟೀಕಿಸುವುದಕ್ಕಿಂತ ಅರ್ಥ ಮಾಡಿಕೊಳ್ಳುವುದು ಮುಖ್ಯ. ಹಸಿವಿನ ಅನುಭವವಿರುವ ಕಸುಬುದಾರ ವರ್ಗಗಳು ವಾಸ್ತವಿಕ ನೆಲೆಯಲ್ಲಿ ನಿಂತು ಬದುಕಿನ ಬಗ್ಗೆ ಆಲೋಚಿಸಿರುವುದನ್ನು ಕಾಣುತ್ತೇವೆ. ಹೊಟ್ಟೆಯ ಹಸಿವನ್ನು ಹಿಂಗಿಸುವ ಶಿಕ್ಷಣ ಮೊದಲು ಬೇಕು. ಕೆಟ್ಟವನಿಗೂ ಒಳ್ಳೆಯವನಾಗುವ ಅವಕಾಶ ಕಲ್ಪಿಸಿ ಕೊಡಬೇಕು. ಅಂದಾಗ ಆ ಶಿಕ್ಷಣಕ್ಕೆ ಬೆಲೆ ಬರುತ್ತದೆ. ಆತ್ಮಸ್ಥೈರ್ಯ ಬೆಳೆಸುವ, ವೈಜ್ಞಾನಿಕ ಮನೋಭಾವ ಮೂಡಿಸುವ ಶಿಕ್ಷಣ ಅಗತ್ಯವಾಗಿದೆ. ಶರೀರ ಶ್ರಮ ಮತ್ತು ಜ್ಞಾನವನ್ನು ಸಮನ್ವಯಗೊಳಿಸಿ, ಶರೀರವನ್ನು ಉತ್ಪಾದನಾ ಶಕ್ತಿಯನ್ನಾಗಿ ಮಾರ್ಪಡಿಸಿಕೊಂಡಿರುವುದನ್ನು ಕಾಣುತ್ತೇವೆ.

'ಭಕ್ತಿ ಜ್ಞಾನ ವೈರಾಗ್ಯದಿಂದ ಅರಿಯಬೇಕೆಂಬುದು
ಭಕ್ತಿಯೋ ಜ್ಞಾನವೋ ವೈರಾಗ್ಯವೋ?
ಮೂರಕ್ಕೆ ಬೇರೊಂದೆಡೆಯುಂಟೆ?
ಅದರ ಎಡೆಯ ಗುಡಿಯ ತೋರು
ಬರಿಯ ಮಾತಿನ ಮಾಲೆ ಬೇಡ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ'[೬೧]

ಸಾಧಕನ ಸಾಧನೆಯು ಭಕ್ತಿ ಜ್ಞಾನ ವೈರಾಗ್ಯಗಳ ಮೂಲಕ ಪಡೆದ ಸತ್ಯದರ್ಶನವನ್ನು ಈ ವಚನ ಹೇಳುತ್ತದೆ. ಮಾನವನು ಆತ್ಮೋದ್ಧಾರದ ಅರಿವು ಪಡೆಯಬೇಕಾದರೆ ಭಕ್ತಿ ಜ್ಞಾನ ವೈರಾಗ್ಯಗಳನ್ನು ತನ್ನ ನಿತ್ಯಜೀವನದಲ್ಲಿ ಅಳವಡಿಸಿಕೊಂಡು ನಿಜದ ನಿಲುವನ್ನು ಹೊಂದಬೇಕು. ಭಕ್ತಿ ಜ್ಞಾನ-ವೈರಾಗ್ಯಗಳು ಬೇರೆಲ್ಲೋ, ಇನ್ನಾವುದೋ ಸ್ಥಳದಲ್ಲಿ ಇರುವಂತಹವುಗಳಲ್ಲ. ಅವು ನಮ್ಮಲ್ಲಿಯೇ ಇವೆ. ಈ ಮೂರನ್ನು ಸಮನ್ವಯಗೊಳಿಸಿಕೊಂಡಾಗ ಮಾತ್ರ ಅರಿವಿನ ನಿಜವನ್ನು ತಿಳಿಯಲು ಸಾಧ್ಯ. ದೇಹವನ್ನು ಗುಡಿಯ ಪವಿತ್ರತೆಗೆ ಬಿಂಬಿಸಿ 'ಬರಿಯ ಮಾತಿನ ಮಾಲೆ ಬೇಡ' ಎನ್ನುವ ವ್ಯರ್ಥ ಕಾಲಹರಣದ ಗೊಡವೆಯೇ ಬೇಡ ಎಂಬುದನ್ನು ತಿಳಿಸಿದ್ದಾರೆ.

'ವಚನ ರಚನೆಯ ನುಡಿವ ಬಯಲು ರಂಜಕರೆಲ್ಲ
ಭಕ್ತರಪ್ಪರೆ ಅಯ್ಯಾ?
ವಚನ ತನ್ನಂತಿರದು ತಾನು ವಚನದಂತಿರೆ
ಅದೆಂತೆಂದಡೆ
ತನುಮನಧನವೆಲ್ಲ ಹಿಂದಿಟ್ಟುಕೊಂಡು
ಒಡೆಯನ ಕಂಡು ನಾಯಿ ಬಾಲವ ಬಡಿದುಕೊಂಬಂತೆ
ಆ ತೆರನಾಯಿತೆಂದ ಕಲಿದೇವರ ದೇವಯ್ಯಾ'[೪೨]

ಬರೀ ಮಾತು ಹೇಳುವುದರಿಂದಾಲೀ, ಪಾಂಡಿತ್ಯ ಪ್ರದರ್ಶನದಿಂದಾಗಲಿ ಸಮಾಜಕ್ಕೆ ಯಾವುದೇ ಪ್ರಯೋಜನವಾಗಲಾರದು. ತನುಮನಗಳು ಶುಚಿತ್ವಗೊಂಡಲ್ಲಿ ಮಾತ್ರ ಸಾಧ್ಯವಾಗುತ್ತದೆ. 'ಮಾತಿನ ಬಣದೆಯ ಮುಂದಿಟ್ಟುಕೊಂಡು ಒಡೆಯನ ಕಂಡು ನಾಯಿ ಬಾಲ ಬಡಿದಂತೆ' ಎಂದು ಹೊಗಳು ಭಟ್ಟರನ್ನು ಟೀಕಿಸುವುದರ ಮೂಲಕ ನಿಜಸ್ಥಿತಿಯನ್ನು ಬಯಲಿಗೆಳೆದಿದ್ದಾನೆ. 'ಮಾತಿಗಿಂತ ಕೃತಿಲೇಸು' ಎಂಬುದನ್ನು ಹೇಳಿ, ಸಮಾಜದಲ್ಲಿ ದುಡಿಯುವ ವರ್ಗವನ್ನು ನಿರ್ಮಿಸಲು ತೊಡಗಿದ್ದಾನೆಂಬುದನ್ನು ಅರಿಯಬಹುದು.

'ಅನುದಿನಂಗಳೆಂಬುದು ಪ್ರಣತಿಯಾಗಿ
ಪುರುಷವೆಂಬುದು ಬತ್ತಿಯಾಗಿ
ಜೀವಜಾತಿಯ ಬೆಳಗ ಬೆಳಗನರಿಯಬೇಕು
ಬೆಳಗುಳ್ಳಲ್ಲಿ ಆತ ನಡೆದಂತೆ ನಡೆಯಬೇಕು
ಬೆಳಗುಳ್ಳಲ್ಲಿ ಆತ ನುಡಿದಂತೆ ನುಡಿಯಬೇಕು
ಎಣ್ಣೆಯೆಂಬ ಜವ್ವನ ಸವಿಯುವ ಮುನ್ನ
ಬೆಳಗು ಕತ್ತಲಾಗುವ ಮುನ್ನ
ರೇಕಣ್ಣ ಪ್ರಿಯಾ ನಾಗಿನಾಥಾ ಬೆಳಗ ಬೆಳಗನರಿಯಬೇಕು'[೪೩]

'ತನ್ನನ್ನು ತಾನರಿವ ಪರಿ'ಯನ್ನು ಚೌಡಯ್ಯ ಚಿತ್ರಿಸಿದ್ದಾನೆ. ಇಡೀ ಜೀವವನ್ನು ಆವರಿಸುವ ಕಾಲವೆಂಬ ಪ್ರಣತಿಯೊಳಗೆ ಪುರುಷವೆಂಬ ಬತ್ತಿಯನ್ನು, ಜೀವವನ್ನೇ ಬೆಳಕಿನ ಬೆಳಗನ್ನಾಗಿಸುವುದು ಚೌಡಯ್ಯನ ಜ್ಞಾನದ ನಿಲುವು. ಇಲ್ಲಿ ಅರಿವಿನ ವಿಶಾಲತೆ ವಿಶೇಷವಾಗಿ ಗೋಚರವಾಗಿದೆ. ತಾನು ಕಂಡುಂಡ ಅರಿವಿನ ಬೆಳಗನ್ನು ತನ್ನ ನಡೆ-ನುಡಿಯಿಂದ ಇತರರಿಗೂ ಕಾಣಿಸುವ ಪ್ರಯತ್ನ ಮಾಡಿದ್ದಾನೆ. ಬೆಳಗು ಎಂದರೆ ಆತ್ಮ, ಗುರು ಕಾರುಣ್ಯ, ಜ್ಞಾನ ಎಂದರ್ಥ. ಬೆಳಗು ಎಂಬ ಗುರುಕಾರುಣ್ಯದಿಂದ ಕತ್ತಲೆಂಬ ಅಜ್ಞಾನ, ಸಾವು, ಚಿಂತನೆಗಳಿಂದ ಮುಕ್ತವಾಗಿರುವುದು. ಪರಿಪೂರ್ಣನಾಗುವುದು. ಬೆಳಗಿನ ಪರಿಯನ್ನು ಬೆಳಗಿನಿಂದಲೇ ಅರಿಯಬೇಕೆಂದು ಚೌಡಯ್ಯ ನಿವೇದಿಸಿದ್ದಾನೆ. ಆಧ್ಯಾತ್ಮವು ಬಾಹ್ಯ ಪ್ರಪಂಚದ ವರ್ಣನೆಯ ಮೂಲಕ ಸತ್ಯವನ್ನು ಅರಸುವುದಿಲ್ಲ. ಅದು ನಮ್ಮೊಳಗಿನ ಪ್ರಪಂಚದ ಹುಡುಕಾಟವಾಗಿದೆ. ಹಾಗೂ ಅಲ್ಲಿನ ಸಿದ್ಧಾಂತಗಳಿಗೆ ಅನುಭವವೇ ಪ್ರಮಾಣವಾಗಿದೆ.

ದೇವತೆಗಳ ಮೂರ್ತಿಗಳನ್ನು ಪೂಜಿಸುವುದು ಭಾರತೀಯ ಸಂಸ್ಕೃತಿಯ ಒಂದು ವಿಶಿಷ್ಟತೆ. ತೀರಾ ಲೌಕಿಕ ಮಟ್ಟದಿಂದ ಹಿಡಿದು ಆಧ್ಯಾತ್ಮಿಕ ಮಟ್ಟದವರೆಗಿನ ಪುರುಷಾರ್ಥ ಸಿದ್ಧಿಗಾಗಿ ಅದನ್ನು ಆಚರಿಸಲಾಗುತ್ತದೆ. ಕಷ್ಟಗಳು ಎದುರಾದಾಗ, ಆತಂಕಗೊಂಡಾಗ ಅದರಿಂದ ಪಾರಾಗಲು ಪೂಜೆ, ಧ್ಯಾನ, ಅನುಷ್ಠಾನ, ವ್ರತ, ಭಜನೆ, ಹರಕೆ ಇತ್ಯಾದಿ ಆಯಾಮಗಳನ್ನು ಅನುಸರಿಸಲಾಗುತ್ತದೆ. ಮೂರ್ತಿ ಪೂಜೆಯು ಆತ್ಮಜ್ಞಾನಕ್ಕೆ ಮಾರ್ಗ ಎಂಬ ಕಾರಣದಿಂದ ಭಾರತದ ಬಹುತೇಕ ಆಧ್ಯಾತ್ಮ ಮಾರ್ಗಗಳು ಒಂದಿಲ್ಲೊಂದು ರೂಪದಲ್ಲಿ ಅಳವಡಿಸಿಕೊಂಡಿವೆ. ಆದರೆ ಹಿಂದೂ ಧರ್ಮದ ವಿದ್ಯಾಕೇಂದ್ರಗಳಾದ ದೇವಾಲಯಗಳು ಪ್ರತಿಷ್ಠಿತ ವರ್ಗದವರ ಅನೀತಿಯಿಂದ ಜನಸಾಮಾನ್ಯರನ್ನು ಸುಲಿಗೆ ಮಾಡುವ ಯಂತ್ರಗಳಾಗಿವೆ.

'ಹಲವು ದೈವಂಗಳ ಪೂಜೆಯ ಮಾಡುವ
ಗೊರವನ ಗುರುದೇವನೆಂದು ನುಡಿದು ಕರೆವ
ವಿವೇಕ ಹೀನ ದುರಾಚಾರಿಯ ಮುಖವ
ನೋಡಲಾಗದು ಕಾಣಾ ರಾಮನಾಥ'[೪೪]

ದೇವಾಲಯ, ಮಠಗಳಲ್ಲಿ ಕಲಿಸುವ ವಿದ್ಯೆ, ಕೀಳು ಜಾತಿಯವರಿಗೆ ಕಲಿಯುವ ಅವಕಾಶವಿರಲಿಲ್ಲ ಎಂಬುದು ಸ್ಪಷ್ಟ. ದೇಹದಲ್ಲಿಯೇ ದೇವರನ್ನು ಕಾಣುವ ಮೂಲಕ ವ್ಯಕ್ತಿಯನ್ನು ಸಂಸ್ಕಾರಗೊಳಿಸುವ ಮಾರ್ಗವನ್ನು ಸೂಚಿಸಿ, ತಮ್ಮ ಶಕ್ತಿ, ಸಾಮರ್ಥ್ಯಗಳ ಬಗ್ಗೆ ಆತ್ಮವಿಶ್ವಾಸ ತುಂಬುವ ಇಂತಹ ರಚನೆಗಳು ಇಂದಿಗೂ ಪ್ರಸ್ತುತವೆನಿಸುತ್ತವೆ. 'ಅಟ್ಟಿಯ ಚುಚ್ಚುವ ಉಳಿ ಮೊನೆಯಲ್ಲಿ ಪ್ರತ್ಯಕ್ಷನಾದ ಪರಮೇಶ್ವರನನ್ನು ಕಂಡು ಇತ್ತಲೇಕಯ್ಯ ಬಂದೆ? ಕಾಯದ ತಿತ್ತಿಯ ಹೊತ್ತಾಡುವನತ್ತ' ಎನ್ನುವ ಮಾದರ ಧೂಳಯ್ಯನ ಆತ್ಮಸ್ಥೈರ್ಯ ಇಡೀ ಶರಣ ಸಂಸ್ಕೃತಿಯನ್ನೇ ಪ್ರಶ್ನಿಸಿದಂತಿದೆ. ಇದು ಕೆಳಸ್ತರದ ಜನರಲ್ಲಿದ್ದ ಜೀವನ ಪ್ರೀತಿಯನ್ನು ತೋರಿಸುತ್ತದೆ. ಸ್ಥಾವರದ ನಿರಾಕರಣೆಯ ಮೂಲಕ ದೇವಾಲಯಗಳ ವ್ಯವಸ್ಥೆಯನ್ನು ದೂರವಿಟ್ಟು ಅನುಭವ ಮಂಟಪದಲ್ಲಿ ಜೀವನ ಶಿಕ್ಷಣದೊಡನೆ ಸ್ವಯಂ ಉನ್ನತಿಗೆ ಅನುಕೂಲವಾಗುವಂತೆ ದಿನನಿತ್ಯದ ಜೀವನದಲ್ಲಿ ಉಪಯುಕ್ತವಾಗುವ ಜನರ ಜೀವನಕ್ಕೆ ಆಧಾರ ಕಲ್ಪಿಸುವ ಕಸುಬುಗಳನ್ನು ಕಲಿಸುವಂತಹ ತರಬೇತಿ ಕೇಂದ್ರಗಳನ್ನು ಆರಂಭಿಸಿದರು. ವಿರಕ್ತಮಠ, ಓದಿಸುವ ಮಠ, ಸಾಲಿಮಠಗಳಂತಹ ಧಾರ್ಮಿಕ ಕೇಂದ್ರಗಳು ಶಿಕ್ಷಣ ಕೇಂದ್ರಗಳಾಗಿದ್ದವು. ಅಕ್ಷರ ಕಲಿಕೆಯ ಜೊತೆಗೆ ಬಟ್ಟೆ ನೇಯುವುದು, ನೂಲುವುದು, ಕಡತ ಬಳಪಗಳನ್ನು ತಯಾರಿಸುವುದು ಬಿದಿರಿನಿಂದ ತಯಾರಿಸುವ ಬುಟ್ಟಿ, ಚಾಪಿ, ಮೊರದಂತಹ ವಸ್ತುಗಳ ತಯಾರಿಕೆ, ಕಂಬಾರಿಕೆ, ಕುಂಬಾರಿಕೆ, ಬಡಗಿತನಗಳಲ್ಲದೆ, ಕೆಲವು ಮಠಗಳಲ್ಲಿ ಕೃಷಿ ಕಾರ್ಯಕ್ಕೆ ಸಂಬಂಧಿಸಿದಂತೆ ಹಲವಾರು ವಿಷಯಗಳನ್ನು ಕಲಿಸಲಾಗುತ್ತಿತ್ತು. ಮೂಲ ವೃತ್ತಿಗಳನ್ನು ಉಳಿಸಿ ಪೋಷಿಸುವುದಲ್ಲದೆ ತಮ್ಮ ಕುಲಕಸುಬುಗಳನ್ನೇ ಅನುಭಾವದ ಮಾಧ್ಯಮವನ್ನಾಗಿಸಿಕೊಂಡದ್ದನ್ನು ಶರಣರ ವಚನಗಳ ಮೂಲಕ ಗುರುತಿಸಬಹುದಾಗಿದೆ.

ಆದರೆ ಆಧುನಿಕ ಜೀವನ ಪದ್ಧತಿ ವೈಯಕ್ತಿಕ ಸುಖದ ಸೌಕರ್ಯಗಳನ್ನು ಪಡೆದುಕೊಳ್ಳಲು ಕಾಳಜಿ ವಹಿಸಿದೆ. ಉಪಜೀವನಕ್ಕೆ ಪ್ರಧಾನವಾಗಿದ್ದ ವೃತ್ತಿಗಳ ಕ್ರಿಯಾಶೀಲತೆಯನ್ನು ನಾಶಗೊಳಿಸಿ ಲಾಭಕೋರತನದಿಂದಾಗಿ ಯಂತ್ರೋಪಕರಣಗಳ ಬಳಕೆ ಪ್ರಾರಂಭವಾಯಿತು. ಸ್ವಾವಲಂಬನೆಯನ್ನು ಬೆಳೆಸಿದಂತಹ ಕುಟುಂಬಾವಲಂಬಿತ ವೃತ್ತಿಗಳು ಆಧುನಿಕ ಕೈಗಾರೀಕರಣದಿಂದಾಗಿ ನಾಶವಾಗಿದೆ. ಮಾನವನ ಧನದಾಸೆಯಿಂದಾಗಿ ಗೃಹಕೈಗಾರಿಕೆ ವಸ್ತುಗಳ ಬೆಲೆ ಕುಸಿದು, ಅವರ ಆರ್ಥಿಕ ಸ್ಥಿತಿ ಹದೆಗೆಡುತ್ತಿದ್ದಂತೆಯೇ ಗ್ರಾಮೀಣ ಕಸುಬುಗಳು ವ್ಯಾಪಾರ, ಮಾರುಕಟ್ಟೆಗಳತ್ತ ಮುಖಮಾಡಿದ್ದಲ್ಲದೆ ಸಾಮಾಜಿಕ ಸಂಬಂಧಗಳಲ್ಲಿ ಅಂತರ ಉಳಿದು ನೈಸರ್ಗಿಕವಾಗಿ ಮತ್ತು ಕುಟುಂಬಗಳಿಂದ ಸಿಗುತ್ತಿದ್ದ ಅನೌಪಚಾರಿಕ ಶಿಕ್ಷಣ, ಜೀವನ ಮೌಲ್ಯಗಳು, ಸಂಸ್ಕಾರಗಳು ಸಿಗದಂತಾದವು. ಸಂಬಂಧಗಳು ಕೇವಲ ವ್ಯವಹಾರಿಕವಾಗಿಯೇ ವಿನಃ ಆತ್ಮೀಯ ಭಾವನೆಯಾಗಲೀ, ಕೊಡುಕೊಳ್ಳುವಿಕೆಯ ಸಂಬಂಧವಾಗಲಿ ಉಳಿದಿಲ್ಲ. ಆಧುನಿಕ ಶಿಕ್ಷಣ ಮನುಷ್ಯನನ್ನು ಯಂತ್ರಗಳಂತೆ ಜೀವನ ಸಾಗಿಸುವಂತೆ ಮಾಡಿದೆ. ಇದರಿಂದಾಗಿ ಗ್ರಾಮೀಣ ಪರಿಸರ, ಕುಲಕಸುಬುಗಳಿಂದ ಪಡೆಯುತ್ತಿದ್ದ ನೆಮ್ಮದಿಯ ಬದುಕನ್ನು ಪುನಃ ಪಡೆಯುವಲ್ಲಿ ಕಟ್ಟಿಕೊಳ್ಳುವಲ್ಲಿ ಸೋಲುತ್ತಿದ್ದಾನೆ.

ಶರಣ ಸಾಧನೆಯ ಇನ್ನೊಂದು ಮುಖ್ಯವಾದ ಅಂಶವೆಂದರೆ ಬಹಿಷ್ಕರಿಸಲಾಗಿದ್ದ ಸಮಾಜದಲ್ಲಿಯೇ ಹೆಣ್ಣನ್ನು ಸ್ವತಂತ್ರ ವ್ಯಕ್ತಿಯಾಗಿ, ಬುದ್ಧಿ ವಿವೇಚನೆಯುಳ್ಳ ಮನುಷ್ಯಳಾಗಿ ಕಂಡು, ಅವರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿಕೊಟ್ಟದ್ದು. ಜೈವಿಕವಾಗಿ ವ್ಯತ್ಯಾಸವಿದ್ದರೂ, ಅನುಭವ ಮತ್ತು ಆಲೋಚನಾ ಕ್ರಮದಲ್ಲಿ ಒಂದೇ ಎಂದು ಲಿಂಗ ರಾಜಕಾರಣವನ್ನು ಒಡೆದು ಹಾಕಿದರು. ಅಲ್ಲದೆ ಹೆಣ್ಣನ್ನು ಆತ್ಮ ಹಾಗೂ ವಿಚಾರವಿಲ್ಲದ ವಸ್ತುವಾಗಿ, ಕೇವಲ ಹೆಣ್ಣಾಗಿ ನೋಡುವ ಲೋಕದ ದೃಷ್ಟಿಯನ್ನೇ ಬದಲಾಯಿಸಿ, ಜಗತ್ತಿನ ಸೃಷ್ಟಿ ಸ್ವರೂಪವೇ ಅವಳಲ್ಲಿ ಅಡಗಿದೆ ಎಂಬುದನ್ನು ವಿವರಿಸಿದ್ದಾರೆ.

'ಆಡಲಿಲ್ಲವಯ್ಯಾ ನಾನು ಹೆಣ್ಣು ರೂಪಧರಿಸಿ
ನುಡಿಯಲಿಲ್ಲವಯ್ಯಾ ನಾನು ಹೆಣ್ಣು ರೂಪ ಧರಿಸಿ
ನಾನು ಹೆಣ್ಣಲ್ಲದ ಕಾರಣ,ನಾನು ಇಹ ಪರ ನಾಸ್ತಿಯಾದವಳಯ್ಯಾ
ನಾನು ಉಭಯದ ಸಂಗವ ಕಂಡು ಕಾಣದಂತಿದ್ದೆನಯ್ಯಾ
ಸಂಗಯ್ಯಾ ಬಸವ ಬಯಲು ಕಂಡ ಕಾರಣ'[೪೫]

ಎಂದು ಶರಣೆ ನೀಲಮ್ಮ ಹೆಣ್ಣಿನ ಅಸ್ತಿತ್ವದ ಬಗ್ಗೆ ಇರುವ ಪಿತೃಪ್ರಧಾನ ಮನಸ್ಸುಗಳ ತಿರಸ್ಕಾರ, ಕೀಳು ಭಾವನೆಯ ಕಳಂಕವನ್ನು ಕಳೆದುಕೊಳ್ಳುವ ಸಲುವಾಗಿ ಆಕೆ ತನ್ನ ಹೆಣ್ಣುತನವನ್ನೇ ತಿರಸ್ಕರಿಸುತ್ತಿದ್ದಾರೆ. ಹೆಣ್ಣಿನ ಅಧೀನ ಸ್ಥಿತಿಯನ್ನು ವಿರೋಧಿಸುವುದರೊಂದಿಗೆ ತನ್ನನ್ನು ತಾನು ಹೆಣ್ಣಾಗಿ ಪರಿಭಾವಿಸಿಕೊಳ್ಳಲು ಸಿದ್ಧಳಿಲ್ಲ. ಏಕೆಂದರೆ ಅವಳು ಲೌಕಿಕ ದೃಷ್ಟಿಯ ಬೇಧಗಳನ್ನೆಲ್ಲಾ ಮೀರಿದ್ದಾಳೆ. ಆಕೆಗೆ ಲೌಕಿಕ ಪ್ರಪಂಚದಲ್ಲಿ ಯಾವುದೇ ಆಸಕ್ತಿ ಉಳಿದಿಲ್ಲ. ಅಂದರೆ ಇಲ್ಲಿ ವ್ಯಕ್ತಿಕೇಂದ್ರಿತ ನೆಲೆಯಲ್ಲಿ ಹೆಣ್ಣಿನ ಬದುಕನ್ನು ಕಟ್ಟುವ ಮತ್ತು ಅವಳ ಆಯ್ಕೆಯ ಬದುಕನ್ನು ಕಟ್ಟಿಕೊಳ್ಳಲು ಒತ್ತಾಯಿಸುವ ಪರಿ, ಅವಳ ನೈತಿಕ ಆತ್ಮಸ್ಥೈರ್ಯ ಹೆಮ್ಮಪಡುವಂತದ್ದಾಗಿದೆ.

ವಚನ ಕಾಲದಲ್ಲಿ ಅಕ್ಕಮಹಾದೇವಿ, ಲಕ್ಕಮ್ಮ, ನೀಲಮ್ಮ, ಮುಕ್ತಾಯಕ್ಕ, ರೆಮ್ಮವ್ವೆಯಂತಹ ಕೆಲವು ವಚನಕಾರ್ತಿಯರ ಹೆಸರನ್ನು ವೈಭವೀಕರಿಸಿ ಹೆಣ್ಣಿಗೆ ನೀಡಿದ ಆಧ್ಯಾತ್ಮಿಕ ಸ್ಥಾನಮಾನವನ್ನು ಎತ್ತಿ ತೋರಿಸಲಾಗುತ್ತದೆ. ಆದರೆ ಹಾದರ ಕಾಯಕದ ಗಂಗಮ್ಮ ಸೂಳೆಸಂಕವ್ವೆ, ಅಕ್ಕಮ್ಮನಂತಹ ವೇಶ್ಯಾವೃತ್ತಿಯ ಜನರ ಜೀವನ ಹೇಗಿದೆ ಎಂಬುದು ಮುಖ್ಯವಾಗುತ್ತದೆ. ಇಂತಹ ಸಮುದಾಯಕ್ಕೆ ಸಾಮಾಜಿಕ ಜೀವನದ ಆತ್ಮಬಲವನ್ನು ತುಂಬಿ ಅಭಿವ್ಯಕ್ತಿ ಮತ್ತು ಭಾಗವಹಿಸುವ ಮುಕ್ತ ಅವಕಾಶ ಕಲ್ಪಿಸಿ, ಅವಳ ಅರಿವನ್ನು ವಿಸ್ತರಿಸಿಕೊಳ್ಳುವ ಹಲವು ಸಾಧ್ಯತೆಗಳನ್ನು ಶರಣರು ಕಲ್ಪಿಸಿದ್ದಾರೆ.

'ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ
ಹಿಡಿದಡೆ
ಬತ್ತಲೆ ನಿಲಿಸಿ ಕೊಲುವರಯ್ಯಾ
ವ್ರತಹೀನನನರಿದು ಬೆರೆದಡೆ
ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ
ಒಲ್ಲೆನೊಲ್ಲೆ ಬಲ್ಲೆನಾಗಿ
ನಿಮ್ಮಾಣೆ
ನಿರ್ಲಜ್ಜೇಶ್ವರಾ'[೪೬]

ಈ ವಚನದಲ್ಲಿ 'ಒತ್ತೆ' ಎನ್ನುವ ಶಬ್ದವೇ ಭೋಗದ ವಸ್ತು ಎಂಬುದನ್ನು ಸೂಚಿಸುತ್ತದೆ. ಇದು ಅವಳ ದೇಹಕ್ಕೆ, ಶ್ರಮದ ಕಾಯಕಕ್ಕೆ ಕಟ್ಟುವ ಬೆಲೆ ಅಗಿದೆ. ಹಣ, ಚಿನ್ನ, ವಸ್ತು ರೂಪದಲ್ಲಿ ಪಡೆದುಕೊಂಡ ಶ್ರಮದ ಪ್ರತಿಫಲವನ್ನು ಒಬ್ಬ ವ್ಯಕ್ತಿಯಿಂದ ಸ್ವೀಕರಿಸಿದ ನಂತರ ಅವನಿಗೆ ನಿಷ್ಠೆಯಿಂದ ಇರಬೇಕು. ಇವರಿಗೆ ಸತ್ಯ ನಿಷ್ಠೆ ಬೌದ್ಧಿಕ ವಿಷಯಗಳಲ್ಲ. ಅವು ಆಚರಿಸಬೇಕಾದಂತಹ ಮೌಲ್ಯಗಳಾಗಿವೆ. ಇದು ಇತರ ಹೆಂಗಸರ ಆಯ್ಕೆಯಾಚೆಗಿನ ಬದುಕು ಇವರದಾಗಿತ್ತೆಂಬುದನ್ನು ತಿಳಿಸುತ್ತದೆ. 'ನಿರ್ಲಜ್ಜೇಶ್ವರ' ಎಂಬ ಅಂಕಿತನಾಮ ಸಂಕವ್ವೆಯ ವೃತ್ತಿಸಂಬಂಧಿತ ವಿಶಿಷ್ಟ ಮನೋಧರ್ಮವನ್ನು ಸೂಚಿಸುವುದರೊಂದಿಗೆ ಪ್ರಧಾನ ಸಂಸ್ಕೃತಿಯ ಸ್ತ್ರೀ ಮಾದರಿಗೆ ವ್ಯತಿರಿಕ್ತವಾದ ಹೊಸ ಪ್ರತೀಕದ ಹುಡುಕಾಟವಾಗಿ ಕಂಡುಬರುತ್ತದೆ. ಲಜ್ಜೆ, ನಾಚಿಕೆಯ ನೆಪದಲ್ಲಿ ಅಭಿವ್ಯಕ್ತಿಯನ್ನು ಕಳೆದುಕೊಂಡಿದ್ದ ಸ್ತ್ರೀ ವರ್ಗದಲ್ಲಿ ಮೂಡಿದ ವೈಚಾರಿಕ ಎಚ್ಚರಕ್ಕೆ ಮಾದರಿಯಾಗಿದೆ. ವೃತ್ತಿ ಸಂಬಂಧಿತ ಅವಮಾನ, ಮುಜುಗರಗಳನ್ನು ಮುರಿದು ತನ್ನ ಸ್ವಂತಿಕೆ ಸ್ವ ಅಭಿವ್ಯಕ್ತಿಯನ್ನು ರೂಢಿಸಿಕೊಂಡಿದ್ದಾರೆ. ಈ ವೃತ್ತಿಯ ಬಗ್ಗೆ ಕೀಳರಿಮೆಯಿಂದ ಖಿನ್ನರಾಗದೆ, ಅದನ್ನು ಉನ್ನತ ಸಾಧನೆಯ ಆತ್ಮಾಭಿಮಾನದ ಮಾರ್ಗವಾಗಿ ಕಂಡುಕೊಂಡಿದ್ದಾರೆ.

'ಜ್ಞಾನ ಕ್ರಿಯೆಯಿಲ್ಲದೆ ಅರಿಯಬಹುದೆ?' ಎನ್ನುವಲ್ಲಿ ಮುಕ್ತಾಯಕ್ಕ ಕ್ರಿಯೆಯ ಮೂಲಕ ಅರಿವು ಪಡೆಯುವುದನ್ನು ಅಂದರೆ ಜ್ಞಾನಕ್ಕೆ ಕ್ರಿಯೆಯೇ ಪ್ರಧಾನ ಅಂಶವೆಂಬುದು ವ್ಯಕ್ತವಾಗುತ್ತದೆ.

'ಅರಿವು ನಷ್ಟವಾದವ ಕ್ರಿಯೆ ಬಲ್ಲನೆ
ಕ್ರಿಯೆಯೆಂಬುದೆ ಹಸು ಅರಿವೆಯೆಂಬುದೆ ಹಾಲು
ಬಯಕೆಯೆಂಬುದೆ ಕರು'[೪೭]

ಎನ್ನುವ ಅರಿವಿನ ಮಾರಿತಂದೆಯ ಈ ವಚನದಲ್ಲಿ ಶ್ರಮ, ಜೀವನಕ್ಕೆ ಆಧಾರ ಶಕ್ತಿ. ಅರಿವು ಜೀವ ಪೋಷಕ ಫಲ. ಶ್ರಮ ಮರೆತ ಜ್ಞಾನ ಹೀನವಾದುದು. ಏಕೆಂದರೆ ಕ್ರಿಯೆಯಿಲ್ಲದೆ ಜ್ಞಾನ ಉದಯಿಸಲು ಸಾಧ್ಯವಿಲ್ಲ.

ಬಹುಮುಖಿ ಸಂವೇದನೆವುಳ್ಳ ಈ ಶರಣರ ಕ್ರಾಂತಿ ವಿಘಟನೆಗೊಂಡ ಬದುಕನ್ನು ಹಾಗೂ ಮನಸ್ಥಿತಿಯನ್ನು ಸಂಘಟನೆ ಮಾಡುವುದಾಗಿದೆ. ಅದಕ್ಕೆ ಬಹುದೇವೋಪಾಸನೆಯನ್ನು ನಿರಾಕರಿಸಿ ಅರಿವು ಆಚರಣೆಗಳಲ್ಲಿ ಸಮನ್ವಯ ಸಾಧಿಸಿದರು. ಅರಿವು ಸಾರ್ಥಕಗೊಳ್ಳುವುದು ಆಚರಣೆಗೆ ಬಂದಾಗ ಮಾತ್ರ. ಆಚರಣೆಗೆ ಬಾರದ ಅರಿವು 'ಹೊಟ್ಟೆಯ ಮೇಲೆ ಕಟ್ಟೋಗರವ ಕಟ್ಟಿದಂತೆ' ವ್ಯರ್ಥ ಎಂಬ ನಿಲುವು ಇಲ್ಲಿದೆ.

'ಜ್ಞಾನವೆಂಬುದು ಬೀದಿಯ ಪಸರವೇ?
ಬೊಕ್ಕಣಕ್ಕೆ ತುಂಬುವ ಹುರುಳಿಯೆ?
ಚೀಲದೊಳಗಣ ಜೀರಿಗೆಯೆ?
ಜ್ಞಾನ ಎಂಬುದು ಎಲ್ಲರೊಡನೆ ಬಿರದಿರಬೇಕು
ಗೆಲ್ಲ ಸೋಲಿನ ಮಾತು ಬಂದಡೆ ಗೆಲ್ಲವ ನುಡಿಯದಿರಬೇಕು
ಅಮುಗೇಶ್ವರ ಲಿಂಗವೆಂಬೆನು'[೪೮]

ಇಲ್ಲಿ ರಾಯಮ್ಮ ಜ್ಞಾನವನ್ನು ಆತ್ಮಜ್ಞಾನದ ಅರ್ಥದಲ್ಲಿ ಬಳಸುತ್ತಾಳೆ. ಜ್ಞಾನ ಮಾರಟಕ್ಕಿಟ್ಟ ವಸ್ತುವಲ್ಲ. ಅದು ತುಂಬ ಸರಳ ಸುಲಭವಾದದ್ದು ಅಲ್ಲ. ಜ್ಞಾನದ ತಳಹದಿಯ ಮೇಲೆ ಭಕ್ತಿಯಿದೆ. ಜ್ಞಾನ ಎನ್ನುವುದು ತನ್ನನ್ನು ತಾನು ಅರಿತು ನಡೆಯುವಂತಹದ್ದಾಗಿದೆ ಎಂದು ಜ್ಞಾನದ ಮಹತ್ವವನ್ನು ಎತ್ತಿ ತೋರಿಸಿದ್ದಾಳೆ.

ಜ್ಞಾನವನ್ನು ಪುರುಷರಿಗೆ ನಿರ್ದಿಷ್ಟಗೊಳಿಸಿದ ಕಾಲದಲ್ಲಿ ಈ ವಚನಕಾರ್ತಿಯರು ಜ್ಞಾನಕ್ಕಿದ್ದ ಲಿಂಗಭೇದ ಪ್ರವೃತ್ತಿಯನ್ನು ತೊಡೆದು ಹಾಕಿದರು. ಜ್ಞಾನವನ್ನು ಆಧ್ಯಾತ್ಮಿಕಾನುಭವದಲ್ಲಿ ಕ್ರಿಯೆ ಮತ್ತು ಅರಿವಿನ ಮೂಲವಾಗಿ ಸಕಾರಗೊಳಿಸಿದ್ದಾರೆ. ಎಲ್ಲಾ ಕೆಲಸಗಳಿಗೆ ಸ್ವಾಭಿಮಾನ, ಆತ್ಮಗೌರವವನ್ನು ಬಳಸಿಕೊಂಡು ತಮ್ಮ ವೃತ್ತಿ ಮತ್ತು ಸಮಾಜವನ್ನು ಜಾಗೃತಗೊಳಿಸುವ ಕೆಲಸ ಮಾಡಿದ್ದಾರೆ.

**ಸ್ವರವಚನ**

೧೨ನೇ ಶತಮಾನದಲ್ಲಿ ವಚನ ಸಾಹಿತ್ಯವನ್ನು ಹುಟ್ಟು ಹಾಕಿದ ಶರಣರು ದೇವಸ್ತುತಿಗಾಗಿ 'ಸ್ವರವಚನ' ಸಾಹಿತ್ಯವನ್ನು ಬೆಳೆಸಿದರು. ವಚನವೆಂಬುದು ಕೇವಲ ಬುದ್ಧಿವಂತಿಕೆಯ ಮಾತಾಗಿರದೆ ಅದು ಹೃದಯವಂತಿಕೆಯ ಮಾತಾಗಿದೆ. ಅಲ್ಲದೆ ವೈಚಾರಿಕತೆ ಇದೆ. ಆದರೆ ಸ್ವರವಚನಗಳಲ್ಲಿ ಗೇಯತೆ ಇದೆ. ವಚನ ಓದಿಸಿಕೊಳ್ಳುವ ಮತ್ತು ಹಾಡಿಸಿಕೊಳ್ಳುವ ಎರಡು ಸಾಧ್ಯತೆಗಳನ್ನು ಪಡೆದಿದ್ದರೆ ಸ್ವರವಚನ ಪ್ರಮುಖವಾಗಿ ಹಾಡಿನ ಪ್ರಮುಖ ಭಾಗವಾಗಿ ಕಂಡುಬರುತ್ತದೆ. ಶರಣರೆಲ್ಲರೂ ವಚನಗಳಲ್ಲಿ ಧಾರ್ಮಿಕ ವಿಷಯದ ಜೊತೆಗೆ ಕಾಯಕ ನಿಷ್ಠೆಯನ್ನು ಎತ್ತಿ ಹಿಡಿದು ಭಕ್ತಿ ಹಾಗೂ ಕಾಯಕ(ಕ್ರಿಯೆ) ಮೂಲಕ ವಚನ ಸಾಹಿತ್ಯವನ್ನು ಬೆಳೆಸಿದರೆ, ಸ್ವರವಚನ ಸಾಹಿತ್ಯ ಗೇಯ ಗುಣದಿಂದ ಜನ

ಸಂಪರ್ಕದ ಮಾಧ್ಯಮವಾಗಿ ಬೆಳೆದು ಭಕ್ತಿ–ಜ್ಞಾನ–ವೈರಾಗ್ಯ, ಗುರುಮಹಿಮೆ, ಸತಿ–ಪತಿಭಾವ, ಪಂಚಾಚಾರ ಷಟ್ಸ್ಥಲಗಳ ವಿವರ, ಸತ್ಯ, ನ್ಯಾಯ, ಅಹಿಂಸೆ, ಕಾಯಕ ಇವುಗಳ ಜೊತೆಗೆ ಜಾತಿ ಮತ ಪಂಥಗಳ ಡಂಭಾಚಾರ, ಮೂಢನಂಬಿಕೆ ಮೊದಲಾದ ಸಾಮಾಜಿಕ ಹಾಗೂ ನೈತಿಕ ಅಂಕುಡೊಂಕುಗಳನ್ನು ಖಂಡಿಸಿರುವ ಅಂಶಗಳು ಕಂಡುಬರುತ್ತವೆ. ಸಾಮಾಜಿಕ ಬದುಕಿಗಿಂತ ಭಿನ್ನವಾದ ಒಂದು ಬದುಕಿದೆ ಎಂದರಿತು ತನ್ನ ಉದ್ಧಾರದ ಜೊತೆಗೆ ಸಮಾಜವನ್ನು ಉದ್ಧರಿಸಿ ಜನತೆಗೆ ತಿಳುವಳಿಕೆ ಮೂಡಿಸುವ ಪ್ರಮುಖ ಪ್ರಯತ್ನ ಇಲ್ಲಿದೆ. ಹನ್ನೆರಡನೇ ಶತಮಾನದಲ್ಲಿ ಹಾಡುಗಳನ್ನು ಬರೆದ ಶಿವಶರಣರಲ್ಲಿ ಸಕಲೇಶ ಮಾದರಸ, ಬಸವೇಶ್ವರ, ಅಲ್ಲಮಪ್ರಭು ಚೆನ್ನಬಸವೇಶ್ವರ, ಸಿದ್ಧರಾಮ, ಅಕ್ಕಮಹಾದೇವಿ ನೀಲಲೋಚನೆ ಮೊದಲಾದವರು ಹಾಡುಗಳನ್ನು ರಚಿಸಿದ್ದಾರೆ. ಶರಣರಿಂದ ಪ್ರಾರಂಭಗೊಂಡ ಸ್ವರವಚನ ಸಾಹಿತ್ಯ ಪರಂಪರೆ ಮುಂದೆ ದಾಸರು, ನಿಜಗುಣ ಶಿವಯೋಗಿಗಳು ಮುಂದುವರಿಸಿಕೊಂಡು ಬಂದಿದ್ದಾರೆ.

ಸ್ವರವಚನಗಳು ಸಾಧಕನು, ಸಾಧನೆಯ ವ್ಯವಸ್ಥೆಯಲ್ಲಿರುವಾಗ ತನ್ನ ಇಷ್ಟ ದೈವದಲ್ಲಿ ತನ್ನ ಆಸೆ–ನಿರಾಸೆ–ನೋವು–ನಲಿವುಗಳನ್ನು ತೋಡಿಕೊಳ್ಳುವಾಗ, ಮನಸ್ಸಿನ ದುಃಖ ಭಾವನೆಗಳನ್ನು ಕಳೆಯಲೆಂದು ಪ್ರಾರ್ಥನೆಯ ರೂಪದಲ್ಲಿ ರಚನೆಯಾಗಿವೆ. ಸ್ವರವಚನಗಳ ಗುರಿ ಅಥವಾ ಉದ್ದೇಶ ಭಕ್ತನು ಪ್ರಾರ್ಥನೆಯ ಮೂಲಕ 'ತಾನು ತನ್ನನ್ನು ತೋಡಿಕೊಳ್ಳುವುದರ ಮೂಲಕ, ನಿವೇದಿಸಿಕೊಳ್ಳುವುದರ ಜೊತೆ ತನ್ನ ತಾನರಿದು ತಾನೇ ತಾನಾಗುವುದು' ಎಂಬ ವೀರಶೈವ ಸಿದ್ಧಾಂತದ ಆಶಯವನ್ನೊಳಗೊಂಡಿದೆ. ಕೇವಲ ತತ್ವ ಪ್ರತಿಪಾದನೆಯೇ ಮುಖ್ಯ ಗುರಿಯಾಗಿ, ಸಮಾಜಮುಖಿಯಾಗಿ ಗೊಡ್ಡು ಸಂಪ್ರದಾಯಗಳನ್ನು ಪರಾಮರ್ಶಿಸಿ ಹೊಸದೊಂದು ಆಯಾಮವನ್ನು ನೀಡುವಂತದ್ದಾಗಿದೆ.

ಸ್ವರವಚನಕಾರರು ಸಂಸಾರ ಜೀವನವು, ಜೀವನದ ವಾಸ್ತವ ಮತ್ತು ದೇಹ ವಾಸ್ತವದ ಕುರಿತು ಮಾತನಾಡಿದ್ದಾರೆ ಜೀವನ ಸತ್ಯದಿಂದ ದೂರ ಸರಿದು, ದೇಹ ಸತ್ಯವನ್ನು ಒಪ್ಪಿಕೊಂಡರು.

'ಎಚ್ಚರಲಿಂದ ಯಾಪಾರ ಮಾಡಣ್ಣ
ಯಾಪಾರದೋಳು ಇಹಪರವೆಂಬ ಖೂನವ ತಿಳಿಯಣ್ಣ'[೪೯]

ಎಂಬ ಮಾತಿನಲ್ಲಿ ಈ ಜೀವನ ಒಂದು ವ್ಯಾಪಾರ ಅದನ್ನು ಅತ್ಯಂತ ಎಚ್ಚರಿಕೆಯಿಂದ ಮಾಡಬೇಕೆಂದು ಹೇಳುತ್ತಾರೆ. 'ಅಂಬಿಗ ನಾ ನಿನ್ನ ನಂಬಿದೆ' ಎನ್ನುವ ಅಕ್ಕಮಹಾದೇವಿಯ ಸ್ವರವಚನ ಒಂದೇ ಹುಟ್ಟಿನಿಂದ ಬದುಕಿನ ದಡ ಸೇರಿಸು ಎನ್ನುವ ಅರ್ಥದಲ್ಲಿದೆ.

ಶರಣರ ಚಿಂತನೆ ಜೀವ–ಶಿವ–ಜಗತ್ತುಗಳ ಮೂಲಕ ಆಧ್ಯಾತ್ಮಿಕ ವಲಯದಲ್ಲಿ ಸಾಗಿದೆ. ಅಂತರಂಗ–ಬಹಿರಂಗದ ಶುದ್ಧತೆಯನ್ನು ಬಾಹ್ಯದೊಂದಿಗೆ ಸಮೀಕರಿಸಿಕೊಂಡು ಸಾಗಿದ್ದಾರೆ. ಆ ಜ್ಞಾನದ ಪರಿಶುದ್ಧ ಸ್ವರೂಪ ಅರಿವು, ಅರವಿನೊಳಗೆ ಕ್ರಿಯೆ. ಜ್ಞಾನ ಮತ್ತು ಕ್ರಿಯೆ ಎರಡೂ ಸೇರಿದರೆ ಅರಿವು ಉಂಟಾಗುತ್ತದೆ. ಲೌಕಿಕ ಬದುಕನ್ನು ಸ್ವೀಕರಿಸಿದರೂ, ಅದರ ಮೇಲೆ ಅತಿಯಾಗಿ ವ್ಯಾಮೋಹವಿರಿಸಿಕೊಳ್ಳದಂತೆ ತಿಳಿ ಹೇಳಲಾಗುತ್ತದೆ. ಕಾಯ ಸಹಜವಾದ ದೌರ್ಬಲ್ಯಗಳನ್ನು ಮೀರುತ್ತ ಬೆಳೆಯುವ ಬಗೆಯನ್ನು ಬೋಧಿಸುವುದು ಸ್ವರವಚನಗಳ ಗುರಿಯಾಗಿದೆ. ತನ್ನೊಳಗನ್ನು ತಾನೇ

ಕಂಡುಕೊಳ್ಳುವ, ಆತ್ಮ ವಿಮರ್ಶೆಯ ಮೂಲಕ ಸಮಾಜದ ಒಳಗಣ್ಣನ್ನು ತೆರೆಸುವಂತಹ ಧೋರಣೆಯುಳ್ಳದ್ದಾಗಿವೆ.

ಲೌಕಿಕ ಜ್ಞಾನ ಎಂದರೆ ಲೋಕದ ಪ್ರಯೋಜನಕ್ಕೆ ಬರುವಂತದ್ದು. ಪಾರಾಮಾರ್ಥಿಕ ಜ್ಞಾನ ಎಂದರೆ ಲೋಕದ ಆಚೆಗೆ ಬಯಲು ರೂಪದಲ್ಲಿರುವಂತದ್ದು. ಅನುಭಾವ ಸಾಹಿತ್ಯ ಹೆಚ್ಚು ಪರಾಮಾರ್ಥಿಕ ಜ್ಞಾನವನ್ನು ಅವಲಂಬಿಸಿರುವಂತದ್ದು.

ಅಲ್ಲಮನ ಪ್ರಾಣಲಿಂಗಿ ಗೀತೆ

'ನುಡಿಯು ಗಡಣದ ಬೆಳಗು ಮರುತ ಪರಿಮಳವಂತೆ
ಭಾವವಿಲ್ಲದ ಬಯಲು ಪರವು ತಾನೆ
ಅರಹು ಕುರುಹಿನ ಮರಹು ತೆರಹಿಲ್ಲದಾ ಘನವು
ನಿಂದ ನಿಜಪದದಿಂದ ಪ್ರಜೆಯಾಯಿತು॥ಪ॥
ಎಳೆಯ ಮಾಣಿಕದಂತೆ ಹೊಳೆವ ಜ್ಞಾನದ ಜ್ಯೋತಿ
ನವನಾಳದಲ್ಲಿ ಪ್ರಾಣಲಿಂಗ ಭರಿತ
ಪಿಂಡ ಬ್ರಹ್ಮಾಂಡವನು ಮೀರಿ ತೋರುವ ವಚನ
ಗಗನದುದಯದ ಮೇಲೆ ಘನಕೆ ಗಮನ'[೫೦]

ಉಜ್ವಲವಾದ ಜ್ಞಾನವನ್ನು ಅನುಭಾವದಲ್ಲಿ ಮೂರ್ತಗೊಳಿಸುವ ಈ ಗೀತೆ ಲೌಕಿಕರಿಗೆ ಅರ್ಥವಾಗುವುದು ಕಷ್ಟ. ಮಾನಸಿಕ ಸಿದ್ಧತೆಯೇ ಅನುಭಾವದ ಸ್ಥಿತಿ. ಬೌದ್ಧಿಕ ಶಾಂತಿಗಿಂತ ಅಂತರಂಗದ ಶಾಂತಿಗೆ ಪ್ರಾಧಾನ್ಯತೆ ನೀಡಿ ಬೌದ್ಧಿಕ ಮಿತಿಗಳನ್ನು ದಾಟಿ ಮುಂದುವರಿದಾಗ ಅನುಭಾವದ ಸ್ಥಿತಿ ದೊರೆಯುತ್ತದೆ. 'ಬಯಲು ಭಾನುವ ನುಂಗಿ, ನಿಲುವು ನೆಳಲನೆ ನುಂಗಿ' ಎನ್ನುವ ಚನ್ನಬಸವಣ್ಣ, ಅಲ್ಲಮನ ಬಯಲು ಕಲ್ಪನೆಯನ್ನೇ ಹೋಲುತ್ತದೆ. ಎಲ್ಲವನ್ನು ಒಳಗೊಂಡ ಬಯಲು ವಿವರಿಸಿದಷ್ಟು ವಿಸ್ತಾರವಾದ ಅರ್ಥವನ್ನು ಕೊಡುವ ಜ್ಞಾನದ ವಿಸ್ತಾರ, ಆಧ್ಯಾತ್ಮಿಕ ಸ್ಪರ್ಶವಾದಾಗ ಪೂರ್ಣ ಸ್ವರೂಪದ ಅರಿವಿನ ಅನುಭವವಾಗುತ್ತದೆ.

'ನೀರಿನ ಕೈಕಾಲು ಮುರಿದು
ಮಾರುತನ ತಲೆಯ ತರಿದು
ಮಾರಿದಗ್ನಿ ಕಿವಿ ಮೂಗು ಕೊಯ್ದು'[೫೧]

ಇಲ್ಲಿ ಭಕ್ತನ ಚಂಚಲ ಮನಸ್ಸು ವಿಕಾರವಾದ ಪ್ರಾಣ ಮಮಕಾರವೆಂಬುದನ್ನು ಕಿವಿ, ಮೂಗು ಸಂಕೇತವಾಗಿರಿಸಿಕೊಂಡು, ಇವುಗಳನ್ನು ನಾಶಪಡಿಸುವುದರ ಮೂಲಕ ತನ್ನನ್ನು ಸಲಹು ಎಂದು ತನ್ನ ದೈವದಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದಾರೆ. ಸಂಸಾರ ವಿಷಯದಲ್ಲಿ ಮುಳುಗಿದ ಚಂಚಲ ಮನಸ್ಸಿನ ಅಹಂಕಾರ, ದುರಭಿಮಾನಗಳೆಂಬ ಅಗ್ನಿಯ ಕಿವಿ, ಮೂಗು ಕೊಯ್ದು ಗುರುವಿನ ಕರುಣೆಯಿಂದ ಸಲಹುವಂತೆ ಬೇಡಿಕೊಳ್ಳುತ್ತಾನೆ. ಪಂಚಭೂತಗಳನ್ನು ಪಂಚೇಂದ್ರಿಯಗಳಿಗೆ ಹೋಲಿಸಲಾಗಿದೆ.

ಪಂಚೇಂದ್ರಿಯಗಳಿಂದ ಪ್ರೇರೇಪಣೆ ಪಡೆಯುವ ಅರಿಷಡ್ವರ್ಗಗಳನ್ನು ಶಮನಗೊಳಿಸುವುದು ಮುಖ್ಯವಾಗುತ್ತದೆ. ಏಕೆಂದರೆ ಮನುಷ್ಯನ ಮನಸ್ಸಿನ ಹತೋಟಿ ಮೀರಿ ನೆಡೆಯುವ ಅನಾಹುತಗಳು ವ್ಯಕ್ತಿಯನ್ನು ವಿವೇಕ ಶೂನ್ಯನನ್ನಾಗಿಸುತ್ತದೆ. ಯಾರು ತನ್ನ ಗುರಿಯನ್ನು ವಿಚಾರಗಳನ್ನು ಸ್ಪಷ್ಟವಾಗಿ ಅರಿತುಕೊಂಡಿರುವುದಿಲ್ಲವೋ ಅಂತಹ ವ್ಯಕ್ತಿತ್ವ ಇನ್ನೊಬ್ಬರಿಗೆ ಮಾರ್ಗದರ್ಶನ ಮಾಡಲು ಯೋಗ್ಯವಲ್ಲ. ವ್ಯಕ್ತಿ ಮೊದಲು ಮಾನವ ಕೇಂದ್ರಿತ ಕಾಳಜಿಯಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಮಾತ್ರ ತನ್ನ ಸುತ್ತಲಿನ ವ್ಯಕ್ತಿಗಳ ವ್ಯಕ್ತಿತ್ವವನ್ನು ಸರಿಯಾಗಿ ಅರ್ಥೈಸಲು ಸಾಧ್ಯವಾಗುತ್ತದೆ. ಪಂಚೇಂದ್ರಿಯ ಮತ್ತು ಮಲತ್ರಯಗಳ ನಡುವಿನ ತಿಕ್ಕಾಟ ಸಾಧನೆಯ ಮಾರ್ಗಕ್ಕೆ ಅಡ್ಡಿ ಎಂಬುದನ್ನು ತಿಳಿಸಿದ್ದಾರೆ.

ಸಮಾಜದ ನಡುಗೆ ಹುಟ್ಟಿದ ವರ್ಗೀಕರಣ ವ್ಯವಸ್ಥೆಯನ್ನು ಶರಣರು ಕಾಯಕದ ಮೂಲಕ ತೊಡೆದು ಹಾಕುವ ಪ್ರಯತ್ನ ಮಾಡಿದವರು. ಸಂಪತ್ತಿನ ಮೂಲಕ ಹುಟ್ಟುವ ಅಹಂಕಾರವನ್ನು ದಾಸೋಹ ಮಾಡುವ ಮೂಲಕ ಕಳೆದುಕೊಳ್ಳಬೇಕೆಂದಿದ್ದಾರೆ. ಗುರು ಲಿಂಗ ಜಂಗಮದ ಮೂಲಕ ದಾಸೋಹ ಜರುಗಬೇಕು. 'ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ' ಎಂದ ಶರಣರು ದುಡಿಮೆ ಮತ್ತು ಬದುಕುಗಳೆರಡೂ ಆಂತರಂಗಿಕ ವಿಕಾಸ ಸೂತ್ರದಿಂದ ನಿಯಂತ್ರಿತವಾಗಿರಬೇಕೆಂದಿದ್ದಾರೆ.

'ಧಾನಧರಮ ಗುಣವೊಂದ ನೀಡಿ
ಹರುಷದಿಂದ ನಲಿದಾಡಿ
ಜಂಗಮ ಬಂದಾನ ನೋಡಿ
ಇದ್ದಿಲ್ಲ ಅನಬ್ಯಾಡ ಖೋಡಿ
ಕಲ್ಲದೇವರ ಜಗಲಿಯ ಮಾಡಿ
ಹೋಳಿಗಿ ತುಪ್ಪ ಎಡಿಯ ಮಾಡಿ'[೫]

ನಮ್ಮ ಡಾಂಭಿಕ ಭಕ್ತಿಯನ್ನು ಈ ಸ್ವರವಚನ ಖಾರವಾಗಿಯೇ ವಿಡಂಬಿಸುವಂತಿದೆ. ನಾವು ಉಣಲಾರದ ಕಲ್ಲು ದೇವರಿಗೆ ಜಗುಲಿ ಮಾಡಿ ಹೋಳಿಗೆ ತುಪ್ಪ ನೈವೇದ್ಯ ಹಿಡಿಯುತ್ತೇವೆ. ಆದರೆ ಉಣ್ಣುವ ಜಂಗಮ ಬಂದರೆ ಮನೆಯ ಕದ ಹಾಕಿಕೊಳ್ಳುತ್ತೇವೆ. ಜಂಗಮ ಎಂಬುದು ಇಡೀ ಜಗತ್ತಿಗೆ ಅನ್ವಯವಾಗುವಂತದ್ದು. ಈ ಜಂಗಮಕ್ಕೆ ಅರ್ಪಿಸಿದ್ದು ಜಗತ್ತಿಗೆ ಸಲ್ಲುತ್ತದೆ. ಜಂಗಮನು ಯಾವ ಜಾತಿ, ಕುಲ ಪರಿಮಿತಿಗೂ ಬಂಧಿತನಾದವನಲ್ಲ. ಅದೊಂದು ಆಧ್ಯಾತ್ಮಿಕ ನಿಲವು ಆಗಿದೆ. ಇದ್ದು ಇಲ್ಲೆನ್ನುವ ಅನುಚಿತ ದ್ವಂದ್ವವನ್ನು ಖಂಡಿಸುತ್ತಾ ಧಾನ ಧರ್ಮಕ್ಕೆ ಅವಕಾಶ ಕೊಡಬೇಕೆಂದಿದ್ದಾರೆ. ಇಂತಹ ಅರಿವು, ಆಚಾರಗಳ ಮೂಲಕ ಅನುಭಾವದ ಹಂತಕ್ಕೆ ತಲುಪಬಹುದಾಗಿದೆ. ಪರೋಪಕಾರದಂತಹ ವಿಷಯಗಳು ಮೋಕ್ಷವನ್ನು ತಂದುಕೊಡುತ್ತವೆ. ಇಲ್ಲಿ ವ್ಯಕ್ತಿ ಮತ್ತು ಸಮಾಜಗಳೆರಡರ ಸುಖವನ್ನು ಅಭಿವ್ಯಕ್ತಿಸಿದಂತೆ ತೋರುತ್ತದೆ.

ಗುರು-ಲಿಂಗ-ಜಂಗಮ ಇವು ಕೇವಲ ಬಹಿರಂಗದ ಸಾಧನಗಳಲ್ಲ. ಆಂತರಿಕ ಅರಿವು ಬಹಿರಂಗ ರೂಪವನ್ನು ಪಡೆಯುವ ಸಂಕೇತಗಳಾಗಿವೆ. ಸಾಧಕನಿಗೆ ಲಿಂಗದೀಕ್ಷೆಯನ್ನಿತ್ತು. ಸಂಸ್ಕಾರ ನೀಡಿ ಸಾಧನೆಗೆ ತೊಡಗಿಸುವವನು ಗುರು. ಎಲ್ಲಾ ಸಾಧನೆಗೆ ಮೂಲ ಪ್ರೇರಣೆ ಗುರು.

'ಜ್ಯೋತಿ ಸೋಂಕಿನಿಂದಲಾದ
ಜ್ಯೋತಿಯಂತೆ ಗುರುಕೃಪೆಯೊಳು ಅ
ಜಾತನಾದ ಶಿಷ್ಯಗುರು ಮಹಾತ್ಮೆ ಹಿಡಿದು ಗುರುವಹ
ಪುರುಷ ಸೋಂಕಿನಿಂದ ಲೋಹ
ಪುರುಷ ಸೋಂಕಿ ಪರುಷವಹುದು
ಗುರುಪದಾಬ್ಜ ಸೋಂಕಿ ಗುರುಪದಸ್ಥನಹನು ಶಿಷ್ಯನು'[೨೩]

ಇಲ್ಲಿ ಗುರುವಿನ ಅವಶ್ಯಕತೆ, ಅನಿವಾರ್ಯತೆಯನ್ನು ಒತ್ತಿ ಹೇಳಲಾಗಿದೆ. ಗುರುವಿನ ಬೋಧನೆಯಿಂದ ಅವನ ಸಂಪರ್ಕದಿಂದ ಮಾತ್ರ ಶಿಷ್ಯನು ತನ್ನನ್ನು ತಾನು ಅರಿಯಲು ಸಾಧ್ಯ. ಜ್ಯೋತಿ ತನ್ನ ಒಂದು ಸ್ಪರ್ಶದಿಂದ ಹಲವಾರು ದೀಪಗಳನ್ನು ಬೆಳಗಿಸಿ ಕತ್ತಲೆ(ಅಜ್ಞಾನ)ಯನ್ನು ಕಳೆಯುವಂತೆ, ಶಿವಪಥವನ್ನು ಅರಿಯಲು ಗುರುವಿನ ಜ್ಞಾನದ ಸ್ಪರ್ಶ ಬೇಕು ಎಂಬ ಮಾತು ಭಾರತೀಯ ಧಾರ್ಮಿಕ ಶಿಕ್ಷಣದ ಅಂಶವನ್ನು ಇಲ್ಲಿ ಅನುಸರಿಸಲಾಗಿದೆ. ತಿಕ್ಕಿದಷ್ಟು ಹೊಳಪು ಎನ್ನವುಂತೆ ಗುರುವಿನ ಮಾರ್ಗದರ್ಶನದಿಂದ ಶಿಷ್ಯನು ಪರಿಪೂರ್ಣನಾಗಿ, ಗುರುಸಮವಾಗಿ ಬೆಳೆದು ನಿಲ್ಲುತ್ತಾನೆ. ಶಿಷ್ಯನ ಸಾಧನೆಯೇ ಗುರುವಿಗೆ ಕಾಣಿಕೆ.

'ಮಾನನಿಧಿಯೆ ಬಾರ ಮನದನ್ನ ಮತಿಸಾರ ಏನು ಕಾರಣ ಎನ್ನ ಎದೆಗೆಡಿಸುವರನ್ನಾ' ಸತಿ-ಪತಿ ಭಾವವನ್ನೊಳಗೊಂಡ ಈ ಸ್ವರವಚನ ಭಕ್ತನ ಅಂತರಾಳದಲ್ಲಿ ಹುದುಗಿದ ಪರಮಾತ್ಮನ ಕಾಣುವಿಕೆಯನ್ನು ಸೂಚಿಸುವುದರ ಜೊತೆಗೆ ಆತ್ಮ ಮತ್ತು ಪರಮಾತ್ಮನ ನಿಕಟ ಸಂಬಂಧವನ್ನು ಚಿತ್ರಿಸುತ್ತವೆ. ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ಪತಿ ಕಾಣದೆ ಇದ್ದಾಗ ಅವನ ಬರುವಿಕೆಗಾಗಿ ಕಾಯುವಂತಿರುವ ಈ ಸ್ವರವಚನ 'ಶರಣಸತಿ ಲಿಂಗಪತಿ' ಭಾವವುಳ್ಳದ್ದಾಗಿದೆ. ಸಾಧಕನ ಕೊನೆಯ ಗುರಿ ಪರಮಾತ್ಮನಲ್ಲಿ ಒಂದಾಗುವುದಾಗಿದೆ. ಈ ಸಾಮರಸ್ಯ ಹೊಂದಲು ಸಾಧಕನು ಕೈಗೊಳ್ಳಬೇಕಾದ ವಿಧಿ-ವಿಧಾನಗಳನ್ನು ಆಚರಿಸುವಲ್ಲಿ ಜೀವಾತ್ಮ-ಪರಮಾತ್ಮನಿಗಾಗಿ ಪರಿತಪಿಸುವ ಅಂಶ ಕಾಣುತ್ತದೆ.

ಸ್ವರವಚನಗಳು ಆಧ್ಯಾತ್ಮ ಜ್ಞಾನ, ಅರಿವು, ಗುರು-ಶಿಷ್ಯ, ಮಹಿಳೆ, ಸತಿಪತಿಭಾವ ಹಾಗೂ ಸಮಾಜದಲ್ಲಿನ ಅಂಕುಡೊಂಕುಗಳನ್ನು ತಾತ್ವಿಕ ವಿಚಾರಗಳನ್ನು ಹೇಳುತ್ತವೆ. ಇಲ್ಲಿ ಕೇವಲ ತತ್ವಪ್ರತಿಪಾದನೆಯನ್ನು ಮುಖ್ಯ ಗುರಿಯಾಗಿರದೆ, ಸಮಾಜಮುಖಿಯಾಗಿ ಭಜನೆ, ಅನುಭಾವ-ಪದ, ತತ್ವಪದ, ಕೈವಲ್ಯ-ಪದಗಳಾಗಿ ಬಳಕೆಗೊಂಡಿವೆ. ಆತ್ಮ ನಿವೇದನಾ ಪೂರ್ವಕವಾಗಿ, ಹಾಡಾಗಿ ಹೊರಹೊಮ್ಮಿದ ಸ್ವರವಚನಗಳಲ್ಲಿ ಭಕ್ತಿ ಅರಿವು, ಅನುಭಾವ, ಲಿಂಗಾಂಗ ಸಾಮರಸ್ಯದ ನಿರೂಪಣೆಗೆ ಮಹತ್ವದ ಸ್ಥಾನವಿರುವುದು ಕಂಡುಬರುತ್ತದೆ. ವ್ಯಕ್ತಿಕೇಂದ್ರಿತ ಪರಿವರ್ತನೆಯನ್ನು ಮೂಲವಾಗಿರಿಸಿಕೊಂಡು ವ್ಯಕ್ತಿಯು ತನ್ನ ಅಂತರಂಗ ಮತ್ತು ಬಹಿರಂಗದ ಬದುಕಿಗೆ ಬದ್ಧವಾಗಿರುವ ನಿಲುವುಗಳನ್ನು ಪ್ರಸ್ತುತಪಡಿಸಿವೆ.

ಹೀಗೆ ಸಮಾಜದಲ್ಲಿರುವ ಎಲ್ಲರಿಗೂ ಒಂದೇ ನೀತಿ-ನಿಯಮಗಳಿರಬೇಕೆಂಬುದು ಎಲ್ಲಾ ಪ್ರಜ್ಞಾವಂತರ ಅಭಿಪ್ರಾಯ. ಬೌದ್ಧಿಕ ಕ್ರಿಯೆ ಮತ್ತು ಆಧ್ಯಾತ್ಮಿಕ ಚಿಂತನೆಗಳ ಮೂಲಕ ಧರ್ಮ

ಸಮನ್ವಯವನ್ನು ಸಾಧಿಸುವ ಪ್ರಯತ್ನ ಮಾಡಿದ್ದಾರೆ. ವಾಸ್ತವಾಂಶಗಳಿಂದ ಕೂಡಿದ ಕ್ರಿಯಾ-ಕರ್ಮಗಳು ಬದುಕಿಗೆ ಹತ್ತಿರವಾಗುತ್ತವೆ. ಶುಷ್ಕ ಜ್ಞಾನ ಮಾದರಿಗಳು ತನ್ನನ್ನು ಅರಿಯಲು ನೆರವಾಗದೆ ಪ್ರತ್ಯೇಕವಾಗಿ ಉಳಿಯುತ್ತವೆ. ಬದುಕನ್ನು ದುಸ್ತರಕ್ಕೆ ತಳ್ಳುತ್ತವೆ. ಅದಕ್ಕೆ ಶುಷ್ಕಜ್ಞಾನಕ್ಕಿಂತ ಕ್ರಿಯಾ ಪ್ರಧಾನವಾದ ಅರಿವಿಗೆ ಹೆಚ್ಚಿನ ಒತ್ತು ಕೊಡಲಾಗಿದೆ.

ಪ್ರಾಪಂಚಿಕ ಹಳೆಯ ಜ್ಞಾನ ಮಾದರಿಗಳನ್ನು ಮುರಿದಿಕ್ಕಿ ಪುಸ್ತಕ, ಉತ್ತಮರ ಸೊತ್ತಾಗಬಾರದು, ಅದು ಪರಿಶ್ರಮದಿಂದ ಗಳಿಸುವಂತದ್ದು ಎಂಬ ವೈಚಾರಿಕ ಕ್ರಾಂತಿಗೆ ಕರೆಕೊಟ್ಟಿದ್ದಾರೆ. ವಿದ್ಯೆ ಎನ್ನುವುದು 'ಅಭ್ಯಾಸಿಗನ ಕೈವಶ' ಎಂದು ಹೇಳಿದ್ದಾರೆ. ಇದರಿಂದ ಲೌಕಿಕ ವಿದ್ಯೆಯೇ ನಿಜವಾದ ವಿದ್ಯೆ ಎನ್ನುವವರ ನಂಬಿಕೆಗೆ ಬೆಲೆ ಇಲ್ಲವಾಯಿತು. ಬದುಕನ್ನು ಲೌಕಿಕದಿಂದ ಅಲೌಕಿಕದತ್ತ ಸಾಗಿಸುವ ತಿಳುವಳಿಕೆ ಅವರಿಗಿತ್ತು. ಪುಸ್ತಕ ಒದಗಿಸುವ ವಿದ್ಯೆಗಿಂತ ಬದುಕು ಕಲಿಸುವ ಪಾಠ ಮುಖ್ಯವಾಗಿತ್ತು. ಪ್ರಯೋಗಶೀಲತೆಯಿಂದ ಜ್ಞಾನ ಬೆಳೆಯುತ್ತದೆಂಬ ಆತ್ಮವಿದ್ಯೆಯ ಅರಿವು ಇವರದಾಗಿದೆ. ತಮ್ಮ ಅನುಭವಗಳಿಗೆ ಮಾತಿನ ರೂಪ ಕೊಟ್ಟು ಆತ್ಮ ವಿಶ್ವಾಸ ತುಂಬುವ ಇವರ ಬದುಕಿನ ನಿಷ್ಠೆ ಇಂದಿಗೂ ನಮಗೆ ಮಾದರಿಯಾಗಿದೆ.

ಶರಣರು ಜ್ಞಾನವನ್ನು ಕ್ರಿಯಾಮೂಲವಾಗಿ ಗ್ರಹಿಸಿದವರು ಮತ್ತು ಅದರಂತೆ ಆಚರಿಸಿದವರು. ಔಪಚಾರಿಕವಾದ ನಿಯಮ ಬದ್ಧವಾದ ತಿಳುವಳಿಕೆಗಿಂತ ಅನೌಪಚಾರಿಕ ಹಾಗೂ ಆತ್ಮಾಭಿಮಾನದ ತಳಹದಿಯನ್ನಾಗಿ ಜ್ಞಾನವನ್ನು ಸ್ವೀಕರಿಸಿದ್ದಾರೆ. ಶರಣರಲ್ಲಿ ಜ್ಞಾನದ ಸಿದ್ಧಾಂತಗಳಿಗಿಂತ ಅವರ ಪ್ರಾಯೋಗಿಕ ಅಂಶಗಳಿಗೆ ಮೊದಲ ಆದ್ಯತೆ ಇದೆ. ಇಂತಹ ಕ್ರಿಯೆ ಮತ್ತು ಅರಿವು ಪ್ರಧಾನವಾದ ತಿಳುವಳಿಕೆಯನ್ನು ಶ್ರದ್ಧಾಮೂಲವಾಗಿ ದುಡಿಸಿಕೊಂಡಿದ್ದಾರೆ. ಜ್ಞಾನದ ಕೇಂದ್ರಿಕರಣ ಪ್ರವೃತ್ತಿಗಿಂತ, ವಿಕೇಂದ್ರೀಕರಣಕ್ಕೆ ಹೆಚ್ಚು ಒತ್ತು ಕೊಟ್ಟಿದ್ದನ್ನು ಕಾಣುತ್ತೇವೆ.

**ಅಡಿಟಿಪ್ಪಣಿ**

೧. ಜಯಶ್ರೀ ದಂಡೆ; ವಚನವಾಹಿನಿ-೨ ವಚನ-೪೧೦, ಪು.೯೦

೨. ವೀರಣ್ಣ ರಾಜೂರು; ಶಿವಶರಣೆಯರ ವಚನ ಸಂಪುಟ; ವ.೧೨೪೪, ಪು.೩೭೮

೩. ಹಿರೇಮಠ ಬಿ.ಆರ್; ಸಂಕೀರ್ಣ ಸಂಪುಟ-೨, ವಚನ-೯೮೪, ಪು.೩೩೪

೪. ಬಸವಣ್ಣನವರ ವಚನ ಸಂಪುಟ-೧; ೧೯೯೩, ಪು.೪೦

೫. ಕೋಟಿ ಎಸ್.ಜಿ; ಆರೂಢ ಸಂಪದ; ಪು.೩೯

೬. ನಾಗಭೂಷಣಸ್ವಾಮಿ ಓ.ಎಲ್; ವಚನವಾಹಿನಿ-೨, ವಚನ ಸಾಹಿತ್ಯ-೩೬೦, ಪು.೮೧

೭. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ೨೦೧೪; ವಚನ-೯೧೪, ಪು.೨೭೦

೮. ಕಲಬುರ್ಗಿ ಎಂ.ಎಂ; ಸಂಕೀರ್ಣ ವಚನ ಸಂಪುಟ-೧; ವಚನ-೧೫೪೨, ಪು.೫೬೨

೯. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ೨೦೧೪; ವಚನ-೯೩೨, ಪು.೨೭೬

೧೦. ನಾಗಭೂಷಣಸ್ವಾಮಿ ಓ.ಎಲ್; ವಚನ-೩೨೦, ಪು.೯೩

೧೧. ಜಯಶ್ರೀ ದಂಡೆ; ವಚನ ವಾಹಿನಿ-೪; ಪು.೮೦

೧೨. ಹೆಗಡೆ ಜಿ.ಎಂ; ವಚನ ವಾಹಿನಿ-೬; ಪು.೪೫, ಸಾಹಿತ್ಯ-೧೫೩
೧೩. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ೨೦೧೪; ವಚನ-೯೦, ಪು.೨೭
೧೪. ಚಂದ್ರಶೇಖರ ವಸ್ತ್ರದ; ವಚನ ವಾಹಿನಿ-೯; ಪು.೫೭
೧೫. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ ವಚನ ಸಂಖ್ಯೆ-೪೪೨, ಪು.೧೩೧
೧೬. ಜಯಶ್ರೀ ದಂಡೆ; ವಚನವಾಹಿನಿ-೪, ಪು.೪೩, ವಚನ-೧೯೦
೧೭. ವೀರಣ್ಣ ರಾಜೂರು; ಶಿವಶರಣೆಯರ ವಚನ ಸಂಪುಟ, ವಚನ-೧೧೭೬, ಪು.೩೫೦
೧೮. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ೨೦೧೪; ವಚನ-೯೫, ಪು.೨೮
೧೯. ನಾಗಭೂಷಣಸ್ವಾಮಿ ಓ.ಎಲ್; ವಚನ ಸಂಖ್ಯೆ-೭೨೨, ಪು.೨೧೫
೨೦. ವೀರಣ್ಣ ರಾಜೂರು; ಶಿವಶರಣೆಯರ ವಚನ ಸಂಪುಟ, ವಚನ-೧೨೯೮, ಪು.೩೯೬
೨೧. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ವಚನ ಸಂಖ್ಯೆ-೮೧೧, ಪು.೨೪೧
೨೨. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ವಚನ ಸಂಖ್ಯೆ-೧೦೭, ಪು.೩೧
೨೩. ನಾಗಭೂಷಣಸ್ವಾಮಿ ಓ.ಎಲ್; ವಚನ ವಾಹಿನಿ-೨, ಪು.೭೦
೨೪. ನಾಗಭೂಷಣಸ್ವಾಮಿ ಓ.ಎಲ್; ವಚನ ಸಂಖ್ಯೆ-೧೦೭, ಪು.೨೭, ವಚನ ಸಾವಿರ;೨೦೧೪
೨೫. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ವಚನ ಸಂಖ್ಯೆ-೯೭, ಪು.೫೭
೨೬. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ; ವಚನ ಸಂಖ್ಯೆ-೨೬೫, ಪು.೭೭
೨೭. ನಾಗಭೂಷಣಸ್ವಾಮಿ ಓ.ಎಲ್; ವಚನ ವಾಹಿನಿ-೨, ಪು.೪೫
೨೮. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ; ವಚನ ಸಂಖ್ಯೆ-೨೭, ಪು.೯
೨೯. ನಾಗಭೂಷಣಸ್ವಾಮಿ ಓ.ಎಲ್; ವಚನ ಸಂಖ್ಯೆ-೫೪೧, ಪು.೧೬೦
೩೦. ನಾಗಭೂಷಣಸ್ವಾಮಿ ಓ.ಎಲ್., ವಚನ ಸಂಖ್ಯೆ-೨೪, ಪು.೮
೩೧. ನಾಗಭೂಷಣಸ್ವಾಮಿ ಓ.ಎಲ್., ವಚನ ಸಂಖ್ಯೆ-೩೩೦, ಪು.೯೬
೩೨. ಕೊಪ್ಪ ಎಸ್.ಬಿ; ವಚನವಾಹಿನಿ-೮, ವಚನ ಸಂಖ್ಯೆ-೨೯೧, ಪು.೧೦೭
೩೩. ವೀರಣ್ಣ ರಾಜೂರು; ಶಿವಶರಣೆಯರ ವಚನ ಸಂಪುಟ, ಪು.೩೨೧, ವಚನ-೧೦೮೯
೩೪. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ವಚನ ಸಂಖ್ಯೆ-೩೩೦, ಪು.೯೭
೩೫. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ; ವಚನ ಸಂಖ್ಯೆ-೪೮೭, ಪು.೧೪೧
೩೬. ವೀರಣ್ಣ ರಾಜೂರು; ಶಿವಶರಣೆಯರ ವಚನ ಸಂಪುಟ, ಪು.೨೪೧, ವಚನ-೭೬೮
೩೭. ಅದೇ, ವಚನ ಸಂಖ್ಯೆ-೬೮೬, ಪು.೨೦೫
೩೮. ಜಯಶ್ರೀ ದಂಡೆ; ವಚನ ವಾಹಿನಿ-೪, ವಚನ-೧೨೯, ಪು.೨೯
೩೯. ಅದೇ; ವಚನ ಸಂಖ್ಯೆ-೫೮೪, ಪು.೧೭೩
೪೦. ಅದೇ; ವಚನ ಸಂಖ್ಯೆ-೩೦೮, ಪು.೯೦

೪೧. ಅದೇ; ವಚನ ಸಂಖ್ಯೆ-೭೭೮, ಪು.೨೩೧

೪೨. ಅದೇ; ವಚನ ಸಂಖ್ಯೆ-೮೮೯, ಪು.೨೬೩

೪೩. ಕೊಪ್ಪ ಎಸ್.ಬಿ. ಮತ್ತು ಪ್ರಭುಸ್ವಾಮಿಮಠ ಸಿ.ವಿ; ವಚನವಾಹಿನಿ-೮, ಪು.೯

೪೪. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ, ವಚನ ಸಂಖ್ಯೆ-೧೦೧೧, ಪು.೩೦೧

೪೫. ನಾಗಭೂಷಣಸ್ವಾಮಿ ಓ.ಎಲ್; ವಚನ ಸಾವಿರ; ವಚನ ಸಂಖ್ಯೆ-೧೨೩, ಪು.೩೫

೪೬. ನಾಗಭೂಷಣಸ್ವಾಮಿ ಓ.ಎಲ್; ವಚನ ಸಂಖ್ಯೆ-೩೧೨, ಪು.೯೧

೪೭. ಕಲಬುರ್ಗಿ ಎಂ.ಎಂ; ಸಂಕೀರ್ಣ ವಚನ ಸಂಪುಟ-೧; ೩೯೧, ಪು.೧೨೭

೪೮. ಗಂಗಮ್ಮ ಸತ್ಯಪೇಟೆ; ವಚನ ವಾಹಿನಿ-೫, ವಚನ-೧೬೯, ಪು.೪೯

೪೯. ನಾಗರಾಜ ಎಂ; ವಚನ ಬೆಳಗು, ಪು.೧೦

೫೦. ಮಲ್ಲಾಪುರ ಬಿ.ವಿ; ಅಲ್ಲಮ ಪ್ರಭುದೇವರ ವಚನ ಸಂಪುಟ-೨, ಪು.೫೩

೫೧. ಶಿವಣ್ಣ ಎಸ್; ಸ್ವರವಚನ ಸಂಪುಟ-೧, ಪು.೪

೫೨. ಭಾನುಮತಿ ವೈ.ಸಿ; ಸ್ವರವಚನ ಸಂಪುಟ-೪

೫೩. ಶೇಷಗಿರಿ ಕೆ.ಆರ್; ಸ್ವರವಚನ ಸಂಪುಟ-೫

## ಅಧ್ಯಾಯ ಐದು
## ಕೀರ್ತನೆ ಸುಳಾದಿ ಉಗಾಭೋಗಗಳಲ್ಲಿ ಜ್ಞಾನದ ಪರಿಕಲ್ಪನೆ

ಕರ್ನಾಟಕದ ಸಾಂಸ್ಕೃತಿಕ ಪರಿಸರದಲ್ಲಿ ಶರಣ ಸಾಹಿತ್ಯದಂತೆಯೇ ಆಧ್ಯಾತ್ಮದ ಅನುಭವದ ಅಭಿವ್ಯಕ್ತಿಯಾಗಿ ದಾಸ ಸಾಹಿತ್ಯ ಮೂಡಿಬಂದಿದೆ. ವಚನಕಾರರ ನಂತರ ಸಾಮಾಜಿಕ ಕಾಳಜಿಯುಳ್ಳ ಸಾಹಿತ್ಯಕ್ಕೆ ಸಾಮಾಜಿಕ ಸ್ವರೂಪ ಸಿಕ್ಕಿದ್ದು ಹರಿದಾಸರ ಕಾಲದಲ್ಲಿಯೇ ಎಂಬುದು ಮುಖ್ಯವಾದ ಅಂಶ. ಸಂಸ್ಕೃತದಲ್ಲಿದ್ದ ಜ್ಞಾನ ಸಾಮಗ್ರಿಯನ್ನು ಜನಸಾಮಾನ್ಯರಿಗೆ ಒದಗಿಸಬೇಕೆಂಬ ಹಂಬಲವೇ ದಾಸ ಸಾಹಿತ್ಯಕ್ಕೆ ಪ್ರೇರಣೆಯಾಗಿದೆ.

ದಾಸಸಾಹಿತ್ಯದ ಪ್ರಮುಖ ವೈಶಿಷ್ಟ್ಯವೆಂದರೆ ಭಕ್ತಿ. ಇಲ್ಲಿ ಭಕ್ತಿಯೆಂಬುದು ಕೇವಲ ವ್ಯಕ್ತಿಗತ ವಿಷಯವಾಗಿ ಉಳಿಯದೆ. ಅದು ಸಮುದಾಯದ ಸ್ಥಿತಿಯಾಗಿ, ಬದುಕಿನ ರೀತಿಯಾಗಿ, ಅರಿವಿನ ಬೆಳಕಾಗಿ ಮೂಡಿಬಂದಿದೆ. ಈ ಭಕ್ತಿ ಸಾಹಿತ್ಯ ಕರ್ಮ, ಜ್ಞಾನ ಮತ್ತು ಭಕ್ತಿ ಈ ಮೂರು ಗುಣಗಳಿಂದ ಭಗವಂತನನ್ನು ಸೇರಲು ಸುಲಭ ಮಾರ್ಗ ಎಂಬುದನ್ನು ಕಂಡುಕೊಂಡಿತ್ತು. ಸಂಪ್ರದಾಯವಾದಿಗಳು ಭಕ್ತಿಯಲ್ಲಿಯೇ ಕರ್ಮ ಮತ್ತು ಜ್ಞಾನವನ್ನು ಅಂತರ್ಗತಗೊಳಿಸಿದರಿಂದ ಇಲ್ಲಿ ವೈದಿಕ ಧಾರ್ಮಿಕ ಚಿಂತನೆಗಳು ಮೇಲುಗೈ ಪಡೆದಿವೆ. ಸೂಕ್ಷ್ಮವಾಗಿ ಪರಿಶೀಲಿಸಿದಾಗ ಭಕ್ತಿಯೂ ಫಲಾಪೇಕ್ಷೆಯಾದದ್ದೆ ಆಗಿದೆ. 'ಜ್ಞಾನಕ್ಕೆ ಎಲ್ಲವೂ ಕಾಣಿಸುವುದೇ ಫಲವು, ಏನು ಬೇಡಿದ್ದು ಒದಗುವುದೇ ಭಕ್ತಿಯ ಫಲ' ಎಂದ ಗೋಪಾಲದಾಸರು ಭಕ್ತಿಯಿಂದ ಮುಕ್ತಿಯನ್ನು ನಿರಾಕರಿಸಿ, ಶುದ್ಧ ಭಕ್ತಿಯನ್ನು ಮಾತ್ರ ಹೇಳುತ್ತಾರೆ.

ಕೀರ್ತನೆ, ಸುಳಾದಿ, ಉಗಾಭೋಗ ಪ್ರಕಾರಗಳಲ್ಲಿ ಹುಟ್ಟಿದ ದಾಸ ಸಾಹಿತ್ಯ, ಹರಿಸ್ತುತಿಯ ಮೂಲಕ ಬುದ್ಧಿ, ಹೃದಯಗಳನ್ನು ಸಂಸ್ಕರಿಸುವಂತದ್ದಾಗಿದೆ. ಲೋಕಸತ್ಯದ ಸಾರ್ವತ್ರಿಕ ಹಿನ್ನೆಲೆಯಲ್ಲಿ ಭಕ್ತಿ, ದೇವರುಗಳ ಬಗ್ಗೆ ಆತ್ಮನಿಷ್ಠ ಬಯಕೆಗಳನ್ನು ತೋಡಿಕೊಳ್ಳುವ ಮೂಲಕ, ಮಾನವನ ಚಿತ್ತ ಚಾಂಚಲ್ಯವೇ ಅವನ ಎಲ್ಲಾ ತೊಂದರೆಗಳಿಗೆ ಕಾರಣ ಎಂಬುದನ್ನು ತಮ್ಮ ಲೋಕಾನುಭವದಿಂದ ಕಂಡುಕೊಂಡಿದ್ದಾರೆ. ಲೋಕಸಂಚಾರದಿಂದ ಉಂಟಾದ ಅರಿವಿನ ಮೂಲಕ ಐಹಿಕ ಜೀವನದಲ್ಲಿ ಉನ್ನತ ಸ್ಥಾನ ದೊರಕಿಸುವ, ಜೀವನ ಸಮಸ್ಯೆಗಳನ್ನು ಪರಿಹರಿಸುವ ಉದ್ದೇಶ ಇವರದಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ಧರ್ಮದ ಹೆಸರಿನಲ್ಲಿ ನಡೆಯುವ ಸುಲಿಗೆಗಳು ಸಮಾಜದ ಪ್ರಗತಿಗೆ ವಿರೋಧವಾಗಿಯೇ ಇರುತ್ತವೆ. ಧಾರ್ಮಿಕ ಮುಖಂಡರು ತಮ್ಮ ಅಧಿಕಾರಕ್ಕೆ ಚ್ಯುತಿಬಾರದಂತೆ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಜನಸಾಮಾನ್ಯರನ್ನು ಕೂಪಮಂಡೂಕಗಳನ್ನಾಗಿಸಿದೆ.

ವಿದ್ಯಾಭ್ಯಾಸದ ವಿಷಯದಲ್ಲೂ ಇದೇ ನೀತಿಯನ್ನು ಅನುಸರಿಸಲಾಗಿದೆ. ಕೇವಲ ವೇದಶಾಸ್ತ್ರಾದಿ ಗ್ರಂಥಗಳನ್ನು, ಓದಿನಿಂದ ಉಂಟಾದ ತೋರಿಕೆಯ ಸಂಸ್ಕಾರವನ್ನು, ಪಾಂಡಿತ್ಯವನ್ನು ಅಲ್ಲಗಳೆದ ದಾಸರು, ಶ್ರದ್ಧೆ ಜ್ಞಾನಗಳಿಗೆ ತಮ್ಮನ್ನೆ ಕ್ರಿಯಾರೂಪದಲ್ಲಿ ಒಡ್ಡಿಕೊಂಡು, ಅಂತಹ ಬಾಳಿನ ಮೂಲಕ ಲೋಕದಲ್ಲಿ ಸಾರ್ಥಕವಾಗಿ ಬದುಕುವುದನ್ನು ತೋರಿಸಿಕೊಟ್ಟರು. ಆದರೆ, ಕೇವಲ ಪಾರಮಾರ್ಥಿಕವನ್ನಾಗಲಿ, ಐಹಿಕವನ್ನಾಗಲಿ ಬೋಧಿಸಿದವರಲ್ಲ. ಎರಡೂ ಶಕ್ತಿಗಳನ್ನು ಸಾಮರಸ್ಯಗೊಳಿಸಿ ಬದುಕುವ ಕಲೆ(ಜಾಣ್ಮೆ)ಯನ್ನು ಕಲ್ಪಿಸಿಕೊಟ್ಟಿದ್ದಾರೆ.

'ಪುರಾಣ ಹೇಳು ಪುಂಡ
ಅವ ಮಧ್ಯದ ಹರವಿಯಕೊಂಡ
ಮುಂದುಗಾಣದೆ ಮೋಕ್ಷವ ಬೊಗಳುವ
ಬರಿಯ ಮಾತಿನ ಭಂಡ'[೧]

'ವೇದಶಾಸ್ತ್ರ ಶಬ್ದ ತರ್ಕ, ಮೀಮಾಂಸೆಗಳ
ಓದಿದವನಲ್ಲ ನಿನ್ನಯ ಭಕ್ತಿಗಧಿಕ
ವಾದ ಇನ್ನೊಂದದೇ ನನುಸಿರುವೆನು ನಾ ಮುನ್ನ ಸಂ
ಪಾದಿಸುವ ಭಕುತಿ ಇನ್ನೆಂತಿಹುದೊ ಜೀವ'[೨]

ಎಂದು ಶರಣರಂತೆ, ದಾಸರು ಶಾಸ್ತ್ರ ಪ್ರಮಾಣದ ವಿದ್ವತ್ತನ್ನು ತೀವ್ರವಾಗಿ ವಿರೋಧಿಸಿದ್ದಾರೆ. ಬ್ರಹ್ಮಜ್ಞಾನದ ವಿದ್ಯೆಯಷ್ಟೇ ಜ್ಞಾನವಲ್ಲ ಎಂಬುದು ಇಂತಹ ವಿದ್ಯೆಯ ಆಕರಗಳ ವಿರೋಧಕ್ಕೆ ಕಾರಣವಾಗಿದೆ. ಹರಿದಾಸರಿಗೆ ಬ್ರಹ್ಮವಿದ್ಯೆಯ ಅನುಭವಕ್ಕಿಂತ, ಬ್ರಹ್ಮಸಾಧನೆಯ ಅನುಭಾವ ದೊಡ್ಡದು. ನಾವು ಗಳಿಸುವ ವಿದ್ಯೆ ನಮ್ಮ ಉಪಜೀವನಕ್ಕೆ ಮಾತ್ರ. ಆದರೆ ಸಾಧನೆ ಎಂಬುದು ಆತ್ಮ ಸಾಕ್ಷಾತ್ಕಾರಕ್ಕೆ ಸಂಬಂಧಿಸಿದ್ದಾಗಿದೆ. ಇಲ್ಲಿ ಪುಸ್ತಕದ ಓದಿಗಿಂತ, ಸಾಧನೆ ಮುಖ್ಯವಾಗಿದೆ. ವೈದಿಕರಾಗಲೀ, ಶೂದ್ರರಾಗಲಿ, ಶಾಸ್ತ್ರ ವಿದ್ಯೆಗಳನ್ನೆಲ್ಲಾ ಅಲ್ಲಗಳೆದರೆಂದರೆ, ಸಂಪೂರ್ಣವಾಗಿ ತೊರೆದರು ಎಂದಲ್ಲ, ಅವುಗಳನ್ನು ತಮ್ಮ ಸಾಧನೆಗೆ ಮಾಧ್ಯಮವನ್ನಾಗಿಸಿಕೊಂಡರು. ಸಂಪ್ರದಾಯವಾದಿಗಳು ಜ್ಞಾನ ಮತ್ತು ಕರ್ಮ ಮಾರ್ಗದಿಂದ ಸಾಧನೆ ಮಾಡಿದರು. ಶೂದ್ರರಿಗೆ ವೃತ್ತಿ ಬದುಕು ಮತ್ತು ಆಧ್ಯಾತ್ಮಿಕ ಸಾಧನೆ ಭಿನ್ನವಾಗಿರದೆ, ವೃತ್ತಿ ಸಾಧನೆಯಲ್ಲಿಯೇ ಆಧ್ಯಾತ್ಮಿಕ ಸಾಧನೆಯನ್ನು ಕಂಡುಕೊಂಡರು.

'ಗಂಗಾದಿ ತೀರ್ಥ ಫಲಂಗಳನೀವುದು–ಹರಿಯನಾಮ
ಹಿಂಗದೆ ಜನರಿಗೆ ಮಂಗಳವೀವುದು–ಹರಿಯನಾಮ ॥ಪ॥
ವೇದಶಾಸ್ತ್ರಂಗಳ ಅರಿಯದ ಜನರಿಗೆ ಹರಿಯನಾಮ ಜಗ
ದಾದಿಪುರುಷನನು ಪೂಜಿಸಿದವರಿಗೆ ಹರಿಯನಾಮ
ಸಾಧಿಸುವೆವು ಪರವೆಂಬಂಥ ಜನರಿಗೆ ಹರಿಯನಾಮ
ಶೋಧಿಸಿ ಇಟ್ಟ ಚಿನ್ನದ ಗಟ್ಟಿ ಕಾಣಿರೊ ಹರಿಯನಾಮ

ಸ್ನಾನ ಜಪಂಗಳ ಸಾಧಿಸಿದವರಿಗೆ ಹರಿಯನಾಮ
ದಾನಧರ್ಮಕೆ ಒದಗದ ಮನುಜರಿಗೆ ಹರಿಯನಾಮ
ಧ್ಯಾನವೊಂದರಿಯದ ಮೂಢಾತ್ಮ ಜನರಿಗೆ ಹರಿಯನಾಮ
ಮನುಷ್ಯ ಜನ್ಮವ ಪಾವನ ಮಾಡುವುದು ಹರಿಯನಾಮ'[೩]

ಜ್ಞಾನವರಿಯದ ಮೂಢಾತ್ಮರಿಗೆ 'ಶ್ರೀಹರಿಯ ನಾಮ' ಎಂದು 'ಹರಿನಾಮಸ್ಮರಣೆ'ಯನ್ನು ಶಾಸ್ತ್ರಜ್ಞಾನಕ್ಕೆ, ಮೋಕ್ಷಕ್ಕೆ ಸಮಾನ, ಬ್ರಹ್ಮ ವಿದ್ಯೆಗೆ ಸಮಾನವೆಂದು ಹೇಳಿತು. ಇಂತಹ ಧಾರ್ಮಿಕ ನಂಬಿಕೆಗಳು ಶೂದ್ರರು ವಿದ್ಯೆಗಳಿಸದಂತೆ ತಡೆಯುವ ಮತ್ತು ಅವರನ್ನು ನಿಯಂತ್ರಿಸುವ ತಂತ್ರವೂ ಆಗಿರಬಹುದು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ದೌರ್ಜನ್ಯಗಳು, ಅತಿಯಾದ ಅಂಧಶ್ರದ್ಧೆ ಅನಕ್ಷರಸ್ಥರನ್ನಷ್ಟೇ ಅಲ್ಲ, ವಿದ್ಯಾವಂತ ವೈದಿಕ ವರ್ಗವನ್ನು ಧರ್ಮಾಚರಣೆಯಿಂದ ದೂರ ಉಳಿಯುವಂತೆ ಮಾಡಿತು. ಸದಾ ಲೋಕದ ಬದುಕನ್ನು ಅಸ್ಥಿರ ಎಂದು ವಿರಕ್ತಿಯನ್ನು ಬೋಧಿಸಿದ ಧರ್ಮ ಎಲ್ಲವನ್ನು ಕಳೆದುಕೊಂಡು ನಿರ್ಗತಿಕರನ್ನಾಗಿಸಿತು. ಧಾರ್ಮಿಕ ಮೌಲ್ಯಗಳು ಜನರನ್ನು ಹಿಂಸಿಸತೊಡಗಿದವು. ಬ್ರಾಹ್ಮಣರು ಧಾರ್ಮಿಕ ವಿದ್ಯೆಯನ್ನು ಲೌಕಿಕ ವಿದ್ಯೆಯನ್ನಾಗಿ ಪರಿವರ್ತಿಸಿ, ಲೌಕಿಕದಲ್ಲಿಯೇ ಧಾರ್ಮಿಕ ಜೀವನವನ್ನು ನಡೆಸುವ ತಂತ್ರವನ್ನು ಅಳವಡಿಸಿಕೊಂಡು, ಅಕ್ಷರ ಜ್ಞಾನದಿಂದ ವಿದೇಶಿಗಳ ಆಡಳಿತದಲ್ಲಿ ಆಶ್ರಯ ಪಡೆದುಕೊಂಡರು. ವಿದೇಶಿಯರ ಸಂಸ್ಕೃತಿಯನ್ನು ಒಪ್ಪಿಕೊಂಡ ವೈದಿಕ ವರ್ಗ, ದೇಶಿಯತ ಸಂಸ್ಕೃತಿಯನ್ನು ಮಾನ್ಯ ಮಾಡಲಿಲ್ಲ. ಅವರನ್ನು ಶಾಶ್ವತವಾಗಿ ಧಾರ್ಮಿಕ ಜೀತದಾಳುಗಳನ್ನಾಗಿ ಮಾಡಿತು. ಅದಕ್ಕೆ ನಾಮಸ್ಮರಣೆಯನ್ನೇ ಮುಕ್ತಿಯ ಸಾಧನ ಎಂದು ಹೇಳಿ, ವರ್ಣವ್ಯವಸ್ಥೆಯಲ್ಲಿಯೇ ಉಳಿಯುವ ಹುನ್ನಾರ ರೂಪಿಸಿತು.

'ಶ್ರುತಿಶಾಸ್ತ್ರ ಪುರಾಣಗಳ ಓದುವನೆ ಶೂದ್ರ
ಅತಿಥಿಗಾದರಿಸುವವನೆ ಅತಿಲುಬ್ಧನು
ಪ್ರತಿದಿವಸ ಸಂಧ್ಯಾನವನು ಮಾಡುವನೆ ಪಾಪಿ
ಪತಿಯಾಜ್ಞೆಯಿಂದಿಹಳೆ ಪರಮಪಾತಕಿಯು'[೪]

ಒಂದೆಡೆ ಲೋಕದ ವ್ಯವಹಾರದ ಬಗ್ಗೆ ರೋಷ, ಇನ್ನೊಂದೆಡೆ ವ್ಯಕ್ತಿತ್ವವನ್ನು ರೂಪಿಸಿಕೊಳ್ಳು ಬೇಕಾದ ಮಾರ್ಗದರ್ಶನ ಏಕಕಾಲದಲ್ಲಿ ಎರಡು ಆಶಯಗಳನ್ನು ವಿಡಂಬನಾ ಶೈಲಿಯಲ್ಲಿ ಕನಕದಾಸರು ಹೇಳಿದ್ದಾರೆ. ಪ್ರತಿಯೊಬ್ಬನ ವ್ಯಕ್ತಿತ್ವ ವಿಕಸನಗೊಳ್ಳುವುದು ಅವನ ಸ್ವಭಾವ ಮತ್ತು ನಡುವಳಿಕೆಗಳಿಂದ. ಆದರೆ ಮಹತ್ವಾಕಾಂಕ್ಷಿಯಾದ ಮನುಷ್ಯ ಆಸೆಯ ಬೆನ್ನು ಹತ್ತುವನು. ಜಗತ್ತಿನಲ್ಲಿರುವುದೆಲ್ಲಾ ತನ್ನದಾಗಬೇಕೆಂಬ ಅಪೇಕ್ಷೆಯಿಂದ ತನಗರಿವಿಲ್ಲದಂತೆಯೇ, ಸಂಯಮರಹಿತನಾಗಿ ದುಷ್ಕರ್ಮಿಯಾಗುತ್ತಾನೆ. ಕೆಲವೊಮ್ಮೆ ಅಧಃಪತನಕ್ಕಿಳಿದು ವ್ಯಕ್ತಿತ್ವನಾಶದ ಕಡೆಗೆ ಸಾಗುತ್ತಾನೆ.

ಭಾರತದಂತಹ ಬಹುಸಂಸ್ಕೃತಿಯ ನಾಡಿನಲ್ಲಿ ಬ್ರಾಹ್ಮಣರಾಗಿದ್ದು, ಬ್ರಾಹ್ಮಣ್ಯದಿಂದ ದೂರವಾದ ಎಷ್ಟೋ ಜನರು, ಶೂದ್ರರ ಮನೆಯ ಮಗನಾಗಿ ಸಂಬಂಧ ಬೆಸೆದುಕೊಂಡ ಸತ್ಯಗಳು ನಮ್ಮ ಬದುಕಿನ ಮೌಲ್ಯಗಳಾಗಿ ಉಳಿದಿಲ್ಲ. ಇಂತಹ ಬೌದ್ಧಿಕ ಶಕ್ತಿಗಳನ್ನು, ಕರ್ಮಸಿದ್ಧಾಂತಗಳಿಂದ ಕಟ್ಟಿಹಾಕುವುದು

ಅಸಾಧ್ಯವಾದಾಗ ಅವರನ್ನು ತಿರಸ್ಕಾರದಿಂದ ಕಂಡದ್ದಲ್ಲದೆ, ಅವರಿಂದ ಸಮಾಜಕ್ಕೆ ಸಿಗಬಹುದಾಗಿದ್ದ ಕೊಡುಗೆಯನ್ನು ಬಳಸಿಕೊಳ್ಳದೆ, ಇನ್ನಿಲ್ಲವಾಗಿಸಿದ್ದು ಬೌದ್ಧಿಕ ನಷ್ಟವಾಗಿದೆ. ನಿಜವಾದ ಜ್ಞಾನವುಳ್ಳವರು ಜಾತಿ ಮೂಲದಲ್ಲಿ ಶಿಷ್ಯರನ್ನು ಹುಡುಕಿಕೊಳ್ಳುವುದಿಲ್ಲ. ಕಬೀರನಿಗೆ ಗುರುವಾಗಿದ್ದ ರಮಾನಂದರು, ಶರೀಫರಿಗೆ ಗುರು ಗೋವಿಂದಭಟ್ಟರು, ಕನಕದಾಸರಿಗೆ ವ್ಯಾಸರಾಯರು ಇಂತಹ 'ಗುರು' ಪರಂಪರೆ ಹುಟ್ಟಿನಿಂದಲೇ ತೀಕ್ಷ್ಣ ಬೌದ್ಧಿಕತೆಯನ್ನು ಪಡೆದ ಶೂದ್ರ ಶಕ್ತಿಗಳಿಗೆ ಬೆಂಬಲವಾಗಿ ನಿಂತು ಬೆಳೆಸಿದ ಉದಾಹರಣೆಗಳಿವೆ. ಪ್ರಾಚೀನ ಕಾಲದಿಂದ ಆಳವಾಗಿ ಬೇರುಬಿಟ್ಟ ಜಾತಿ ಕುಲಗಳನ್ನು ಕಿತ್ತೊಗೆಯಲು ಇಂದಿಗೂ ಸಾಧ್ಯವಾಗಿಲ್ಲ. ಇಂದಿಗೂ ಜಾತಿ ಒಪ್ಪಿತ ವಿಷಯ ಮಾತ್ರವಲ್ಲ, ಸಮಾಜದ ಸಂರಚನೆಯೂ ಆಗಿದೆ. ಈ ನಿಟ್ಟಿನಲ್ಲಿ ಹರಿದಾಸರು ತೀವ್ರತರವಾದ ಪ್ರಯತ್ನ ಮಾಡಲಿಲ್ಲವಾದರೂ, ವ್ಯಕ್ತಿಯ ಕುಲಕ್ಕಿಂತ ಅವನ ವ್ಯಕ್ತಿತ್ವ, ಜ್ಞಾನ ಮತ್ತು ಸಾಧನೆಗಳು ಮುಖ್ಯವೆಂಬುದನ್ನು ತಿಳಿಸಿದ್ದಾರೆ.

'ಮಾಡು ದಾನಧರ್ಮ ಪರುಪಕಾರವ ಮರೆಯದಿರೆಚ್ಚರಿಕೆ
ಕೇಡ ನೆನೆಯಬೇಡ ನಂಬಿದವರ ಮೇಲೆ ಕೆಡುವೆ ನೀನೆಚ್ಚರಿಕೆ
ಬಾಳು ಬದುಕು ಸಿರಿ ಇರುವಾಗ ಬಂಧು ಬಳಗಗಳೆಚ್ಚರಿಕೆ
ಹಾಳು ಸಂಸಾರಕ್ಕೆ ಹಲವರ ಬಾಯ್ಗಳ ಬಡಿಯದಿರೆಚ್ಚರಿಕೆ
ಚೆನ್ನಾಗಿ ಬದುಕಿದೆ ಗಳಿಸಿದೆ ನಾನೆಂಬ ಹೆಮ್ಮೆ ಬೇಡೆಚ್ಚರಿಕೆ
ನಿನ್ನಾಯು ಮುಗಿದಿರಲು ಯಮದೂತರು
ಬಂದು ಎಳೆಯುವರೆಚ್ಚರಿಕೆ'[೫]

ಇಲ್ಲಿ 'ಎಚ್ಚರಿಕೆ' ಎಂಬ ಪದವೇ ಅವಿವೇಕಿಯಂತೆ ವರ್ತಿಸಬೇಡ ಎಂದು ಹೇಳುತ್ತದೆ. ದಾನ ಮಾಡುವುದು, ಕೆಟ್ಟದ್ದನ್ನು ಬಯಸದಿರುವುದು, ಮನುಷ್ಯ ಸಹಜ ಮಿತಿಗಳನ್ನು ಮೀರುವ ನೆಲೆಯದ್ದಾಗಿದೆ. ಮನುಷ್ಯನಾಗಿ ಹುಟ್ಟಿ ಆತ್ಮೋದ್ಧಾರದ ಚಿಂತನೆ ಮಾಡದೆ, ಸ್ವ-ಸ್ವರೂಪಜ್ಞಾನ ಪಡೆಯದೆ, ಲೌಕಿಕದಲ್ಲಿ ಮುಳುಗಬೇಡ ಎನ್ನುವ ಈ 'ಎಚ್ಚರಿಕೆ'ಯ ಮಾತುಗಳು ಜನಮನವನ್ನು ಜಾಗೃತಗೊಳಿಸುತ್ತದೆ. ಇದಕ್ಕೆ ಚಿತ್ತಶುದ್ಧಿ, ತನುಶುದ್ಧಿ, ಆತ್ಮನಿವೇದಕ ಶಕ್ತಿಗಳು ಬೇಕು. ಹಣ ಮನುಷ್ಯನನ್ನು ಹಾದಿ ತಪ್ಪಿಸುತ್ತದೆ. ಕ್ಷುದ್ರನನ್ನಾಗಿಸುತ್ತದೆ. ಮನುಷ್ಯನ ಬದುಕಿಗೆ ಅಗತ್ಯವಿರುವಷ್ಟು ಸಂಪತ್ತುಗಳಿಸುವುದು ತಪ್ಪಲ್ಲ. ಆದರೆ ಅಗತ್ಯಕ್ಕಿಂತ ಹೆಚ್ಚಾಗಿ ಸಂಪತ್ತು ಶೇಖರಿಸಲ್ಪಟ್ಟರೆ, ಅಹಂಕಾರಕ್ಕೆ ದಾರಿ ಮಾಡಿಕೊಡುತ್ತದೆ. 'ಆಚಾರ ಮಾಡೋದು ದುಗ್ಗಾಣಿ, ಬಹು ನೀಚರ ಮಾಡೋದು ದುಗ್ಗಾಣಿ' ಎಂಬುದು ಸತ್ಯವಾದ ಮಾತು. 'ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯುಷ್ಯದ ರಾಸಿಯನು ಅಳೆಯಿರಯ್ಯಾ' ಎಂಬ ಅರಿವು ಬೇಕು. ಕಿರಿದಾದ ಬದುಕಿನಲ್ಲಿ ಸಿರಿಯು ಸ್ಥಿರವಲ್ಲ ಎಂಬ ಸತ್ಯವನ್ನು ಕಾಣುವ ಜ್ಞಾನದ ಕಣ್ಣು ತೆರೆಯಬೇಕು. 'ದಾಸರ ಮನೆಯ ದಾಸರ ದಾಸ' ಎನ್ನುವಂತಹ ಮಾತುಗಳು ಅಧಿಕಾರ ಮತ್ತು ಹಣವನ್ನು ನಿರಾಕರಿಸುವಂತಹ ನೆಲೆಯದ್ದಾಗಿದೆ.

ಹರಿದಾಸರಲ್ಲಿ ಪ್ರಮುಖವಾಗಿ ಕಾಣುವ ಗುಣವೆಂದರೆ ಉನ್ನತ ನೈತಿಕ ದೃಷ್ಟಿ. ನೈತಿಕತೆ ಎಂದರೆ ಬದುಕಿನ ಬಗೆಗಿರುವ ಅಪಾರ ಶ್ರದ್ಧೆ ಮತ್ತು ಆಸ್ಥೆ. ಜ್ಞಾನದ ಅಸ್ತಿಭಾರದ ಮೇಲೆ

ಪರಮಾತ್ಮನನ್ನು ಪ್ರೀತಿಸುವ ಭಕ್ತಿಗೆ ಪ್ರಾಧಾನ್ಯತೆ ಬಂದದ್ದು ಕೂಡ ಇವರಲ್ಲಿಯೆ. ಭಕ್ತಿಯ ನೆಲೆಯಲ್ಲಿ, ವೈಯಕ್ತಿಕ ಶೀಲ ಸಂವರ್ಧನೆಯ ಮೂಲಕ ಮನುಕುಲದ ಒಳಿತನ್ನು ಸಾಧಿಸಲು ಪ್ರಯತ್ನಿಸಿದ್ದಾರೆ.

'ಬಿಗಿಯದಿರು ಬಿಗಿಯದಿರು ಎಲೆ ಮಾನವ
ಧಿಗಿ ಧಿಗಿ ಧಿಗಿಯೆನುತ ನಿನಗೇಕೆ ಗರ್ವ
ವಿರಕ್ತಿಯಲಿ ಹನುಮನೆ ವಿವೇಕದಲಿ ವಸಿಷ್ಠನೆ
ಶೂರತನದಲಿ ಶಂತನುತನಯನೇನೊ
ಸ್ವರದಲಿ ತುಂಬುರನೆ ಗೀತದಲಿ ನಾರದನೆ
ಪರಾಶರ ಮುನಿಯೆ ವ್ರತತಿ ಪಟ್ಟದಲಿ
ಚೆಲುವಿನಲಿ ರಾಮನೆ ಸತ್ಯದಿ ಹರಿಶ್ಚಂದ್ರನೆ
ಛಲದಲ್ಲಿ ಋಷಿ ವಿಶ್ವಾಮಿತ್ರನೇನೊ
ಬಲದಲ್ಲಿ ವಾಲಿಯೇ ಹಲಧರನೆ ಹಿರಣ್ಯಕನೆ
ಬಿಲು ವಿದ್ಯೆದಲಿ ಪರಶುರಾಮನೇ ನೀನು
ಭಕ್ತಿಯಲಿ ಭರತನೆ ಭಾವದಲಿ ಲಕ್ಷ್ಮಣನೆ
ಯುಕ್ತಿಯಲಿ ನೀನಿಂದುಸೂತನೇನೊ
ಶಕ್ತಿಯಲಿ ಕಾಲನೆ ಭುಕ್ತಿಯಲಗಸ್ತ್ಯನೆ
ಮುಕ್ತಿ ಪಡೆವಲ್ಲಿ ಖಟ್ವಾಂಗರಾಯನೇನೊ'[5]

ಈ ಕೀರ್ತನೆಯಲ್ಲಿ ವ್ಯಾಸರಾಯರು ಗರ್ವಿಷ್ಠನಾದ ಮನುಷ್ಯನಿಗೆ ಸೊಕ್ಕಿನಿಂದ ಮೆರೆದು ಅಂಧಕಾರದಲ್ಲಿ ನೆಡೆಯಬೇಡ ಎಂದು ಸೂಚಿಸಿದ್ದಾರೆ. ವಿರಕ್ತಿಯಲ್ಲಿ ಹನುಮ, ವಿವೇಕದಲ್ಲಿ ವಸಿಷ್ಠ, ಭಕ್ತಿಯಲ್ಲಿ ಭರತ, ಯುಕ್ತಿಯಲ್ಲಿ ಉದ್ದವನೇ–ಇಂತಹ ಯಾವ ಗುಣಗಳಲ್ಲಿ ಪರಿಪೂರ್ಣತೆ ಸಾಧಿಸಲಾರದೆ ಗರ್ವಪಡುವುದರಿಂದ, ಆಲೋಚನಾ ಶಕ್ತಿಯನ್ನು ಕಳೆದುಕೊಂಡು ಭ್ರಮೆಯಲ್ಲಿ ಉಳಿಯುವಂತೆ ಮಾಡುತ್ತದೆ. ಮನಸ್ಸಿನ ಹತೋಟಿಯು ಬುದ್ಧಿಯನ್ನು ಸ್ಥಿಮಿತದಲ್ಲಿಡುತ್ತದೆ. ಉತ್ತಮ ಆಲೋಚನೆಗಳು ಮನಸ್ಸನ್ನು ತಿಳಿಗೊಳಿಸುತ್ತವೆ. ಪೌರಾಣಿಕ ಪಾತ್ರಗಳನ್ನು ಒಟ್ಟಿಗೆ ನೆನಪಿಗೆ ತರುವ ಮೂಲಕ ನಮ್ಮ ಅಹಂಕಾರ ನಿರಸನಗೊಳಿಸಿ, ವಿನಯ–ವಿವೇಕದಿಂದ ಬಾಳಲು ಪ್ರೇರಣೆ ನೀಡುತ್ತಿದೆ.

'ಸತ್ಯವಂತರ ಸಂಗವಿರಲು ತೀರ್ಥವೇತಕೆ
ನಿತ್ಯಜ್ಞಾನಿಯಾದ ಮೇಲೆ ಚಿಂತೆ ಏತಕೆ
ತಾನು ತನ್ನ ಅರಿಯದಂಥ ಪ್ರೌಢನೇತಕೆ
ಮಾನಹೀನನಾಗಿ ಬಾಳ್ವ ಮನುಜನೇತಕೆ
ಪ್ರೀತಿಯಿಂದ ಎಡೆಯನಿಕ್ಕದ ಊಟವೇತಕೆ
ಸೋತ ಹೆಣ್ಣಿಗೆ ಇದಿರು ನಡೆವ ಸುಗುಣನೇತಕೆ
ಸನ್ನೆ ಅರಿತು ನಡೆಯದಂಥ ಸತಿಯಿದ್ದೇತಕೆ

ಭಿನ್ನವರಿತು ನಡೆಯದಂಥ ಸ್ನೇಹವೇತಕೆ
ಜ್ಞಾನವಿಲ್ಲದೆ ನೂರು ಕಾಲ ಬದುಕಲೇತಕೆ
ಚೆನ್ನ ಆದಿಕೇಶವನಿರಲು ದೈವವೇತಕೆ'[೬]

ಹಿಂದೂ ಧರ್ಮದಲ್ಲಿ 'ತೀರ್ಥ' ಪಾವಿತ್ರ್ಯತೆಯ ಸಂಕೇತವಾಗಿದೆ. ಸತ್ಯವಂತರ ಸಂಗ ತೀರ್ಥವಿದ್ದ ಹಾಗೆ ಎಂದು ಹೇಳಿ, ಸತ್ಯವಂತಿಕೆಯನ್ನು ಪವಿತ್ರ ಶಕ್ತಿಯನ್ನಾಗಿಸಿ, ಮುಂದೆ ನಿತ್ಯಜ್ಞಾನಿಯಾದ ಮೇಲೆ ಚಿಂತೆ ಏತಕೆ ಎನ್ನುತ್ತಾನೆ. ನಿತ್ಯಜ್ಞಾನಿ ಎಂದರೆ ದಿನನಿತ್ಯ ಜೀವನದ ಕಷ್ಟ-ಸುಖ ಅರಿತವನು, ಆ ಅರಿವಿನಿಂದಲೇ ಸರಿ-ತಪ್ಪು, ಧರ್ಮ-ಅಧರ್ಮಗಳ ಗ್ರಹಿಕೆಯನ್ನು ಒರೆಗೆ ಹಚ್ಚುವಂತಹ ವಿವೇಕವನ್ನು ರೂಢಿಸಿಕೊಂಡಿರುವವನಾಗಿದ್ದಾನೆ. ಪಾವಿತ್ರ್ಯವನ್ನು ಲೋಕಜೀವನಕ್ಕೆ ಬೆಸೆದಿರುವ ನಿತ್ಯಜ್ಞಾನದ ಜೊತೆ, ವೈರುಧ್ಯಾತ್ಮಕವಾಗಿ ನಿಲ್ಲಿಸಲಾಗಿದೆ. ಒಂದು ವೈಯಕ್ತಿಕ(ಅಂತರಂಗ)ಕ್ಕೆ ಸಂಬಂಧಿಸಿದ್ದಾದರೆ, ಅದರ ಮುಂದಿನದು ಲೋಕನಡತೆ(ಬಹಿರಂಗ)ಗೆ ಸಂಬಂಧಿಸಿದ್ದಾಗಿದೆ. ತನ್ನ ತಾನು ಅರಿಯುವ ಪ್ರೌಢತೆಗೆ, ಲೋಕದ ಮಾನವಂತಿಕೆಯನ್ನು ಕಾಪಾಡುವ ಗುಣವಿಲ್ಲದಿದ್ದರೆ ಸಾರ್ಥಕವಿಲ್ಲದಂತಾಗುತ್ತದೆ.

'ನಾಯಿ ಬಂದದಪ್ಪ ಅಣ್ಣ ಅತ್ತಲಾಗಿರಿ
ನಾಯಿ ಅಂದರೆ ನಾಯಿಯಲ್ಲ
ಮಾನವ ಜನ್ಮದ ಹೀನನಾಯಿ
ಕೊಟ್ಟ ಸಾಲವ ಕೊಡದ ನಾಯಿ
ಇಟ್ಟ ಭಾಷೆಯ ತಪ್ಪುವ ನಾಯಿ
ಕಟ್ಟೆ ಮೇಲೆ ಕುಳಿತುಕೊಂಡು
ಅಟ್ಟಹಾಸದಿ ಬೊಗಳುವ ನಾಯಿ ॥೧॥
ಕೊಟ್ಟು ಕುದಿಯುವ ಕೆಟ್ಟನಾಯಿ
ಇಟ್ಟ ಅನ್ನವ ಹಂಗಿಪ ನಾಯಿ
ಪುಟ್ಟಿ ಮಾತೆ ಗರ್ಭದಲ್ಲಿ
ಕೆಟ್ಟ ಕೃತ್ಯವ ಮಾಳ್ಪ ನಾಯಿ ॥೨॥
ಪಟ್ಟ ಸ್ತ್ರೀಯಳ ಬಿಟ್ಟಹ ನಾಯಿ
ಬಿಟ್ಟ ಸ್ತ್ರೀಯಳ ಆಳುವ ನಾಯಿ
ದಿಟ್ಟ ಶ್ರೀ ಪುರಂದರ ವಿಠಲರಾಯನ ಮನ
ಮುಟ್ಟಿ ಭಜಿಸದೆ ಹೋದ ನಾಯಿ'[೮]

ಇಲ್ಲಿ 'ನಾಯಿ' ಎಂದರೆ ಮನುಷ್ಯನೇ ಆಗಿದ್ದು, ಇದು ಮನುಷ್ಯನ ದುರ್ಗುಣಗಳನ್ನು ತೆರೆದಿಡುತ್ತದೆ. ಮನುಷ್ಯನು ಪ್ರಾಣಿಗಳಿಗಿಂತ ಭಿನ್ನವಾಗುವುದು, ಮನುಷ್ಯತ್ವ ಹಾಗೂ ಮೌಲ್ಯಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡಾಗಲೇ. 'ಅತ್ತಲಾಗಿರಿ' ಎಂದು ಕೆಟ್ಟ ಮನುಷ್ಯನನ್ನು ಹತ್ತಿರ ಸೇರಿಸಬಾರದು ಎಂದರ್ಥದಲ್ಲಿ ಹೇಳಲಾಗಿದೆ. ದೇವರ ಸ್ಮರಣೆ ಮೂಲಕ ಮನಸ್ಸಿನಲ್ಲಿರುವ ಕೆಟ್ಟಗುಣಗಳನ್ನು

ನಿವಾರಿಸಿಕೊಂಡಾಗ, ಮಡುಗಟ್ಟಿದ ಭಾವನೆಗಳು ಚೈತನ್ಯಗೊಂಡು ಜಾಗೃತಗೊಳ್ಳುತ್ತವೆ. ಈ ಹೋಲಿಕೆಗಳು ಮನುಷ್ಯನ ಚಪಲತೆ, ಚಂಚಲತೆ, ಆತ್ಮಾಭಿಮಾನ ರಹಿತ ನಡೆಯನ್ನು ಹೇಳುತ್ತವೆ. ನಾಯಿ ಪ್ರಮಾಣಿಕತೆಗೆ ಹೆಸರಾದ ಪ್ರಾಣಿಯಾದರೂ, ಹೊಲಸು ತಿನ್ನುತ್ತದೆ. ಅಂದಣವನ್ನೇರಿಸಿದರೂ ಹೊಲಸು ಕಂಡಲ್ಲಿ ಅದು ಚಂಚಲತೆಯನ್ನು ತೋರುತ್ತದೆ. ವ್ಯಕ್ತಿ ಕೂಡ ಅವನ ಚೇತನ ಅಧೋಗತಿಗೆ ಇಳಿದಾಗ, ಮಾನವತ್ವದಿಂದ ದೂರ ಸರಿದು ಕೀಳಾಗಿ ವರ್ತಿಸುತ್ತಾನೆ. ಇದು ವ್ಯಕ್ತಿಯ ವಿವೇಕವನ್ನು ಎಚ್ಚರಿಸುವ ನೆಲೆಯದ್ದಾಗಿದೆ.

ದಾಸರ ಕೀರ್ತನೆಗಳಲ್ಲಿ ಬದುಕನ್ನು ಗಾಢವಾಗಿ ಪ್ರೀತಿಸುವ ಚಿಂತನೆಗಳಿರುವುದನ್ನು ಕಾಣುತ್ತೇವೆ. ಮಾನವ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕಾದರೆ ಮೊದಲು, ಈ ಜನ್ಮದ ಮಹತ್ವವನ್ನು ತಿಳಿದು 'ಧರ್ಮವೆಂಬ ಸಂಬಳಗಳಿಸಿರೋ' ಎನ್ನುತ್ತಾರೆ. ಮನುಷ್ಯನು ದುರಹಂಕಾರದಿಂದ ಉಬ್ಬಿ ನಡೆಯದೆ ಶೀಲ ಸಂವರ್ಧನೆಯ ಕಾರ್ಯ ಮಾಡಬೇಕೆಂಬ ಆಶಯ ಅವರದು. ಧರ್ಮದ ದಾರಿಯಲ್ಲಿ ನಡೆಯದ ಮನುಷ್ಯನ ಜನ್ಮ ವ್ಯರ್ಥವೆಂದು ಹೇಳಿ 'ಎಚ್ಚರದಲ್ಲಿ ನಡೆ ಮನವೆ' ಎಂದು ಒಳ್ಳೆಯ ದಾರಿಯಲ್ಲಿ ನಡೆಯುವ ಎಚ್ಚರಿಕೆಯನ್ನು ನೀಡಿದ್ದಾರೆ.

'ಆವ ಕುಲವಾದರೇನು ಆವನಾದರೇನು ಆತ್ಮ
ಭಾವವರಿತ ಮೇಲೆ
ನಾನಾ ವರ್ಣದ ಆಕಳು ಅದು
ನಾನಾ ವರ್ಣದ ಕ್ಷೀರವೇನೋ
ಹೀನ ಕರ್ಮಗಳನ್ನು ಬಿಟ್ಟು ಹಿಗ್ಗಿ
ಜ್ಞಾನ ಒಲಿಸಿರೋ'[೫]

ಆಕಳು ಸಮಾಜದಲ್ಲಿರುವ ವಿಭಿನ್ನ ಜಾತಿಯ ಜನರನ್ನು ಸಂಕೇತಿಸುತ್ತದೆ. ವಿಷಯದ ಆಸೆ ಬಿಡುವುದು, ಗುರುಭಕ್ತಿ ಮಾಡುವುದು, ಜ್ಞಾನ ಪಡೆದುಕೊಳ್ಳುವುದು ಇವು ಭಕ್ತಿಗೆ ಮುಖ್ಯ ಸಾಧನಗಳು. ಭಕ್ತ ಯಾವ ಜಾತಿಯವನಾದರೂ ಭಗವಂತನಿಗೆ ಒಂದೇ ಸಮಾನರಾಗಿರುತ್ತಾರೆ. ಕುಲದ ಮೇಲೆ ಹೋಗಬೇಡ ಮನುಜಾ ಕುಲವಿಲ್ಲ ಜ್ಞಾನಿಗಳಿಗೆ ಎಂದ ದಾಸರು ಕುಲ-ಜಾತಿಗಳು ಮುಖ್ಯವಲ್ಲ. ಭಕ್ತಿಯ ಭಾವ, ಜ್ಞಾನಗಳೇ ಮುಖ್ಯವೆಂದು ತಿಳಿಸುತ್ತಾರೆ. ಮನುಷ್ಯ ವಿಭಿನ್ನನಾದರೂ ಆಯಾ ವ್ಯಕ್ತಿಯ ಅಂತರಂಗದಲ್ಲಿರುವ ಭಕ್ತಿ, ಜ್ಞಾನಗಳು ಒಂದೇ ಆಗಿರುತ್ತವೆ. ಭಕ್ತಿ ಜ್ಞಾನಗಳಿದ್ದರೇ ಅವರು ಪೂಜ್ಯರೇ ಆಗುತ್ತಾರೆ. ದೇವಸ್ತುತಿಯಿಂದ ಹುಟ್ಟುವ ಆತ್ಮಜ್ಞಾನಕ್ಕೆ, ಆ ಜ್ಞಾನಿಗೆ ಅಷ್ಟೊಂದು ಬೆಲೆಯಿದೆ.

'ಬಾರಮ್ಮ ನಾವಿಬ್ಬರಾಡುವ
ಮುಕ್ತಿ ಸಾಧನಂಗಳ ಬೇಗ ಬೇಡುವ
ಕಾಡುವ ಕಪಿ ಶಯನಂಗಳ
ಬೇಡುವ ಜ್ಞಾನ ಮಂಟಪದಲ್ಲಿ ಜೋಡಿಕಾಡುವ
ಮೂರು ಮನೆಯ ಭೇದವ ಮಾಡಿ

ಮುತ್ತೈದೆಂಟು ಮನೆ ಕಿತ್ತ್ಯಾಡುವ
ಪುಂಡರೀಕಾಕ್ಷ ಶೇಷನ ಮೇಲೆ
ಭೂ ಮಂಡಲದೊಳಗೆ ಬ್ರಹ್ಮಾಂಡವು
ಶಂಖ ಚಕ್ರಾಂಕಿತ ಪುರಂದರ ವಿಠಲನ್ನ
ಜ್ಞಾನ ಮಂಟಪದಲ್ಲಿ'[೧೦]

ಇಲ್ಲಿ ಕಾಡುವ ಕಪಿ ವ್ಯಕ್ತಿಯ ಚಂಚಲ, ಅಸ್ಥಿರವಾದ ಚಿತ್ತವನ್ನು ಸಂಕೇತಿಸುತ್ತದೆ. ಭಕ್ತನಿಗೆ ಭಕ್ತಿಯಿಂದಲೇ ಮುಕ್ತಿ ದೊರೆಯುತ್ತದೆ. ಮುಕ್ತಿಯ ಸಾಧನಗಳಾದ, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಭಕ್ತಿಯಿಂದ ಬೇಡಬೇಕೆಂದು ಪುರಂದರದಾಸರು ಹೇಳುತ್ತಾರೆ. 'ಶಯನಂಗಳ' ಎಂದರೆ ಚಂಚಲ ಚಿತ್ತವನ್ನು ಹಿಡಿತದಲ್ಲಿಟ್ಟುಕೊಳ್ಳುವಂತೆ ಬೇಡುವ, ಜ್ಞಾನ ಮಂಟಪದಲ್ಲಿ ದೈವವನ್ನು ಹೊಂದುವ ಉದ್ದೇಶವಿದೆ. ಮುಕ್ತಿಗೆ ಕಾರಣವಾಗುವ ಜ್ಞಾನವನ್ನು ಪಡೆದುಕೊಂಡು, ಭಕ್ತಿಯ ಮೂಲಕ ಮುಕ್ತಿ ಸಾಧಿಸಬೇಕೆಂಬ ಸಂದೇಶವಿದೆ.

'ಮತಿಗೆಟ್ಟು ಕಾಲವ ಕಳೆಯಬೇಡ
ಸದ್ಗತಿಕೊಡುವ ಹರಿಯ ನಂಬೆಲೋ ಮೂಢ
ಹಾಳು ಕೇರಿಯೊಳು ತಿರುಗುವ ಹಂದಿಯಂತೆ
ಬಳಲುತ್ತಾ ನಾನಾ ಜನ್ಮವೆತ್ತಿ ಬಂದೆ
ಬಾಳುವ ಕಾಲಕ್ಕೆ ಮದವೇರಿ ನಿಂದಿ, ಮುಂದೆ
ಮೂಳ ಮುಪ್ಪಿನಲ್ಲಿ ಅವಿಚಾರಗೊಂಡಿ'[೧೧]

ಬಾಹ್ಯ ಪ್ರದರ್ಶನಗಳನ್ನು ಮಾಡುತ್ತಾ ಅನೀತಿಯಲ್ಲಿ ಬದುಕುವ ಮನುಷ್ಯನ ಜೀವನವನ್ನು ಹಾಳುಕೇರಿಯಲ್ಲಿ ತಿರುಗವ ಹಂದಿ(ಕೊಳಕು ಮನಸ್ಥಿತಿ)ಗೆ ಹೋಲಿಸಲಾಗಿದೆ. ಯೌವ್ವನದಲ್ಲಿ ಅಹಂಕಾರದಿಂದ ಮೆರೆದು, ಮುದಿ ವಯಸ್ಸಿನಲ್ಲಿ ವಿವೇಚನೆಯಿಲ್ಲದೆ ದಾರಿ ತಪ್ಪಿ ನಡೆದ ಮತಿಗೆಟ್ಟ ಮನುಷ್ಯನನ್ನು ಉದ್ದೇಶಿಸಿ ಹೇಳಲಾಗಿದೆ. 'ನಿಂದಕರಿರಬೇಕಿರಬೇಕು ಹಂದಿಯಿದ್ದರೆ, ಕೇರಿ ಹ್ಯಾಂಗೆ ಶುದ್ಧಿಯೋ ಹಾಂಗೆ' ಎಂದಿದ್ದಾರೆ. ಏಕೆಂದರೆ 'ನಿಂದಕರು ಅಂದಂದು ಮಾಡಿದ ಪಾಪವೆಂಬ ಮಲತಿಂದು ಹೋಗುವರಯ್ಯ' ಎಂದು ತೆಗಳಿಕೆಯಿಂದ ಮನಃ ಶುದ್ಧಿಯಾಗುವುದೆಂದು ತಿಳಿಸಿದ್ದಾರೆ. 'ಮಾಡಿದವರ ಪಾಪ ಆಡಿದವರಿಗೆ' ಎಂಬ ಗಾದೆಯಂತೆ ನಿಂದನೆಯಿಂದ ಮಾಡಿದ ಪಾಪ ಪರಿಹಾರವಾಗುತ್ತದೆ ಎಂಬ ಸಾಮಾನ್ಯ ತಿಳುವಳಿಕೆ ಇಲ್ಲಿದೆ.

'ಜಾಲಿಯ ಮರದಂತೆ ಧರೆಯೊಳು ದುರ್ಜನರು
ಮೂಲಾಗ್ರ ಪರಿಯಂತ ಮುಳ್ಳುಕೂಡಿಪ್ಪಂತೆ
ಬಿಸಿಲಲ್ಲಿ ಬಳಲಿ ಬಂದವರಿಗೆ ನೆರಳಿಲ್ಲ
ಹಸಿದು ಬಂದವರಿಗೆ ಹಣ್ಣು ಇಲ್ಲ
ಕುಸುಮ ವಾಸನೆಯಿಲ್ಲ ಕೂಡಲು ಸ್ಥಳವಿಲ್ಲ

ರಸದಲ್ಲಿ ಸ್ವಾದವು ವಿಷದಂತೆ ಇರುತಿಹ
ಊರಹಂದಿಗೆ ಷಡ್ರಸಾನ್ನವನಿಕ್ಕಲು
ನಾರು ದುರ್ಗಂಧ ಬಿಡಬಲ್ಲುದೆ
ಘೋರಪಾಪಿಗೆ ತತ್ವಜ್ಞಾನವ ಪೇಳಲು
ಕ್ರೂರಕರ್ಮವ ಬಿಟ್ಟು ಸುಜನನಾಗುವನೆ'[೨೨]

ಪುರಂದರದಾಸರು ಈ ಕೀರ್ತನೆಯಲ್ಲಿ ವ್ಯಕ್ತಿಯ ವ್ಯಕ್ತಿತ್ವದ ಬಗ್ಗೆ ಹೇಳುತ್ತಾ, ಒಳ್ಳೆಯ ಆಲೋಚನೆಗಳು, ಚಿಂತನೆಗಳು ಒಳ್ಳೆಯ ಸಮಾಜ ನಿರ್ಮಾಣಕ್ಕಾಗಿ ಎಂದಿದ್ದಾರೆ. ಸನ್ನಡತೆಯು ಕೂಡ ಜ್ಞಾನದ ಒಂದು ರೂಪ. ಅಜ್ಞಾನಿಯಂತೆ ವರ್ತಿಸುವವರನ್ನು ದುರ್ಜನರು ಎಂದಿದ್ದಾರೆ. ಇವರು ಜಾಲಿಯ ಮರದಂತೆ ಯಾರ ಪೋಷಣೆಯು ಇಲ್ಲದೆ, ಎಲ್ಲೆಂದರಲ್ಲಿ ಬೆಳೆದು ಸಮಾಜಕ್ಕೆ ತೊಂದರೆ ಕೊಡುತ್ತಿರುತ್ತಾರೆ. ಒಳ್ಳೆಯ ವ್ಯಕ್ತಿತ್ವಕ್ಕೆ ಬೇಕಾಗುವ ಯಾವ ಗುಣಗಳು ಇವರಲ್ಲಿರುವುದಿಲ್ಲ. ಇವರ ಆಲೋಚನೆಗಳೆಲ್ಲಾ ಋಣಾತ್ಮಕ ಗುಣಗಳಿಂದ ಕೂಡಿರುತ್ತವೆ. ಮನಸ್ಸಿನ ಈ ದೌರ್ಬಲ್ಯಗಳನ್ನೆಲ್ಲಾ ಮೀರಿ ಬೆಳೆಯಬೇಕು. ಇಲ್ಲದಿದ್ದರೆ, ಇವರ ಪಾಂಡಿತ್ಯಕ್ಕೂ, ವ್ಯಕ್ತಿತ್ವಕ್ಕೂ ಧಕ್ಕೆ ಬರುತ್ತದೆ ಎಂದಿದ್ದಾರೆ.

'ಹೀನ ಮಾನಿನಿಯರ ಧ್ಯಾನ ಕಾನನದೊಳು
ನರಳದಿರೆಚ್ಚರಿಕೆ
ನಾನೆಂಬ ಅಹಂಕಾರ ಮಾಡಿ ನರಕದೊಳು
ನರಳದಿರೆಚ್ಚರಿಕೆ
ಜಾಹ್ನವಿ ಸ್ನಾನ ಸಂಧ್ಯಾನಿಷ್ಠಾನ ಸುಜ್ಞಾನ
ಕೇಳೆಚ್ಚರಿಕೆ
ಜಾನಕಿ ರಮಣನ ಧ್ಯಾನವೇ ಧರ್ಮ ಸಂತಾನ
ಮುಂದೆಚ್ಚರಿಕೆ'[೨೩]

ಇಲ್ಲಿ 'ಹೀನ' ಸ್ತ್ರೀಯರ ಧ್ಯಾನವನ್ನು ಕಾಡಿಗೆ ಹೋಲಿಸಲಾಗಿದೆ. ವಿಷಯಾಸೆಗಳ ಸುಳಿಯಲ್ಲಿ ಸಿಕ್ಕವನಿಗೆ ಸ್ತ್ರೀಯರ ಅತಿಯಾದ ಮೋಹ ಕಾಡಿನಲ್ಲಿ ದಾರಿಕಾಣದೇ ನರಳುತ್ತಾ ನಿಂತಿರುವ ಸ್ಥಿತಿಯನ್ನು ತರುತ್ತದೆ. ಅದಕ್ಕಾಗಿ ಎಚ್ಚರಿಕೆ ಎಂಬ ಸಂದೇಶವಿದೆ. ನಾನು ನನ್ನದೆಂಬ ಅಹಂಕಾರಗಳು ವ್ಯಕ್ತಿಯನ್ನು ಕೆಳಮಟ್ಟಕ್ಕೆ ಇಳಿಯುವಂತೆ ಮಾಡುತ್ತವೆ. 'ನಾರಾಯಣನೆಂಬ ನಾಮದ ಮನದಲ್ಲಿ ನೆನೆಯುತಿರೆಚ್ಚರಿಕೆ' ಎಂಬ ಎಚ್ಚರಿಕೆ ಈ ಕೀರ್ತನೆಯ ಸಂದೇಶವನ್ನು ತಿಳಿಸುತ್ತದೆ. ದಾಸರು ಮಾಡಬಾರದ ಕೆಲಸಗಳ ಪಟ್ಟಿಯನ್ನು ತಿಳಿಸುತ್ತಾ ಹರಿನಾಮಸ್ಮರಣೆಯ ಮಹತ್ವವನ್ನು ತಿಳಿಸಿದ್ದಾರೆ. ಕೆಟ್ಟ ಕೆಲಸ ಮಾಡಿದರೆ, ಅದರ ಫಲ ನೀಡುವ, ದಂಡಿಸುವ ಒಂದು ಶಕ್ತಿ ಇದೆ ಎಂಬ ಎಚ್ಚರಿಕೆಯನ್ನು ನೀಡಿದ್ದಾರೆ.

'ಮಂದಮತಿಯೈ ನಾನು ಮದನಜನಕನು ನೀನು
ಕುಂದುಗಳನೆಣಿಸದಲೆ ದಯಮಾಡಿ ಸಲಹೋ
ಪಾಪಕರ್ತನು ನಾನು ಪಾಪನಾಶಕ ನೀನು

ಕೋಪ ಮದ ಮತ್ಸರದಿ ಸುಳಿವೆ ನಾನು
ಬುದ್ಧಿಹೀನರ ಮಾತ ಕೇಳಿ ನಾ ಮರುಳಾದೆ
ಶುದ್ಧಿ ಇಲ್ಲದೆ ಮನವು ಕೆಟ್ಟು ಹೋಯ್ತು
ಮಧ್ವನುತ ಸಿರಿ ಪುರಂದರ ವಿಠಲ ತತ್ವದ
ಸಿದ್ಧಿಯನು ದಯೆಗೆಯ್ದು ಉಳುಹು ನೀ ಎನ್ನ'[೧೪]

ಈ ಕೀರ್ತನೆಯ ನಿರೂಪಣೆಯಲ್ಲಿ ಬರುವ 'ನಾನು' ಎಂಬುದು ಕೀರ್ತನಕಾರ ತನಗೆ ತಾನೇ 'ಆತ್ಮವಿಮರ್ಶೆ' ಮಾಡಿಕೊಳ್ಳುತ್ತಾ ಹೇಳಿಕೊಳ್ಳುತ್ತಿರುವುದಾಗಿದೆ. ಇಲ್ಲಿ ಒಬ್ಬ ಮನುಷ್ಯ ಮತ್ತು ಒಂದು ಸಮುದಾಯವನ್ನು ವ್ಯಕ್ತಿಗತ ನೆಲೆಯಿಂದಲೇ ನೋಡಬೇಕು. ವ್ಯಕ್ತಿಯ ಸಂಕಟಗಳು ಸಮುದಾಯದ ಕಷ್ಟಗಳೇ ಆಗಿವೆ. ವರ್ತಮಾನದ ಬಗೆಗಿನ ಎಚ್ಚರವು ಮೋಹಕ್ಕೆ ಒಳಗಾದಂತೆ ತನ್ನನ್ನು ತಾನೇ ಬಿಡಿಸಿಕೊಳ್ಳುವುದು ಇದಕ್ಕೆ ಪರಿಹಾರವಾಗಿದೆ. ಜೀವನದ ಅಂತಿಮ ಘಟ್ಟದ ಬಗೆಗಿನ ಅರಿವು, ವರ್ತಮಾನದ ಬದುಕಿನ ಮೋಹವನ್ನು ಕಳಚುತ್ತದೆ. ಮತ್ತು ಬದುಕು ನಿರ್ಲಿಪ್ತತೆಯತ್ತ ಸಾಗುವಂತೆ ಮಾಡುತ್ತದೆ. ಅಸ್ಥಿರ ಬದುಕಿನ ತಿಳುವಳಿಕೆ, ಅರಿವು ಬದುಕನ್ನು ಹೇಗೆ ನೋಡಬೇಕು ಎಂಬುದನ್ನು ಕಲಿಸುತ್ತದೆ. ಇವರ ಈ ನಿಲುವಿನಲ್ಲಿ ಇಹಕ್ಕಿಂತಲೂ ಪರ ಮುಖ್ಯ, ಎಂಬ ತಿಳುವಳಿಕೆಗೆ ಬಂದು ನಿಲ್ಲುತ್ತದೆ. ಬದುಕನ್ನು ಹೇಗೆ ನೋಡಬೇಕು ಎಂಬ ತಿಳುವಳಿಕೆ ಅತಿಯಾದ ವ್ಯಾಮೋಹ, ಸಂಬಂಧಗಳ ಕಟ್ಟಿಗೆ ಒಳಗಾಗದಂತೆ ತನ್ನನ್ನು ಹೇಗೆ ಸಿದ್ಧಗೊಳಿಸಬೇಕೆಂಬ ಮಾರ್ಗವನ್ನು ಹೇಳುತ್ತದೆ.

'ನಿಂದಕರಿರಬೇಕಿರಬೇಕು
ಹಂದಿಯಿದ್ದರೆ ಕೇರಿ ಹೇಗೆ ಶುದ್ಧಿಯೋ ಹಾಗೆ ॥ಪ॥
ಅಂದುಂದು ಮಾಡಿದ ಪಾಪವೆಂಬ ಮಲ
ತಿಂದು ಹೋಗುವರಯ್ಯ ನಿಂದಕರು
ವಂದಿಸಿ ಸ್ತುತಿಸುಪ ಜನರೆಲ್ಲರು ನಮ್ಮ
ಪೊಂದೀಗ ಪುಣ್ಯವನ್ನೊಯ್ಯುವರಯ್ಯ
ದುಷ್ಟ ಜನರು ಈ ಸೃಷ್ಟಿಯೊಳಿದ್ದರೆ
ಶಿಷ್ಟ ಜನರಿಗೆಲ್ಲ ಕೀರ್ತಿಗಳೂ
ಇಷ್ಟಪ್ರದ ಶ್ರೀ ಕೃಷ್ಣನೆ ನಿನ್ನೊಳು
ಇಷ್ಟೇ ವರವನು ಬೇಡುವೆನಯ್ಯ
ದುರಳ ಜನಂಗಳು ಚಿರಕಾಲ ಇರುವಂತೆ
ಕರವ ಮುಗಿದು ವರ ಬೇಡುವೆನು
ಪರಿಪರಿ ತಮಸಿಗೆ ಗುರಿಯಲ್ಲದೆ
ಪರಮ ದಯಾನಿಧಿ ಪುರಂದರವಿಠಲ'[೧೫]

ಲೌಕಿಕ ಬದುಕಿನಲ್ಲಿ ಅಭಿವೃದ್ಧಿ ಕಾಣಬೇಕಾದರೆ ಸ್ತುತಿ ನಿಂದೆಗಳು ಅಗತ್ಯವಾಗಿಬೇಕು. ಕೇವಲ ಹೊಗಳಿಕೆ ವ್ಯಕ್ತಿಯನ್ನು ಯಶಸ್ಸಿನ ಹಾದಿಗೆ ಕೊಂಡೊಯ್ಯಲಾರದು. ಮಾಡುವ ಕೆಲಸ ಕಾರ್ಯಗಳ ಲೋಪದೋಷಗಳನ್ನು ತೆಗಳುವವರಿದ್ದಾಗ ವ್ಯಕ್ತಿ ಹೆಚ್ಚು ಜಾಗೃತನಾಗಿ ತನ್ನ ಕರ್ತವ್ಯಗಳನ್ನು ನಿರ್ವಹಿಸುತ್ತಾನೆ. ಹಂದಿ ಸಮಾಜವನ್ನು ಶುಚಿಗೊಳಿಸಲು ಹೊಲಸು ತಿನ್ನುವುದಿಲ್ಲ. ಅದು ಅದರ ಹೊಟ್ಟೆಪಾಡಿಗೆ ತಿಂದರೂ, ಸಮಾಜಕ್ಕೆ ಅದರಿಂದ ಒಳ್ಳೆಯದಾಗುತ್ತದೆ. ಅದರಂತೆ ವ್ಯಕ್ತಿಯ ಕಾರ್ಯದಕ್ಷತೆಯನ್ನು ಹೆಚ್ಚಿಸುವಲ್ಲಿ, ನಮ್ಮನ್ನು ನಿಂದಿಸುವವರ ಪಾತ್ರವೂ ಅಷ್ಟೇ ಮುಖ್ಯವಾಗುತ್ತದೆ. 'ನಿಂದಕರಿರಬೇಕು ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೋ ಹಾಂಗೆ' ಎನ್ನುವ ದಾಸರ ಮಾತಿನಲ್ಲಿ ನಿತ್ಯ ಬದುಕಿನ ಅವಲೋಕನವಿದೆ. ಮಾನವ ವಿಚಾರಶೀಲನಾಗಬೇಕು. ಇಲ್ಲದಿದ್ದರೆ ಹೊಲಸು ತಿಂದು ಬದುಕುವ ಹಂದಿಗೂ, ಮಾನವನಿಗೂ ಯಾವುದೇ ವ್ಯತ್ಯಾಸ ಉಳಿಯುವುದಿಲ್ಲ. ಈ ತರಹದ ತೆಗಳಿಕೆ ಭಕ್ತರನ್ನು ಎಚ್ಚರಿಸಿ ಸನ್ಮಾರ್ಗಕ್ಕೆ ತರುತ್ತದೆ. ಕ್ರಿಯಾಜ್ಞಾನ ಪಡೆದ ವ್ಯಕ್ತಿಯಲ್ಲಿ ಭಾವಶುದ್ಧಿ ಹೇಗಿರಬೇಕೆಂಬುದನ್ನು ಹಂದಿ ಪ್ರತಿಮೆಯ ಮೂಲಕ ತಿಳಿಯಪಡಿಸಿದ್ದಾರೆ.

'ಸ್ನಾನ ಮಾಡಿರಯ್ಯ ಜ್ಞಾನತೀರ್ಥದಲಿ
ನಾನು ನೀನೆಂಬಹಂಕಾರವ ಬಿಟ್ಟು ॥ಪ॥
ತನ್ನೊಳು ತಾನೆ ತಿಳಿದರೊಂದು ಸ್ನಾನ
ಅನ್ಯಾಯಗಾರಿ ಕಳೆದರೊಂದು ಸ್ನಾನ
ಅನ್ಯಾಯವಾಡದಿದ್ದರೊಂದು ಸ್ನಾನ
ಚೆನ್ನಾಗಿ ಹರಿಯ ನೆನೆದರೊಂದು ಸ್ನಾನ
ತಂದೆತಾಯಿಗಳ ಸೇವೆ ಒಂದು ಸ್ನಾನ
ಮುಂದಿನ ಮಾರ್ಗ ತಿಳಿದರೊಂದು ಸ್ನಾನ
ಬಂಧನವನು ಬಿಡಿಸಿದರೊಂದು ಸ್ನಾನ
ಸಂಧಿಸಿ ತಿಳಿದುಕೊಂಡರೆ ಸೇತು ಸ್ನಾನ
ದಾನ ಧರ್ಮಗಳನು ಮಾಡುವುದೇ ಸ್ನಾನ
ಜ್ಞಾನ ತತ್ವಂಗಳ ತಿಳಿಯುವುದೇ ಸ್ನಾನ
ಹೀನ ಪಾಪಂಗಳ ಬಿಡುವುದೆ ಸ್ನಾನ
ಧ್ಯಾನದಿ ಮಾಧವನ ನಂಬುವುದೇ ಸ್ನಾನ'[೮೬]

ಈ ಕೀರ್ತನೆಯಲ್ಲಿ ಸ್ನಾನಕ್ಕೆ ನೀಡುವ ಅರ್ಥ, ಭಿನ್ನವಾಗಿರುವುದೇ ಇಲ್ಲಿನ ವಿಶೇಷ. ಸ್ನಾನವನ್ನು ವ್ಯಕ್ತಿಯ ವಿಕಾಸದ ನೆಲೆಯಲ್ಲಿ ಅರ್ಥೈಸುವುದರ ಜೊತೆಗೆ ಮರ್ಕಟ ಮನಸ್ಸನ್ನು ನಿಯಂತ್ರಿಸಿ, ಆತನ ನಡೆಯಲ್ಲಿ ನಿರ್ಬಂಧವನ್ನು ಹಾಕಿಕೊಂಡು, ಬದುಕು ರೂಪಿಸಿಕೊಳ್ಳುವುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಮೊದಲೆರಡು ಸಾಲು ಶಂಕರಾಚಾರ್ಯರು ಜ್ಞಾನಕ್ಕೆ ಕೊಟ್ಟ ಅರ್ಥವನ್ನು ನೆನಪಿಸುತ್ತದೆ. ಮನುಷ್ಯ ತನ್ನ ದೇಹವನ್ನು ನಿರ್ಮಲವಾಗಿರಿಸಿಕೊಂಡರೆ ಸಾಲದು, ಆತ ತನ್ನ

ಮೆದುಳು, ಹೃದಯವನ್ನು ಸ್ವಚ್ಛವಾಗಿರಿಸಿಕೊಳ್ಳಬೇಕು. ಅದಕ್ಕೆ ಜ್ಞಾನ ಅನಿವಾರ್ಯ. ಆ ಜ್ಞಾನವು ಸುಮ್ಮನೆ ಬರುವುದಿಲ್ಲ. ಮನುಜರೆಲ್ಲಾ 'ಮೌನದಲ್ಲಿ ಧ್ಯಾನ' ಮಾಡಬೇಕು. ಹೊಸ ಚಿಂತನೆಗಳನ್ನು ಸೃಷ್ಟಿಸಬೇಕು. 'ತನ್ನ ತಾನರಿತುಕೊಂಬುದೆ ಒಂದು ಸ್ನಾನ' ಇದು ಸಕಾಲಿಕವಾದ ಮಾತು. ಇದನ್ನು ಇಂದಿನ ಸಮಾಜ ಚಿಂತಿಸದೆ ಇರುವುದರಿಂದ ಎಲ್ಲಾ ಗೊಂದಲಗಳನ್ನು ಹುಟ್ಟುಹಾಕಿದೆ. ನರನ ಎಲ್ಲಾ ಸಮಸ್ಯೆಗೆ ಹೊಟ್ಟೆ ಕೇಂದ್ರ ಬಿಂದುವಾಗಿದೆ. ಅನ್ನ ದೇಹದ ಒಳಗೆ ಹೋದ ನಂತರ ಹರಿಯನ್ನು ಧ್ಯಾನಿಸು ಅದುವೇ ಗಂಗಾಸ್ನಾನವಾಗುವುದು. ಹೀಗೆ ಹಲವು ಆಯಾಮಗಳನ್ನು ಒಳಗೊಂಡ ಸ್ನಾನದ ಕಲ್ಪನೆ, ಅಂದಿನ ಅತೀ ಬಿಗಿಯಾದ ಧಾರ್ಮಿಕ ಸಂಕೋಲೆಗಳನ್ನು ತೊಡೆದು ಹಾಕಿ, ಮಾನವ ಧರ್ಮವನ್ನು ಬದುಕಿನುದ್ದಕ್ಕೂ ಸಾರಿದ್ದಾರೆ.

ಬದುಕಿನ ಸರಳ ಸಂಗತಿಗಳನ್ನು ತತ್ತ್ವೀಕರಿಸುತ್ತಾ, ಮತ್ತೆ ಅದನ್ನು ತಿಳಿಗೊಳಿಸಿ, ವ್ಯಾಖ್ಯಾನಿಸಲು ಶ್ರಮಿಸುವುದು ವಿಚಾರ ಪರಂಪರೆಯ ಅನಿವಾರ್ಯತೆಯಾಗಿದೆ. ಅನುಭವಗಳನ್ನು ಅವುಗಳ ಮೂಲಕ ಉಂಟಾಗುವ ತಿಳಿವಳಿಕೆಯನ್ನು, ತರ್ಕದ ಮೂಲಕ ವಿಶ್ಲೇಷಿಸುತ್ತಾ ತತ್ತ್ವಶಾಸ್ತ್ರ ನಿರ್ಮಾಣವಾಗಿದೆ. ಈ ತತ್ವಜ್ಞಾನ ಬುದ್ಧಿಗೆ ಹೃದಯಕ್ಕೆ ಸಂಬಂಧಪಟ್ಟಿದೆ. ಅನುಭವವಾಗಿ ದಕ್ಕದ ಅನೇಕ ಸಂಗತಿಗಳು ಊಹೆ, ತರ್ಕಗಳ ಮೂಲಕವೇ ಅರಿಯಲ್ಪಟ್ಟಿವೆ. ಪ್ರತ್ಯಕ್ಷ, ಅನುಮಾನ, ಶಬ್ದಪ್ರಮಾಣದ ಮೂಲಕ ಗಳಿಸಿಕೊಂಡ ಜ್ಞಾನ, ಧರ್ಮದಂತಹ ಸಂಸ್ಥೆಯಾಗಿ ಬೆಳೆದು, ಸಮುದಾಯವು ನಡೆಯಬೇಕಾದ ಮಾರ್ಗವೊಂದನ್ನು ರೂಪಿಸಿದೆ.

'ಸತ್ಯವಂತರ ಸಂಗವಿರಲು ತೀರ್ಥವ್ಯಾತಕ್ಕೆ
ನಿತ್ಯಜ್ಞಾನಿಯಾದ ಮೇಲೆ ಚಿಂತೆಯಾತಕೆ ॥ಪ॥
ತಾನು ಉಣ್ಣದೆ ಪರರಿಗಿಕ್ಕದ ಧನವಿದ್ಯಾತಕೆ
ಮಾನಹೀನವಾಗಿ ಬಾಳ್ವ ಮನುಜನ್ಯಾತಕೆ
ಜ್ಞಾನವಿಲ್ಲದೆ ನೂರುಕಾಲ ಬದುಕಲ್ಯಾತಕೆ
ಮಾತು ಕೇಳದೆ ಮರೆತು ನಡೆವ ಮಕ್ಕಳ್ಯಾತಕೆ
ಪ್ರೀತಿಯಿಲ್ಲದೆ ಎಡೆಯಲಿಕ್ಕದ ಅನ್ನವ್ಯಾತಕೆ
ನೀತಿಯರಿತು ನಡೆಯದಿರು ಬಂಟನ್ಯಾತಕೆ
ಸೋತು ಹೆಣ್ಣಿಗೆ ಹೆದರಿ ನಡೆವ ಪುರುಷನ್ಯಾತಕೆ
ಸನ್ನೆಯರಿತು ನಡೆಯದಿರುವ ಸತಿಯು ಯಾತಕೆ
ಮುನ್ನ ಕೊಟ್ಟು ಪಡೆಯದಿನ್ನು ಬಯಲ್ಯಾತಕೆ
ಚೆನ್ನ ಆದಿಕೇಶವನಲ್ಲದ ದೈವವ್ಯಾತಕೆ'[೧೭]

ಬದುಕಿನ ಪ್ರತಿನಡೆಯೂ ಅರ್ಥಪೂರ್ಣವಾಗಿರಬೇಕೆಂಬ ಕಾಳಜಿಯು ಇಲ್ಲಿ ವ್ಯಕ್ತವಾಗಿದೆ. ಬದುಕುವುದು ಹಾಗೂ ಅರಿತು ಬದುಕುವುದರಲ್ಲಿ ವ್ಯತ್ಯಾಸವಿದೆ. ಅರಿವಿನ ನಡೆಯು ತಾನು ಬದುಕುಬೇಕು ಇತರರನ್ನು ಬಾಳಗೊಡಬೇಕೆಂಬ ವಿವೇಕದಿಂದ ಕೂಡಿರುತ್ತದೆ. ಇಂತಹ ಜೀವನ

ವಿವೇಕ ಹಾಗೂ ಜೀವಪರ ಧೋರಣೆಗಳು ಕೀರ್ತನೆಯುದ್ದಕ್ಕೂ ಗೋಚರಿಸುತ್ತವೆ. 'ಇರುವ' ಬದುಕನ್ನು 'ಅರಿವಿ'ನಿಂದ ಕಾಣುವ ಹೊಸದೃಷ್ಟಿಯನ್ನು ಈ ಕೀರ್ತನೆ ನೀಡಿದೆ.

'ಸತ್ಯವಂತರ ಸಂಗವಿರಲು ತೀರ್ಥವೇತಕೆ'? ಎಂಬ ಪ್ರಶ್ನೆಯೊಂದಿಗೆ ಆರಂಭವಾಗುವ ಈ ಕೀರ್ತನೆ ಅನೇಕ ಪ್ರಶ್ನೆಗಳನ್ನು ಕೇಳುವ ಮೂಲಕವೇ ಮುಂದುವರೆಯುತ್ತದೆ. ತೀರ್ಥ ಸೇವನೆಯಂತಹ ಬಾಹ್ಯಕ್ರಿಯೆಯಿಂದ ಮಾತ್ರ ಅಂತರಂಗದ ಶುದ್ಧೀಕರಣವಾಗಲಾರದು. ಮನಸ್ಸಿನ ಭ್ರಮೆಗಳು ಕಳೆದು ಸತ್ಯದ ಸ್ಪರ್ಷವಾದಾಗ ಮಾತ್ರ ಮನಸ್ಸು ಪವಿತ್ರವಾಗುತ್ತದೆ. ಸತ್ಯವಂತರ ಸಹಚರ್ಯ ಮನಸ್ಸನ್ನು ಶುದ್ಧಗೊಳಿಸುತ್ತಿರುವಾಗ ತೀರ್ಥದ ಅವಶ್ಯತೆ ಇರುವುದಿಲ್ಲ. ವ್ಯಕ್ತಿಯ ಆತ್ಮಜ್ಞಾನ ಸತ್ಯದ ರೂಪದಲ್ಲಿ ಕಾಣುತ್ತದೆ.

'ಗುರುವಿನ ಒಲುಮೆಯು ಆಗುವ ತನಕ
ದೊರೆಯದಣ್ಣ ಮುಕುತಿ
ಪರಿಪರಿ ಶಾಸ್ತ್ರವನೇಕನೋದಿ
ವ್ಯರ್ಥವಾಯತು ಭಕುತಿ
ಆರು ಶಾಸ್ತ್ರಗಳನೋದಿದರೇನು
ಮೂರಾರು ಪುರಾಣವ ಮುಗಿಸಿದರೇನು
ಸಾರಿ ಸಜ್ಜನರ ಸಂಗವ ಮಾಡದೆ
ಧೀರನಾಗಿ ತಾ ಮೆರೆದರೇನು?'[೧೮]

'ಮೆರೆದರೇನು?' ಇನ್ನುವ ಪ್ರಶ್ನೆಯೆ ಮೆರೆಯಬೇಡ ಎಂದು ಹೇಳುತ್ತದೆ. ಅರಿವಿನ ಸಾಕಾರ ರೂಪವೇ ಗುರುವಾಗಿರುವಾಗ ಗುರುವನ್ನು ಅರಿಯದವನ ಅರಿವು ಹೇಗೆ ಮಾನ್ಯವಾಗುತ್ತದೆ? ಎಂಬ ಪ್ರಶ್ನೆಯ ಹಿಂದೆ ಗುರುಪರಂಪರೆಯ ಬಗೆಗಿನ ಭಕ್ತಿ ವ್ಯಕ್ತವಾಗುತ್ತದೆ. ನಮ್ಮಲ್ಲಿರುವ ಜ್ಞಾನವು ವಿವೇಕವಾಗಿ ದಕ್ಕಬೇಕಾದರೆ, ಅದು ಗುರು-ಹಿರಿಯರ ಜೀವನ ದೃಷ್ಟಿಯಾಗಿಯೇ ನಮಗೆ ದೊರೆಯಬೇಕು. 'ಗುರು ಹಿರಿಯರ ಅರಿಯದವನ ಅರಿವದೇತಕೆ, ಪರಹಿತಾರ್ಥಕ್ಕಿಲ್ಲದವನ ಶರೀರವೇತಕೆ' ಕನಕದಾಸರ ಈ ಕೀರ್ತನೆಯಲ್ಲಿ ಭಕ್ತಿ, ಜ್ಞಾನ ಹಾಗೂ ಕರ್ಮ ಈ ಮೂರು ತತ್ತ್ವಗಳನ್ನು ಒಟ್ಟಾಗಿಸಿ, ನಾವು ಮಾಡುವ ಪ್ರತಿಯೊಂದು ಕರ್ಮವೂ ಅಂತರಂಗದ ನೈಜಕಾಳಜಿಯ ಅಭಿವ್ಯಕ್ತಿಯಾಗಬೇಕೆಂಬ ಹಂಬಲವಿದೆ. 'ತಾನು ತನ್ನನರಿಯದಂಥ ಪ್ರೌಢನೇತಕೆ?' ಎಂಬ ಪ್ರಶ್ನೆ ಸ್ವಯಂ ಅರಿವಿನ ಅಗತ್ಯವನ್ನು ಪ್ರತಿಪಾದಿಸುತ್ತದೆ. ಆತ್ಮಜ್ಞಾನವಿಲ್ಲದೇ ಲೋಕಜ್ಞಾನವು ಪರಿಪೂರ್ಣವಲ್ಲ. ಜ್ಞಾನ ಹಾಗೂ ಕರ್ಮಗಳು ಧ್ಯಾನದಲ್ಲಿ ಅರಳಿದಾಗಲೇ ಪ್ರಜ್ಞೆಯು ವಿಕಾಸವಾಗುತ್ತದೆ. ಅಂತಹ ವಿಕಾಸ ಭಾವವೇ ಭಕ್ತಿ ಎಂಬುದು ಹರಿದಾಸರೆಲ್ಲರ ತಿಳುವಳಿಕೆಯಾಗಿದೆ.

'ಜ್ಞಾನವೊಂದೇ ಸಾಕು ಮುಕ್ತಿಗೆ
ಇನ್ನೇನು ಬೇಕು ಹುಚ್ಚು ಮರುಳೆ
ಪಿತಮಾತೆ ಸತಿಸುತರಗಲಿರಬೇಡ

ಯತಿಯಾಗಿ ಅರಣ್ಯ ಚರಿಸಲುಬೇಡ
ವ್ರತ ನೇಮವ ಮಾಡಿ ದಣಿಯಲುಬೇಡ
ಸತಿಯಿಲ್ಲದವಗೆ ಸದ್ಗತಿ ಇಲ್ಲೊ ಮೂಢ
ಜಪತಪವನೆ ಮಾಡಿ ದಣಿಯಲು ಬೇಡ
ಕಪಿಯಾಗಿ ಅಡಿಗಡಿಗ್ಹಾರಲು ಬೇಡ
ವಾಸದಲಿ ಕಾಲ ಕಳೆಯಲು ಬೇಡ
ಚಪಲತನದಲ್ಲಿ ಫಲವಿಲ್ಲೊ ಮೂಢ
ಸಾಹಸದಲಿ ಶ್ರಮ ಬಿಡಬೇಡ
ಕುಹಕಬುದ್ಧಿಯಲಿ ಕುಣಿದಾಡಬೇಡ
ಪುರಂದರವಿಠಲನ್ನ ಮರೆದಿರಬೇಡ'[೯೯]

ಈ ಕೀರ್ತನೆಯಲ್ಲಿ ಕರ್ಮಕಾಂಡವನ್ನು ನಿರ್ಲಕ್ಷಿಸಿ ಆಚಾರ-ಅನುಷ್ಠಾನಾದಿಗಳಿಗಿಂತ, ಜ್ಞಾನಕ್ಕೆ ಹೆಚ್ಚು ಪ್ರಾಶಸ್ತ್ಯ ನಿಡಲಾಗಿದೆ. ದಾಸರಿಗೆ ಭಕ್ತಿ ಎಂಬುದು ಬರೀ ಬೌದ್ಧಿಕ ವ್ಯಾಪಾರವಾಗಿರದೆ, ಜೀವನದ ಮುಖ್ಯ ಭಾಗವಾಗಿತ್ತು. ಕರ್ಮ ಬಂಧನಗಳನ್ನೆಲ್ಲಾ ಒಮ್ಮೆಲೆ ಹರಿದುಕೊಂಡು ಮುಕ್ತಿ ಸಾಧಿಸಿಕೊಳ್ಳುವುದು ಎಲ್ಲರಿಗೂ ಸಾಧ್ಯವಿಲ್ಲ. ಸಾಮಾನ್ಯರಿಗೆ ಪರಮಾರ್ಥದ ಪರಿಚಯವಾಗಲು ಸಂಸಾರದ ಅಗತ್ಯವಿದೆ. 'ವ್ಯಾಪಾರವನ್ನು ಬಿಡಬೇಕು. ಪಾಪರಹಿತನಾಗಲಿಬೇಕು ಜ್ಞಾನ ದೀಪದ ಬೆಳಕಿನಲ್ಲಿ ಓಡ್ಯಾಡಬೇಕು' ಎಂದು ಸಂಸಾರದ ಚಿಂತೆ, ಅಂಜಿಕೆಗಳನ್ನು ಮೀರಿ ನಿಲ್ಲುವ ಸಾಮರ್ಥ್ಯವನ್ನು ಪಡೆಯಬೇಕೆಂದಿದ್ದಾರೆ.

'ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳವೇ ಲೇಸು
ಉಂಬುಡುವದಕ್ಕಿಲ್ಲದರಸಿನೋಲಗಕ್ಕಿಂತ
ತುಂಬಿದೂರೊಳಗೆ ತಿರಿದುಂಬುವುದೆ ಲೇಸು
ಹಂಬಲಿಸಿ ಹಾಳ್ಹರಟೆ ಹೊಡೆವುದಕ್ಕಿಂತ ಹರಿ
ಯೆಂಬ ದಾಸರ ಕೂಡೆ ಸಂಭಾಷಣೆಯೆ ಲೇಸು
ಒಡನೆ ಹಂಗಿಸುವನೋಗರಮನುಂಬುದಕ್ಕಿಂತ
ಕುಡಿನೀರು ಕುಡಿದುಕೊಂಡಿರುವುದೇ ಲೇಸು
ಬಿಡದೆ ಬಾಂಧವರೊಡನೆ ಕಡಿದಾಡುವುದಕ್ಕಿಂತ
ಅಡವಿಯೊಳಗಜ್ಞಾತ ವಾಸವೇ ಲೇಸು
ಮಸೆಯುತಿಹ ಮತ್ಸರದ ನೆರೆಯೊಳಿರುವುದಕ್ಕಿಂತ
ಹಸನಿಲ್ಲದ ಹಾಳುಗುಡಿಯೇ ಲೇಸು

ಬಿಸಜಾಕ್ಷ ಕಾಗಿನೆಲೆಯಾದಿಕೇಶವರಾಯ
ವಸುಮತಿಯೊಳು ನಿನ್ನ ದಾಸತ್ವವೇ ಲೇಸು'[೨೦]

ಜ್ಞಾನಿಗಳೊಂದಿಗಿನ ಒಡನಾಟ ವ್ಯಕ್ತಿಯ ಆಂತರ್ಯ ಶುದ್ಧಿ ಮತ್ತು ಒಳ್ಳೆಯ ವ್ಯಕ್ತಿತ್ವ ರೂಪುಗೊಳ್ಳಲು ಸಹಾಯವಾಗುತ್ತದೆ. ದಾಸರ ಈ ನುಡಿಗಳಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬುದನ್ನು ತಿಳಿಸಿ ಹೇಳಿದ್ದಾರೆ. ತಿಳಿದವರೊಂದಿಗಿನ ಚರ್ಚೆ, ವಾಗ್ವಾದಗಳಿಂದ ಬುದ್ಧಿ ಚುರುಕುಗೊಳ್ಳುತ್ತದೆ. ವಿವೇಕ ಶೂನ್ಯರಾದ ಅಜ್ಞಾನಿಗಳೊಂದಿಗಿನ ಸಲಿಗೆ ಕೆಟ್ಟ ವಿಚಾರಗಳನ್ನು ಹುಟ್ಟಿಸುತ್ತದೆ. ಇಂದಿನ ಪರಿಸ್ಥಿತಿಗೆ ಹೋಲಿಸಿ ಹೇಳುವುದಾದರೆ, ಬಂಡವಾಳಶಾಹಿ ರಾಷ್ಟ್ರಗಳಿಂದ ಸಾಲ ಪಡೆದು ಬದುಕುತ್ತಿರುವ ಇಂದಿನ ಸ್ಥಿತಿಯಲ್ಲಿ, ದಾಸರ ಈ ನುಡಿಗಳನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾಗಿದೆ. ನವವಸಾಹತುಶಾಹಿ ಆಕ್ರಮಣದ ಹಿನ್ನೆಲೆಯಲ್ಲಿ ಇಂತಹ ರಚನೆಗಳು ಪ್ರಜ್ಞಾರಹಿತನಾದ ಮಾನವನನ್ನು ಎಚ್ಚರಿಸುವಂತಿದೆ. ಇದನ್ನೇ ಜನಪದರು 'ಸಗಣಿಯ ಜೊತೆ ಮುದ್ದಾಡುವುದಕ್ಕಿಂತ, ಗಂಧದ ಜೊತೆ ಜಗಳವೇ ಲೇಸು' ಎಂದು ಇದೇ ಅರ್ಥದಲ್ಲಿ ಬಳಸಿದ್ದಾರೆ.

ದಾಸರು ಆಚರಣೆಗಳನ್ನು ಮಾನವೀಯತೆಯೊಂದಿಗೆ, ಸಂಸ್ಕೃತಿಯೊಂದಿಗೆ ಬೆಸೆಯುವ ಪ್ರಯತ್ನ ಮಾಡಿದ್ದಾರೆ. ವ್ಯಕ್ತಿಗೆ ಜ್ಞಾನವು ಸಂಸ್ಕಾರದತ್ತವಾಗಿ ಬರಬೇಕೆಂದಿದ್ದಾರೆ. ಅದು ಹೊರಗಿನಿಂದ ಬರಬೇಕಾದ ವಸ್ತುವಲ್ಲ. ಒಳಗಿನಿಂದಲೇ ಸೃಷ್ಟಿಯಾಗುವ ವಸ್ತುವಾಗಿದೆ. ಅದಕ್ಕೆ ದೈವ ಸ್ಮರಣೆಯೊಂದೇ ಸಾಧನ. ಮಾನವ ಜೀವನದ ಮೌಲ್ಯಗಳನ್ನು ನಿಷ್ಕರ್ಷಿಸುವುದರಲ್ಲಿ ಜ್ಞಾನ-ಭಕ್ತಿ-ವೈರಾಗ್ಯಗಳ ಪಾತ್ರ ದೊಡ್ಡದು.

'ಏನಾದರೇನು ಮೋಕ್ಷವಿಲ್ಲ ಜ್ಞಾನವಿಲ್ಲದೆ
ವೇದ ಓದಿದರೇನು ಶಾಸ್ತ್ರ ನೋಡಿದರೇನು
ಕಾವಿ ಕಾದಾಡಿ ಗೆದ್ದರೇನು ಜ್ಞಾನವಿಲ್ಲದೆ
ಕಾಶಿ ಹೋದರೇನು ಕಾನನ ಸೇರಿದರೇನು
ಕಾಶಿಪೀತಾಂಬರ ಉಟ್ಟರೇನು, ಜ್ಞಾನವಿಲ್ಲದೆ
ಜಪತಪ ಮಾಡಲೇನು, ಜಾಣತನ ಮೆರೆದರೇನು
ವಿಜಯವಿಠಲನ ಸಾರಿದರೇನು ಜ್ಞಾನವಿಲ್ಲದೆ'[೨೧]

ಇಲ್ಲಿ ಕೇವಲ ವಿಷಯ ಸಂಗ್ರಹವಾಗಲೀ, ಶುಷ್ಕ ಆಚಾರವಾಗಲಿ, ಜ್ಞಾನವಾಗಬಾರದೆಂಬ ತಿಳುವಳಿಕೆ ಬಹಳ ಮುಖ್ಯ. ಶಾಸ್ತ್ರ ಜ್ಞಾನವನ್ನು ಕರಗತ ಮಾಡಿಕೊಂಡ ದಾಸರು, ಕರ್ಮ ಸಿದ್ಧಾಂತಗಳು ಶುಷ್ಕ ಪಾಂಡಿತ್ಯದ ಆಕರಗಳು, ಮನುಷ್ಯನನ್ನು ನಿಯಂತ್ರಿಸಿ ಲೌಕಿಕ ಜೀವನದಲ್ಲಿಯೇ ಬಂದಿಸಿಡಲು ಪ್ರೇರೇಪಿಸುತ್ತವೆ ಎಂದಿದ್ದಾರೆ. ಇವುಗಳನ್ನು ಮೀರುವ ಶಕ್ತಿಯನ್ನು, ಆಧ್ಯಾತ್ಮ ಶಕ್ತಿಯ ಮೂಲಕ ಮನುಷ್ಯ ಸಂಪಾದಿಸಿಕೊಳ್ಳಬೇಕಾಗಿದೆ. ವಿಜಯದಾಸರ ಜ್ಞಾನದ ಶಾಖೆಗೆ ತಕ್ಕಂತಹ ಈ ಸುಳಾದಿಗಳು ಅನುಭವ ಪೂರ್ಣವಾಗಿವೆ. 'ಎಲೆ ಮನವೆ ನಿತ್ಯ ಮಲವ ತೊಳೆಯದಲೆ, ಹಲವು ಕರ್ಮಗಳು ಒಲಿದು ಮಾಡಿದರೇನು?' ಪರಿಶುದ್ಧವಾದ ಮನಸ್ಸು ಮತ್ತು ಸ್ವಚ್ಛವಾದ ಭಕ್ತಿಗಳಿದ್ದಲ್ಲಿ ಮಾತ್ರವೇ ನಾವು ಮಾಡುವ ಕರ್ಮಾದಿಗಳು ಫಲದಾಯಕವೆಂಬ ತತ್ವವೇ ಇಲ್ಲಿ ಮುಖ್ಯವಾಗಿದೆ.

ಮನಸ್ಸಿನ ಮಾಲಿನ್ಯವನ್ನು ಹೋಲಾಡಿಸುವ ಸಾಧನವೆಂದರೆ ಭಕ್ತಿ. ಅಹಂಕಾರ ನಿರಸನವೇ ಭಕ್ತಿಯ ತಳಹದಿಯಾಗಿದೆ. ದಾಸರ ಈ ಸಮರ್ಪಣಾಭಾವ, ಕೇವಲ 'ಜ್ಞಾನ'ವನ್ನಷ್ಟೇ ಬಯಸುವಂತದ್ದಾಗಿದೆ.

ದಾಸರ ಕೀರ್ತನೆಗಳಲ್ಲಿ ಸಮಾಜ ಜೀವನದ ವೈರಾಗ್ಯದ ತಿಳುವಳಿಕೆಯು, ಸಂಸಾರದ ಸತ್ಯಚಿತ್ರದ ಹಿನ್ನೆಲೆಯಲ್ಲಿ ಮೂಡಿಬಂದಿವೆ. ಅದು ಆಧ್ಯಾತ್ಮದ ಬಲವನ್ನು ಬಿತ್ತುವುದರೊಂದಿಗೆ ಜೀವನ ನಿಷ್ಠೆಯನ್ನು ಹೇಳುತ್ತವೆ.

'ಬಹಿರ ಅಂಗಡಿ ಹೂಡಿ ಜನರ ವಂಚಿಸಿದರೆ
ಐಹಿಕ ಫಲವಲ್ಲದೆ ಮೋಕ್ಷವುಂಟೆ
ವಿಹಿತಾವಿಹಿತವ ತಿಳಿದು ಸತ್ಕರ್ಮ ಕಿಂಚಿತು ಮಾಡೆ
ದಹಿಸುವುದು ಅಘರಾಶಿ ಅಹಿಶಾಯಿ ಒಲಿವ'[೨೨]

ಎಂಬ ಮಾತುಗಳು, ನ್ಯಾಯ-ನಿಷ್ಠುರತೆಗಳು ಮಾನವನ ಸಾಧನೆಗೆ ಬೇಕಾದ ಮುಖ್ಯ ಸಾಧನಗಳು ಎಂಬುದನ್ನು ಹೇಳುತ್ತವೆ. ಅದರಿಂದ ಬದುಕು ಸುಖಕರವಾಗಿದ್ದರೂ, ಶಾಶ್ವತ ಸುಖ ನೀಡಲಾರವು ಎಂದಿದ್ದಾರೆ. 'ಕಪಟ ಬುದ್ಧಿಯ ಬಿಟ್ಟು ಮೋಹನವಿಠ್ಠಲನ ಗುಪಿತ ಮಾರ್ಗದಿ ಭಜಿಸು ಸಮರ್ಥವನರಸು' ಎಂದು ಎಚ್ಚರಿಸಿದ್ದಲ್ಲದೆ, ಭಕ್ತನ ಭಕ್ತಿ ಮತ್ತು ನಡೆ-ನುಡಿ, ಪರಮಾತ್ಮನೊಡನಿರುವ ಒಡನಾಟ ಗುಪ್ತವಾಗಿರಬೇಕು ಎಂದಿದ್ದಾರೆ. ಸಾಧನ ಮಾರ್ಗದಲ್ಲಿ ಸಾಧಕನು ಭಕ್ತಿ-ಜ್ಞಾನಗಳೆರಡನ್ನು ಮೇಳೈಸಿಕೊಂಡಿರಬೇಕು. ಏಕೆಂದರೆ 'ಜ್ಞಾನವಿಲ್ಲದ ಭಕ್ತಿಯು ನೀರಲ್ಲಿ ನೆನೆಯಿಟ್ಟ ಕಲ್ಲಿನಂತೆ' ಭಕ್ತಿಗೆ ಜ್ಞಾನವು ಆತ್ಮಸೂಚಿಯಾಗಿ ಬಂದಾಗ, ಸಾಧಕನು ವೈರಾಗ್ಯ ಪಡೆದುಕೊಂಡು ಸಂಪೂರ್ಣ ಜ್ಞಾನಿಯಾಗುತ್ತಾನೆ. ಆದರೆ ಅದು ಸ್ವ-ಅನುಭವದ ಜ್ಞಾನವಾಗಿರಬೇಕು. ಇದನ್ನೇ ಪುರಂದರದಾಸರು 'ಸ್ವಅನುಭವೇ ಜ್ಞಾನ, ಹೀನ ಮಾನವನೇ ಮಾನವನೇ' ಎಂದು ಒತ್ತಿ ಹೇಳಿದ್ದಾರೆ. ವಿಜಯದಾಸರು 'ಏನಾದರೇನು ಮೋಕ್ಷವಿಲ್ಲ, ಜ್ಞಾನವಿಲ್ಲದೆ' ಎಂದಿದ್ದಾರೆ. ಮೋಹನದಾಸರು 'ಏನು ಮಾಡಿದರೇನು ಜ್ಞಾನವಿಲ್ಲದಲೇ ಆನೆಗೆ ಮಜ್ಜನವನು ಮಾಡಿಸಿದ ತೆರದಿ' ಎಂದು ಜ್ಞಾನವಿರದ ಬಾಹ್ಯ ಆಡಂಬರದ ಭಕ್ತಿಯೆಲ್ಲವೂ ವ್ಯರ್ಥವೆಂದಿದ್ದಾರೆ.

'ಎಲ್ಲಾನು ಬಲ್ಲೆನೆಂಬುವಿರಲ್ಲ, ಅವಗುಣ ಬಿಡಲಿಲ್ಲ
ಸೊಲ್ಲಿಗೆ ಶರಣರ ಕಥೆಗಳ ಪೇಳುತ
ಅಲ್ಲದ ನುಡಿಯನು ನುಡಿಯುವಿರಲ್ಲ ॥ಪ॥
ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ
ನೇಮನಿಷ್ಠೆಗಳ ಮಾಡುವಿರಲ್ಲ, ತಾಮಸ ಬಿಡಲಿಲ್ಲ
ತಾವೊಂದರಿಯದೆ ಆಗಮ-ತಿಳಿಯದೆ
ಶ್ವಾನದ ಕುಳಿಯಲಿ ಬೀಳುವಿರಲ್ಲ
ಗುರುಗಳ ಸೇವೆ ಮಾಡಿದಿರಲ್ಲ, ಗುರುತಾಗಲಿಲ್ಲ
ಪರಿ ಪರಿ ದೇಶವ ತಿರುಗಿದಿರಲ್ಲ, ಪೊರೆಯುವರಿನ್ನಿಲ್ಲ

ಅರಿವೊಂದರಿಯದೆ ಆಗಮ ತಿಳಿಯದೆ
ನರಕಕೂಪದಲಿ ಬೀಳುವಿರಲ್ಲ
ಬ್ರಹ್ಮಜ್ಞಾನಿಗಳೆನಿಸುವಿರಲ್ಲ, ಹಮ್ಮು ಬಿಡಲಿಲ್ಲ
ಸುಮ್ಮನೆಯಾಗವ ಮಾಡುವಿರಲ್ಲ, ಸುಳ್ಳನು ಬಿಡಲಿಲ್ಲ
ಗುಮ್ಮನೆ ಪುರಂದರ ವಿಠಲನ ಪಾದಕೆ
ಹೆಮ್ಮೆ ಬಿಟ್ಟು ನೀವೆರಗಲೆ ಇಲ್ಲ'[೨೨]

ಅಜ್ಞಾನ, ಅಹಂಕಾರಗಳನ್ನು ಮತ್ತು ಎಲ್ಲವನ್ನು ಬಲ್ಲೆ ಎಂಬ ಅಹಂಕಾರದ ಆಡಂಬರಗಳು ಸಾಧನೆಗೆ ಸಹಾಯಕವಾಗುವುದಿಲ್ಲ ಎಂಬುದನ್ನು ಪುರಂದರದಾಸರು ಇಲ್ಲಿ ಹೇಳಿದ್ದಾರೆ. 'ಪುರಂದರವಿಠಲನ ಪಾದಕೆ ಹೆಮ್ಮೆ ಬಿಟ್ಟು ನೀವೆರಗಲೆ ಇಲ್ಲ' ಎಂಬ ಈ ಮಾತು ಸಾಧಕನ ಜೀವನ ಸೂತ್ರವಾಗಿದೆ. ಅಹಂಕಾರ, ಹಮ್ಮುಗಳನ್ನು ತೊರೆದು, ಶರಣಾಗದ ಹೊರತು ಜ್ಞಾನದ ಫಲ ನಮಗೆ ದಕ್ಕುವುದಿಲ್ಲವೆಂದಿದ್ದಾರೆ. ಏಕೆಂದರೆ ನಿಜವಾದ ಜ್ಞಾನವೆಂಬುದು ಹಲವು ಶಬ್ದಗಳ ಚಮತ್ಕಾರವಲ್ಲ. ಪುಸ್ತಕದ ಓದು ಅಲ್ಲ. ಅದು ವಿನಯತೆ, ವಿಧೇಯತೆ, ಮಾತಿಗೆ ನಿಲುಕದ ಅಂತರಂಗದ ಧ್ವನಿ. ಇವುಗಳನ್ನು ಕಲಿಸದ ಓದು. ಚರ್ಚೆ ವಾದಗಳೆಲ್ಲವೂ ವ್ಯರ್ಥವೆಂಬುದು ದಾಸರ ನಿಲುವು. ಶುಷ್ಕ ಪಾಂಡಿತ್ಯ ಮನುಷ್ಯನನ್ನು ದುರ್ಮಾರ್ಗಕ್ಕೆ ನಡೆಸುತ್ತದೆಯೇ ಹೊರತು, ಆತ್ಮಜ್ಞಾನಕ್ಕೆ ಸಹಾಯಕವಾಗುವುದಿಲ್ಲ.

ಅನುಭಾವಿ ಸಾಧಕಾವಸ್ಥೆಯಲ್ಲಿರುವಾಗ, ತನ್ನನ್ನು ಅರ್ಪಿಸಿಕೊಂಡಿರುವ ದೈವದ ಸ್ವಸ್ವರೂಪ ಜ್ಞಾನವನ್ನು ಪಡೆಯಲು ಹಂಬಲಿಸುತ್ತಾನೆ. ಆ ಅನುಭಾವ ಮಾರ್ಗದಲ್ಲಿ ನಡೆಯಲು ಅತನ ಮನಸ್ಸು ದೃಢಗೊಳ್ಳಬೇಕು. ಮನಸ್ಸಿನ ದೃಢತೆಯೇ ಎಲ್ಲಾ ಸಾಧನೆಗಳಿಗೆ ಮೂಲ. ಅದಕ್ಕಾಗಿ ದೇಹವು ಅನುಭಾವವೆಂಬ ಅಡುಗೆಯನ್ನು ಸಿದ್ಧಪಡಿಸಲು ಗಡಿಗೆಯಾಗಬೇಕೆಂದಿದ್ದಾರೆ.

'ಅಡುಗೆಯನು ಮಾಡಬೇಕಣ್ಣ-ನಾನೀಗ ಜ್ಞಾನ
ದಡಿಗೆಯನು ಮಾಡಬೇಕಣ್ಣ ॥ಪ॥
ಅಡಿಗೆಯನು ಮಾಡಬೇಕು ಮದಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ
ಸಡಗರದಲಿ ಮನೆಯಸಾರಿಸಿ ॥ಅ.ಪ॥
ತನ್ನಗುರುವ ನೆನೆಯಬೇಕಣ್ಣ
ತನುಭಾವವೆಂಬ ಭಿನ್ನ ಕಶ್ಮಲ ಕಳೆಯಬೇಕಣ್ಣ
ಒನಕೆಯಿಂದ ಕುಟ್ಟಿ ಕೇರಿ ತನಗೆ ತಾನೆ ಆದ ಕೆಚ್ಚ
ನನುವರಿತು ಇಕ್ಕಬೇಕು ಅರಿವರ್ಗವೆಂಬ ತುಂಟರಳಿಸಿ
ತತ್ವಭಾಂಡವ ತೊಳೆಯಬೇಕಣ್ಣ-ಸತ್ಯಾತ್ಮವಾಗಿ
ಅರ್ತಿ ಅಕ್ಕಿಯ ಮಥಿಸಬೇಕಣ್ಣ

ಕತ್ತರಿ ಮನವೆಂಬ ಹೊಟ್ಟನು ಎತ್ತಿ ಒಲೆಗೆ ಹಾಕಿ ಇನ್ನು
ಮುತ್ತಿಕೊಂಡಿಹ ಮಮತೆಯನ್ನು ಎತ್ತಿ ಎಸರ ಇಂಗಿಸುತಲಿ'[೨೪]

ಇಲ್ಲಿ ಕನಕದಾಸರು ಮಾನವ ಜೀವನಕ್ಕೆ ಅವಶ್ಯಕವಾದ ಆಹಾರವನ್ನಿಟ್ಟುಕೊಂಡು ಆಹಾರವನ್ನು ತಯಾರಿಸುವಾಗ ಯಾವ ಪ್ರಕ್ರಿಯೆಗಳು ನಡೆಯತ್ತವೆಯೋ, ಆ ಪ್ರಕ್ರಿಯೆಗಳನ್ನು 'ಅರಿವು' ಪಡೆದುಕೊಳ್ಳಬೇಕಾದ ಪ್ರಕ್ರಿಯೆಗಳೊಂದಿಗೆ, ತುಲನಾತ್ಮಕ ಚಿಂತನೆಗೆ ಒಳಪಡಿಸಿರುವುದು ಪ್ರಸ್ತುತ ಕೀರ್ತನೆಯಲ್ಲಿ ಕಂಡುಬರುತ್ತದೆ. ಇಲ್ಲಿ ಅಡುಗೆ ಮಾಡುವಲ್ಲಿನ ಶುದ್ಧೀಕರಣದ ಜೊತೆಗೆ ಆಹಾರದ ಸದ್ವಿನಿಯೋಗದ, ಮಹತ್ವದ ತಿಳಿವಳಿಕೆಯೂ ಇದೆ. ದೇಹದ ಮೂಲಕವೇ ಅರಿವನ್ನು ಜೀವನ ಕ್ರಮವಾಗಿಸುವ ರೀತಿ ಸಾಮಾಜಿಕ ಸಾಮರಸ್ಯಕ್ಕೆ ಕಾರಣವಾಗುತ್ತದೆ ಎಂಬ ನಿಲುವಿದೆ. ಧಾನ್ಯದ ಅಡುಗೆ ದೇಹಕ್ಕೆ ಪುಷ್ಟಿ ನೀಡಿದರೆ, ಅರಿವಿನ ಅಡುಗೆ ಆತ್ಮಕ್ಕೆ ಸಂತುಷ್ಟಿಯನ್ನು ನೀಡುತ್ತದೆ.

ಪುರಂದರದಾಸರ 'ಅನುಭಾವದಡಿಗೆಯ ಮಾಡಿ' ಮತ್ತು ಕನಕದಾಸರ 'ಅಡುಗೆಯವನು ಮಾಡಬೇಕಣ್ಣ' ಎಂಬ ಕೀರ್ತನೆಗಳಲ್ಲಿ ತತ್ತ್ವಜ್ಞಾನವು ಅರಿವಿನ ಮೂಲ ಆಕರವೆಂದು ಹೇಳುತ್ತವೆ. ಮಾನವನನ್ನು ಪ್ರಾಣಿ ಪ್ರಪಂಚದಿಂದ ಶ್ರೇಷ್ಠನನ್ನಾಗಿಸಲು ಇಂತಹ ತತ್ತ್ವಶಾಸ್ತ್ರದ ಅರಿವಿನ ಸಂಪಾದನೆಯ ವಿವಿಧ ಹಂತಗಳನ್ನು ದಾಟುವ ಪ್ರಯತ್ನ ಮಾಡಬೇಕಾದ ಅನಿವಾರ್ಯತೆಯ ಸಂದೇಶವನ್ನು ಮತ್ತು, ಅಂತರಂಗದಲ್ಲಿ ನಡೆಯಬೇಕಾದ ಕ್ರಿಯೆಗಳನ್ನು ಬಹಿರಂಗಕ್ಕೆ ತಂದು, ಲೌಕಿಕ ಸಾದೃಶ್ಯಗಳ ಮೂಲಕ ಪರಿಣಾಮಕಾರಿಯಾಗಿ ಸಾಧಿಸಿದ್ದಾರೆ. ಏಕೆಂದರೆ ವ್ಯಕ್ತಿ ಜೀವನದಲ್ಲಿ ಶಿಸ್ತು ಮತ್ತು ಪೋಷಣೆ ಎರಡು ಅಗತ್ಯ.

'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ಪ॥
ವೇದಶಾಸ್ತ್ರ ಪಂಚಾಂಗವ ಓದಿಕೊಂಡು ಅನ್ಯರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಚಂಡಭಟರಾಗಿ ನಡೆದು ಕತ್ತಿ ಢಾಲು ಕೈಲಿ ಹಿಡಿದು
ಖಂಡ-ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಅಂಗಡಿ ಮುಂಗಟ್ಟನ್ಹೂಡಿ ವ್ಯಂಗ್ಯ ಮಾತುಗಳನ್ನಾಡಿ
ಭಂಗಬಿದ್ದು ಗಳಿಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಮರಳು ಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಬೆಲ್ಲದಂತೆ ಮಾತನಾಡಿ ಎಲ್ಲರನ್ನು ಮರಳು ಮಾಡಿ
ಸುಳ್ಳು ಬೊಗಳಿ ತಿಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಕೊಟ್ಟಣವನು ಕುಟ್ಟಿಕೊಂಡು ಕಟ್ಟಿಗೆಯನು ಹೊತ್ತುಕೊಂಡು
ಕಷ್ಟ ಮಾಡಿ ಉಣ್ಣುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಸಂನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನಾ ವೇಷಗಳೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ'[39]

ಲೋಕ ಸಂಚಾರಿಗಳಾದ ದಾಸರಿಗೆ, ಸಮಾಜದ ಒಳಿತು-ಕೆಡುಕುಗಳ ಬಗ್ಗೆ ಅರಿವಿತ್ತು. ರಾಜಕೀಯ, ಸಾಮಾಜಿಕ, ಧಾರ್ಮಿಕ, ಔದ್ಯೋಗಿಕ ವಲಯಗಳ ಜನರ ರೀತಿ-ನೀತಿಗಳ ಬಗ್ಗೆ ಅಪಾರವಾದ, ಆಳವಾದ ಪರಿಜ್ಞಾನವಿತ್ತೆಂಬುದನ್ನು ಈ ಕೀರ್ತನೆ ತಿಳಿಸುತ್ತದೆ. ಕನಕದಾಸರು ಇಲ್ಲಿ ನಕರಾತ್ಮಕ ಧೋರಣೆಯನ್ನು ವ್ಯಕ್ತಪಡಿಸಿದ್ದಾರೆ. ಸಾಮಾನ್ಯ ಕೃಷಿಕನಿಂದ ಹಿಡಿದು ವೇದಾಧ್ಯಯನ ಮಾಡಿದವರವರೆಗೂ ಎಲ್ಲರೂ ಹಣಕ್ಕಾಗಿಯೇ ಬದುಕಿರುವರೆಂಬುದನ್ನು ಮಾತ್ರ ವಿಷಯಾಭಿವ್ಯಕ್ತಿಗೆ ವಸ್ತುವಾಗಿ ಸ್ವೀಕರಿಸಿದ್ದಾರೆ. ಅಧ್ಯಯನ, ಅಧ್ಯಾಪನ ಒಂದು ವ್ಯಾಪಾರದ ವಸ್ತುವಾಗಿ, ಹಣ ಸಂಪಾದನೆಗಾಗಿಯೇ ಎಂದು ಹೇಳಿರುವುದು ಜನರಲ್ಲಿ ಮೌಲ್ಯಗಳ ಕುಸಿತದ ವಾಸ್ತವ ಚಿತ್ರಣವಾಗಿದೆ. 'ಮನಮುಟ್ಟಿ ಮಾಡುವ ಭಕ್ತಿ ಮುಕ್ತಿಗಾಗಿ' ಎನ್ನುವ ತಾತ್ತ್ವಿಕ ಸಿದ್ಧಾಂತವೂ ಕೂಡ ಭಕ್ತಿಯಿಲ್ಲದವರು, ಲೌಕಿಕ ಆಸೆಗಳ ಈಡೇರಿಕೆಗಾಗಿ ಮಾಡುವ ಕೆಲಸವೆಂಬಂತೆ ಕಾಣುತ್ತದೆ. ಬಹುಜನರ ರೀತಿ-ನೀತಿಗಳು ಇಂದು ಹೀಗೆಯೇ ಇದೆ ಎಂಬುದು ವಾಸ್ತವ ಸತ್ಯವಾಗಿದೆ. ಕಲಿಯುಗದ ಜನರು ಮೌಲ್ಯಾಧಾರಿತ ಜೀವನವನ್ನು ಮಾಡದ, ಎಲ್ಲಾ ವರ್ಣಗಳ ನಡವಳಿಕೆಯ ಬಗ್ಗೆ ಈ ಕೀರ್ತನೆಯಲ್ಲಿ ಟೀಕೆ ಮಾಡಿದ್ದಾರೆ. ಕಾರ್ಯ ಸಾಧನೆಗೆ ಮಹತ್ವ ಕೊಡಬೇಕು. ಕಾರ್ಯ ತತ್ಪರತೆಯನ್ನು ಬೆಳೆಸಿಕೊಳ್ಳಬೇಕು. ಹಣದ ಸ್ಥಾನ ಗೌಣವಾಗಬೇಕು. ಆದರೆ ಇದಕ್ಕೆ ತದ್ವಿರುದ್ಧವಾದ ನೀತಿಯನ್ನು ಎಲ್ಲಾ ಬಗೆಯ ಉದ್ಯೋಗಿಗಳು ಬೆಳೆಸಿಕೊಂಡಿದ್ದಾರೆ. ಶರಣರ ವೃತ್ತಿಮೌಲ್ಯ, ವೃತ್ತಿಗೌರವಗಳು ದಾಸರ ಕಾಲಾವಧಿಯಲ್ಲಿ ಕುಸಿತಗೊಂಡಿರುವುದು ಸ್ಪಷ್ಟವಾಗುತ್ತದೆ. ಆಸೆಗಳು ಹೊಟ್ಟೆ-ಬಟ್ಟೆಯ ಅಗತ್ಯಕ್ಕೆ ಮಾತ್ರ ಸೀಮಿತವಾಗಿಲ್ಲ. ಅಗತ್ಯವಾದಷ್ಟು ಸಂಪಾದನೆಯಾದ ಮೇಲೆ, ಇನ್ನೂ ಉತ್ತಮವಾದ ಆಹಾರ-ಬಟ್ಟೆ-ಕೀರ್ತಿ, ಅಧಿಕಾರ ಮುಂತಾದವುಗಳನ್ನು ಅಪಾರವಾಗಿ ಹೊಂದಬೇಕೆಂಬ ಆಸೆ ಮಿತಿಮೀರಿದೆ. ಅದಕ್ಕಾಗಿ ನ್ಯಾಯ-ಧರ್ಮ, ನೀತಿಯ ಚೌಕಟ್ಟನ್ನು ಮೀರಿ ಸಂಪಾದನೆಗಾಗಿ ತೊಡಗಿದ್ದಾನೆ. ಈ ಸಮಸ್ಯೆ ಅಂದಿನ ಸಮಾಜದಲ್ಲಿ ಮಾತ್ರವಲ್ಲ, ಇಂದಿನ ಸಮಾಜದ ಪ್ರಸ್ತುತತೆಯೂ ಆಗಿದೆ.

'ಮುತ್ತು ಬಂದಿದೆ ಕೇರಿಗೆ ಜನರು ಕೇಳಿ
ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ
ಥಳಥಳಿಸುವ ಮುತ್ತು ಕಮಲ ನೇತ್ರದ ಮುತ್ತು
ಕಲುಷ ಪರ್ವತಕ್ಕಿದು ಕುಲಿಶವಾಗಿಹ ಮುತ್ತು
ಹಲಧಾರನುಜನೆಂಬ ಪವಿತ್ರನಾಮದ ಮುತ್ತು
ಒಲಿದು ಭಜಿಪರ ಭವದ ತರಿದು ಕಾಯುವ ಮುತ್ತು
ಅಂಜದಿದ್ದವರಿಗೆ ಅಂಜಿಕೆ ತೋರುವ ಮುತ್ತು
ಭಂಜಿಸಿದವರಿಗೆ ಭಯವ ತೋರುವ ಮುತ್ತು

ಸಂಜೀವರಾಯರ ಹೃದಯದೊಳಗಿಹ ಮುತ್ತು
ಕಂಜಭವಾದಿಗಳೆ ಶಿರಸಾವಹಿಸುವ ಮುತ್ತು
ಜ್ಞಾನವೆಂಬ ದಾರದಲ್ಲಿ ಪೋಣಿಸಿ ನೋಡುವ ಮುತ್ತು
ಜ್ಞಾನಿಗಳ ಮನದಲ್ಲಿ ಮೆರೆವ ಮುತ್ತು
ಆನಂದತೀರ್ಥರ ಮನದಲೊಪ್ಪುವ ಮುತ್ತು
ಶ್ರೀನಿಧಿ ಆದಿಕೇಶವನೆಂಬ ಅಣಿಮುತ್ತು'[೨೧]

ಮುತ್ತಿಗೆ ಅಧಿಕ ಮೌಲ್ಯವಿದೆ. ಬೆಲೆಯಿದೆ. ಮುತ್ತಿನ ಪರಿಶುದ್ಧತೆ, ಹೊಳಪು ನಿರ್ಮಲತೆ, ಅದನ್ನು ಧರಿಸುವುದರಿಂದ ಆಗುವ ಸಂತೋಷಗಳೆಲ್ಲವೂ, ದೈವವನ್ನು ಒಲಿಕೊಳ್ಳುವುದರಿಂದ ಉಂಟಾಗುವ ಲಾಭವನ್ನು ಸಂಕೇತಿಸುತ್ತವೆ. 'ಜ್ಞಾನವೆಂಬ ದಾರದಲ್ಲಿ ಪೋಣಿಸಿ ನೋಡುವ ಮುತ್ತು' ಈ ಸಾಲು ಜ್ಞಾನ ಮಾರ್ಗದಿಂದ ದೈವ ಸಾಕ್ಷಾತ್ಕಾರವನ್ನು ಪಡೆಯುವ ಸಾಧ್ಯತೆಯನ್ನು ಸ್ಪಷ್ಟಪಡಿಸುತ್ತವೆ. ಇಲ್ಲಿ ದಾಸರ ಸರಳ ಭಕ್ತಿಮಾರ್ಗ, ಮಾನವ ಪ್ರೀತಿ, ಪರಸ್ಪರ ಅರಿವು ಮೂಡಿಸಿ, ಮನುಷ್ಯ ಸಂಬಂಧಗಳನ್ನು ಗಟ್ಟಿಗೊಳಿಸುವ ಪ್ರಯತ್ನ ಕಾಣುತ್ತಿದೆ.

'ನಗೆಯು ಬರುತಿದೆ ಎನಗೆ ನಗೆಯು ಬರುತಿದೆ
ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದನೆ ಕಂಡು
ಪರರ ವನಿತೆಯೊಲುಮೆಗೊಲಿದು
ಹರುಷದಿಂದ ಅವಳ ಬೆರೆದು
ಹರಿವ ನೀರೊಳಗೆ ಮುಳುಗಿ
ಬೆರಳನೆಣಿಸುತಿಹರ ಕಂಡು
ಪತಿಯ ಸೇವೆ ಬಿಟ್ಟು ಪರ
ಪತಿಯ ಕೂಡೆ ಸರಸವಾಡಿ
ಸತತ ಮೈಯ ತೊಳೆದು ಹಲವು
ವ್ರತವ ಮಾಳ್ಪ ಸತಿಯ ಕಂಡು'[೨೨]

ಈ ರಚನೆ ಸಾತ್ವಿಕ ಗುಣದ ಹೆಸರಿನಲ್ಲಿ, ಎಂಥೆಂಥಹ ಅನಾಚಾರಗಳು ನಡೆಯುತ್ತವೆ ಎನ್ನುವುದನ್ನು ಹೇಳಿದಂತಿದೆ. ಪ್ರತಿಯೊಬ್ಬರು ತಮ್ಮ-ತಮ್ಮ ತ್ರಿಕರಣ ಶುದ್ಧಿಯನ್ನು ಸಾಧಿಸಿದರೆ, ಏಳಿಗೆ ತನಗೆ ತಾನೇ ಆಗುತ್ತದೆ. ದೃಢ ಭಕ್ತಿಯಿಲ್ಲದ ಮನ ನೀರಿನಲ್ಲಿ ಮಿಂದು ಮಡಿ ಮಾಡುವುದಕ್ಕಿಂತಲೂ ನಾವು ಮಾಡುವ ಸತ್ಕಾರ್ಯಗಳು ಮನದ ಮೈಲಿಗೆಯನ್ನು ತೊಲಗಿಸುತ್ತವೆ. ಅದೇ ನಿಜವಾದ ತನುಶುದ್ಧಿ. 'ಮನವ ಶೋಧಿಸಬೇಕು ನಿಚ್ಚ ದಿನದ ಮಾಡುವ ಪಾಪಪುಣ್ಯದ ವೆಚ್ಚ' ಎಂಬಲ್ಲಿ ಆತ್ಮಶೋಧನೆಯ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ದಾಸರ ಇಂತಹ ರಚನೆಗಳು ವೈವಿಧ್ಯಮಯ ಬದುಕಿನ ಸಂಕೀರ್ಣ ಅನುಭವಗಳೆಂದೇ ಹೇಳಬಹುದು. ವಸಾಹತುಶಾಹಿಯ ದಾಸ್ಯದಲ್ಲಿ ಮನುಷ್ಯ ಸಂಬಂಧಗಳೇ ನಶಿಸುತ್ತಿರುವ ಈ ಕಾಲದಲ್ಲಿ, ದಾಸರ ಮಾನವೀಯ ಅಂತಃಕರಣ, ಸಾಮಾಜಿಕ

ಚಿಂತನೆಗಳು, ಮಾನಸಿಕ ಶುದ್ಧೀಕರಣದಂತಹ ಮೌಲ್ಯಗಳು ವ್ಯಕ್ತಿಯ ಮನಸ್ಸನ್ನು ಪಕ್ವವಾಗಿಸುವ ಮೂಲಕ ಸಾಮಾಜಿಕ ಬದಲಾವಣೆಗೆ ಅವಕಾಶ ಕಲ್ಪಿಸಿದ್ದಾರೆ.

ಹಿಂದಿನಿಂದಲೂ ಹೆಣ್ಣನ್ನು ದೇಹವಾದಿ ಮತ್ತು ಸೌಂದರ್ಯವಾದಿ ನೆಲೆಗಳಲ್ಲಿಯೇ ಕಾಣಲಾಗಿದೆ. ಅದು ಹೆಚ್ಚಾಗಿ, ಹೆಣ್ಣನ್ನು ದೇಹ ಮತ್ತು ಸೌಂದರ್ಯ ಮೂಲದ ಭೋಗದ ವಸ್ತು ಮತ್ತು ಭೋಗಿಸಲೇಬೇಕಾದ ವಸ್ತುವಾಗಿ ಕಾಣಲಾಗಿದೆ. ಪಾರಮಾರ್ಥ ಸಾಧನೆಗೆ ಅವಳ ಇಂಥ ಸೌಂದರ್ಯ ಅಡ್ಡಿಯಾಗಿ ನಿಂತಿದೆ ಎನ್ನುವ ರೂಪದಲ್ಲಿ ಚಿತ್ರಿಸಿದ್ದು ಪ್ರಮುಖವಾಗಿ ಕಾಣುತ್ತದೆ. ಮೊದಲಿನಿಂದಲೂ ಹೆಣ್ಣಿನ ಅರಿವಿನ ಕ್ರಿಯೆಗಳನ್ನು ಒಂದು ಸೃಜನಾತ್ಮಕ ದೃಷ್ಟಿಕೋನದಲ್ಲಿ ನೋಡದೆ ನಕರಾತ್ಮಕವಾಗಿ ಹಾಗೂ ಪೂರ್ವಗ್ರಹಿತ ನೆಲೆಗಳಲ್ಲಿ ನೋಡಿದ ಕಾರಣದಿಂದಾಗಿ ಅವಳ ತಿಳುವಳಿಕೆ ಗೌಣವಾಗಿದೆ. ಆದರೂ ಮೌಖಿಕ ರೂಪಗಳಲ್ಲಿ ಸೋಬಾನೆ ಹಾಡು, ಸ್ತುತಿ ಗೀತೆಗಳು, ದೇವರ ನಾಮದಂತಹ ಅನೇಕ ಜನಪದ ಹಾಡಿನ ರೂಪಗಳಲ್ಲಿ ಅವಳ ಜ್ಞಾನವಲಯ ವಿಸ್ತಾರಗೊಂಡಿದೆ.

ಹರಿದಾಸರ ಕಾಲಾವಧಿಯಲ್ಲಿ ಹೆಳವನಕಟ್ಟೆ ಗಿರಿಯಮ್ಮ, ಹರಪ್ಪನಹಳ್ಳಿ ಭೀಮವ್ವ, ನಿಡಗೂರಕಿ ಜೀವೂಬಾಯಿ ಇಂತಹ ಅನೇಕ ಕೀರ್ತನಕಾರ್ತಿಯರು, ಮಾತಿಗೆ ಅವಕಾಶವಿಲ್ಲದ ಪರಿಸರದಲ್ಲಿ ಅನೇಕ ಸೃಜನಶೀಲ ಬರಹಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಹೆಣ್ಣಿನ ಅಭಿವ್ಯಕ್ತಿ ನೆಲೆಗಳನ್ನು ಮೌನಗೊಳಿಸಿದ ಪಾರಂಪರಿಕ ವ್ಯವಸ್ಥೆಯೊಳಗಡೆಯೇ ಹೆಣ್ಣಿನ ಜ್ಞಾನ ಮತ್ತು ಅವಳ ಇರುವಿಕೆಯನ್ನು ನೆಲೆಗೊಳಿಸಿದ್ದಾರೆ. ಈ ಆತ್ಮಸ್ಥೈರ್ಯವೇ ಅವರಲ್ಲಿ ತನ್ನ ಬದುಕಿಗೆ ತಾನೇ ಅಧಿಕೃತತೆಯನ್ನು ತಂದುಕೊಳ್ಳಬೇಕೆಂಬ ಅರಿವನ್ನು ಮೂಡಿಸಿದೆ.

ದಾಸರು ದಾಸತ್ವವನ್ನು ಸ್ವ-ಇಚ್ಛೆಯಿಂದ ಸ್ವೀಕರಿಸಿದ್ದರೂ, ಹೆಣ್ಣಿನ ದಾಸ್ಯ ಸ್ಥಿತಿಯ ಬಗ್ಗೆ ದ್ವಿಮುಖ ಅಭಿಪ್ರಾಯಗಳಿರುವುದು ಕಾಣುತ್ತದೆ. ಕೆಲವೊಂದು ಕಡೆ ಮಹಿಳಾಪರ ದೃಷ್ಟಿಕೋನ ಕಂಡರೂ, ಅವರ ಚಿಂತನೆಗಳೆಲ್ಲಾ ಪುರುಷ ನೆಲೆಯಲ್ಲಿಯೇ ಕೇಂದ್ರಿಕೃತವಾಗಿವೆ. 'ಹಾಕಿದ್ದ ನೀನುಂಡು ಬೇಕೆಂದು ಬೇಡದಿರು' ಎಂದು ಹೇಳುತ್ತಾ ಸಹಿಸುವ ಗುಣವೇ ಹೆಣ್ಣಿನ ಮೌಲ್ಯವೆಂದು ಒಪ್ಪಿಸಿದ್ದಾರೆ. 'ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ, ಹಡೆದವಳ ಎದೆಕೊರಳ ಕೊಯ್ಯಂಥ ಚೂರಿ' ಎಂದೆಲ್ಲಾ ಹೆಣ್ಣಿನ ರೂಪ, ಯೌವ್ವನ, ಪ್ರೀತಿ, ವಾತ್ಸಲ್ಯ ಒಟ್ಟಾಗಿ ಅವಳ ಅಸ್ತಿತ್ವವನ್ನು ತುಚ್ಛೀಕರಿಸಿದ್ದಾರೆ. 'ಈಸಬೇಕು ಇದ್ದು ಜಯಿಸಬೇಕು' ಎಂದು ನುಡಿದ ದಾಸರು ಹೆಣ್ಣಿನ ಅಸ್ತಿತ್ವದ ಕುರಿತು ಹೊಂದಿದ ಧೋರಣೆ ಅವರ ಸಂಕುಚಿತ ಮನಸ್ಥಿತಿ ಮತ್ತು ಮಿತಿಯನ್ನು ಸೂಚಿಸುತ್ತದೆ.

ಪುರುಷರು ಹೇರಿದ ನೈತಿಕ ಮೌಲ್ಯಗಳನ್ನು ಒಪ್ಪಿತ ಮೌಲ್ಯವನ್ನಾಗಿಸಿಕೊಂಡ ಕೀರ್ತನಕಾರ್ತಿಯರು, ಕೌಟುಂಬಿಕ ನೆಲೆಯಲ್ಲಿಯೇ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿದ್ದರು. ವೈಯಕ್ತಿಕ ಬದುಕಿನ ತಲ್ಲಣ, ಹೆಣ್ಣಿನ ಮನಸ್ಸಿನ ಆಸೆ, ನಿರೀಕ್ಷೆ, ಅವಳ ಬದುಕಿನ ನೋವು-ನಲಿವು, ಸಮಾಜ ಆಕೆಯನ್ನು ಕಾಣುವ ರೀತಿ ಮೊದಲಾದವುಗಳನ್ನು ಭಕ್ತಿಯನ್ನಾಗಿಸಿ ಕೀರ್ತನೆಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಇವರ ಸಾಹಿತ್ಯ ವಸ್ತು, ವಚನ ಸಾಹಿತ್ಯದಂತೆ ಬಂಡಾಯದ ನೆಲೆಯಲಿಲ್ಲ. ಸಂಪ್ರದಾಯ ಕಟ್ಟುಪಾಡುಗಳನ್ನು ಇದ್ದ ಹಾಗೆಯೆ ಒಪ್ಪಿಕೊಂಡಿದ್ದಾರೆ. ಪುರುಷಾಧೀನವಾಗಿಯೇ ಹೆಣ್ಣು ಉಳಿದಿರಬೇಕಾದ ವ್ಯವಸ್ಥೆ

ಹೆಣ್ಣಿನ ಪ್ರತಿರೋಧ, ಪ್ರತಿಭಟನೆಯ ನೆಲೆಗಳನ್ನು ನಾಶಪಡಿಸುತ್ತಾ ಭೌದ್ಧಿಕಾದಿ ಎಲ್ಲಾ ನೆಲೆಗಳಲ್ಲಿ ಅವಳನ್ನು ಹತ್ತಿಕ್ಕುವ ತಂತ್ರವನ್ನು ರೂಪಿಸಿಕೊಳ್ಳುತ್ತಲೇ ಇರುತ್ತದೆ. ಪ್ರಶ್ನಿಸುವ ಮತ್ತು ವಿರೋಧಿಸುವ ಗುಣ ಹೆಣ್ಣಿನದಲ್ಲ ಎನ್ನುವುದನ್ನು ಒಪ್ಪಿಕೊಂಡ ಮಹಿಳೆಯರು, ಧಾರ್ಮಿಕವಾಗಿ ಅದರಲ್ಲೂ ಹೆಚ್ಚು ವೈದಿಕ ಪರಂಪರೆಯ ಕಟ್ಟುಪಾಡುಗಳನ್ನು ತಮ್ಮ ಕೀರ್ತನೆಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ವೈಧವ್ಯ, ಮನೆ ಗೆಲಸದ ಒತ್ತಡದ ನಡುವೆಯೂ, ಜೀವನದಿಂದ ವಿಮುಖರಾಗದೆ, ದೈವಿನೆಲೆಯ ಆಧಾರದಿಂದ ತಮಗಿದ್ಧ ಸೀಮಿತ ಓದಿನೊಳಗೆ, ತಿಳುವಳಿಕೆಯೊಳಗೆ ಅಕ್ಷರ ರೂಪ ಕೊಟ್ಟಿದ್ದಾರೆ.

'ಎಂದು ನಿನ್ನ ದಯವು ಆಗೊದೋ ಇಂದಿರೇಶ
ಬಂದ ದುರಿತ ಹಿಂದಕೋಗೋದೊ
ಮಂದ ಬುದ್ಧಿಯಿಂದ ನಾಲಿಗೆ ಹಿಂದೆ-ಮುಂದೆ ನೋಡುತಿಹುದು
ಸಂದೇಹ ಬಿಟ್ಟು ಗೋವಿಂದನ ನೆನೆಯಲಿಕ್ಕೆ'[೨೮]

ಎನ್ನುವ ಭೀಮವ್ವನಿಗೆ, ತನ್ನ ಜ್ಞಾನದ ಮಿತಿ ಹಾಗೂ ತನ್ನ ಅಜ್ಞಾನದ ಅರಿವು ಆಕೆಗೆ ಗೊತ್ತಿದೆ. ತಮ್ಮ ಜ್ಞಾನದಿಂದ, ಭಕ್ತಿಯಿಂದ ಹರಿಯನ್ನು ಒಲಿಸಿಕೊಳ್ಳಲು ಸಾಧ್ಯವಾಗಲಿಲ್ಲ ಎನ್ನುವ ಕೊರಗು ಆಕೆಯದು. ಆಕೆ ಅಸಹಾಯಕತೆಯಿಂದ ಅವನು ತಾನಾಗಿ ಒಲಿಯುವಂತೆ, ದಯೆ ತೋರುವಂತೆ ಬೇಡಿಕೊಂಡಿದ್ದಾಳೆ. ಬಹುವಿಧದಲ್ಲಿ ಹಂಬಲಿಸಿ, ಬೇಡಿಕೊಂಡರೂ, ಹರಿಯ ಒಲುಮೆ ಪ್ರಾಪ್ತವಾಗಿಲ್ಲ. ಕಠಿಣ ಪರೀಕ್ಷೆಗಳು ಎದುರಾದಾಗ 'ಕಲ್ಲು ನಾಯೆನೋ ಕೈವಲ್ಯದಾಯಕನೆ, ಕಲ್ಲು ಕರುಣದಿಂದ್ಹೆಣ್ಣಾಗಿರಲುದ್ಧಾರ ಕೇಳೊ' ತನ್ನನ್ನು ಸಂವೇದನೆಯೇ ಇಲ್ಲದ ಕಲ್ಲು ಎಂದು ಭಾವಿಸಿದ್ದಿಯಾ? ಎಂದು ದೈವಕ್ಕೆ ಪ್ರಶ್ನೆ ಹಾಕುತ್ತಾಳೆ. ತನ್ನಲ್ಲಿ ಕಲ್ಲುತನದ ಅಂಶವೂ ಇರುವುದನ್ನು ಆಕೆ ತನ್ನ ಆತ್ಮಪರಿಶೀಲನೆಯಿಂದ ತಿಳಿದುಕೊಂಡಿದ್ದಾಳೆ. ಹರಿಯ ದಯೆವೊಂದು ಪ್ರಾಪ್ತವಾಗುವಂತೆ, ಅರಿತುಕೊಳ್ಳುವಂತೆ ಮಾಡೆಂದು ಪ್ರಾರ್ಥಿಸುವ ಆರ್ತತೆಯಲ್ಲಿ ನೈಜತೆಯಿದೆ. ವಾತ್ಸಲ್ಯ, ಮಾಧುರ್ಯ ಭಾವದ ಭಕ್ತಿಯ ಅಭಿವ್ಯಕ್ತಿಯಲ್ಲಿ, ಅವಳ ಬುದ್ಧಿವಂತಿಕೆಯ ಅರಿವಾಗುತ್ತದೆ.

ಹರಿ-ಹರರಲ್ಲಿ ಭೇದ ಎಣಿಸದಿರುವುದು ಭಾಗವಂತ ಪರಂಪರೆಯ ಎಲ್ಲಾ ಕೀರ್ತನಕಾರರಲ್ಲಿಯೂ ಕಾಣಬಹುದಾಗಿದೆ. ಹರಿ-ಹರ ಹೆಸರಿನಿಂದ ಮಾತ್ರ ಬೇರೆ-ಬೇರೆಯಾದರೂ, ಗುಣ, ಮಹಿಮೆಗಳಲ್ಲಿ ಒಂದೇ ಎನ್ನುವ ವಿವೇಕವಾಣಿ ಇಲ್ಲಿದೆ.

'ಈತ ರಂಗನಾದ ಹರಿಯು
ಆತ ಲಿಂಗನಾದ ಹರನು
ಗಿರಿಜಾ ಪತಿಯಾದ ನಾತ
ಗಿರಯ ಬೆನ್ನಲಿ ತಾಲಿದನೀಡ
ಸ್ಮರನ ಮಡುಹಿದಾತನಾತ
ಸ್ಮರನ ಜನಕನಾದ ನೀತ
ಈತ ಲಿಂಗದೇವ ಶಿವನು

ಆತ ರಂಗಧಾಮ ವಿಷ್ಣು
ಮಾತ ಕೇಳೆಲೊ ಮಂಕು ಮನುಜ
ಮನದ ಅಹಂಕಾರ ಬಿಟ್ಟು'[೨೯]

ಶಿವ ಮೇಲು, ಹರಿ ಮೇಲು ಎಂದು ಕಚ್ಚಾಡುವ ಮಂಕು ಬುದ್ಧಿಯ ಜನರಿಗೆ ತಿಳಿಹೇಳುವ ಉದ್ದೇಶ ಗಿರಿಯಮ್ಮನದು. ಮತ-ತತ್ವಗಳ ಅಹಂಕಾರವನ್ನು ತ್ಯಜಿಸಿ, ನಿರ್ಮಲ ಮನಸ್ಸಿನಿಂದ ವಿಚಾರಿಸಿದರೆ ಇಬ್ಬರೂ ಒಂದೇ, ಇಬ್ಬರೂ ಪರಸ್ಪರ ಪೂರಕ ಎಂಬ ಸತ್ಯವನ್ನು ಹೇಳಿದ್ದಾಳೆ. ಲೌಕಿಕ ಕಾಳಜಿಯೊಂದಿಗೆ ಮಾನವೀಯ ಕಳಕಳಿ ಇಲ್ಲಿದೆ.

'ತಾಳು-ತಾಳು-ತಾಳಬೆಕೆನ್ನುವಿರೋ ಗುರುವೆ
ಇನ್ನೆಷ್ಟು ದಿನ ತಾಳಬೇಕೋ ತಿಳಿಯಾದೋ।
ತನುವಿನೊಳಗೆ ಬಲವು ಇಲ್ಲಾ ಮನದೊಳಗೆ ದೃಢವಿಲ್ಲಾ
ಇನ್ನಾದರೂ ದಯಮಾಡಿ ಸಲಹಯ್ಯಾ ಪ್ರಭುವೇ'[೩೦]

ಕೀರ್ತನೆಯ ಪರಂಪರೆಗನುಸಾರವಾಗಿಯೇ ರಾಧಾಭಾಯಿ ತಮ್ಮ ಕೃತಿಗಳನ್ನು ರಚಿಸಿದ್ದಾರೆ. ಸಂಸಾರ ಮತ್ತು ಅದರ ಕಷ್ಟ-ಕೋಟಲೆಗಳಿಂದ ಇನ್ನೂ ಮುಕ್ತಿ ದೊರೆಯದಿರುವುದನ್ನು ಎಲ್ಲಾ ಹೆಂಗಸರ ಧ್ವನಿಯಾಗಿ ವ್ಯಕ್ತಪಡಿಸಿದ್ದಾರೆ. ಮಾನಸಿಕವಾಗಿ ಶಾರೀರಿಕವಾಗಿ ಜರ್ಝರಿತವಾಗಿದ್ದರೂ, ಇನ್ನೂ ಕರುಣೆ ತೋರಿಸದೆ ಎಷ್ಟು ದಿನ ಕಾಯಬೇಕು ಎಂದಿದ್ದಾರೆ. ಇಲ್ಲಿ ತಾಳ್ಮೆಯ ಪರೀಕ್ಷೆಗಿಂತ ಹೆಚ್ಚಾಗಿ ನೋವು-ತೊಳಲಾಟಗಳನ್ನು ಹೇಳುತ್ತಾ, ವಿವೇಕ ಶೂನ್ಯ ಜಗತ್ತು ಹೆಣ್ಣಿನ ಮೇಲೆರುವ ಒತ್ತಡಗಳ ಪರಿಣಾಮವನ್ನು ಚಿತ್ರಿಸಿದ್ದಾರೆ. ಸಮಾಜದಲ್ಲಿ ಆ ಕಾಲದಲ್ಲಿದ್ದ ನೀತಿ-ನಿಯಮಗಳನ್ನು ಪಾಲಿಸದಿದ್ದರೆ, ಅವರೆಲ್ಲರೂ ಕೆಟ್ಟವರೆನಿಸಿಕೊಳ್ಳುವ ಸಾಧ್ಯತೆಗಳೇ ಹೆಚ್ಚಾಗಿರುವುದನ್ನು ಸೂಕ್ಷ್ಮವಾಗಿ ತಿಳಿಸುತ್ತಾರೆ.

ಸ್ತ್ರೀಯರೆಂದರೆ ಸಂಸ್ಕೃತಿಯ ಹರಿಕಾರರು ಮತ್ತು ವಾಹಕರು ಅವರು ಪ್ರತಿದಿನ ಮಾಡುವ ಸ್ನಾನಕ್ಕೆ ಎಷ್ಟು ಪ್ರಾಮುಖ್ಯತೆ ದೊರಕಿಸಿಕೊಟ್ಟಿದ್ದಾರೆಂದರೆ ಅವರು ಎಲ್ಲೇ ಮೀಯಲಿ ಅಲ್ಲಿ ದೇಶದ ಪ್ರಮುಖ ನದಿಗಳನ್ನು ಕುರಿತು ಹಾಡಿದ್ದಾರೆ. ಅಲ್ಲಿನ ವಿಶೇಷ ವಿಷಯಗಳನ್ನು ಹಾಡಿನ ಮೂಲಕ ತಿಳಿಸಿದ್ದಾರೆ.

'ಕೃಷ್ಣ ಗೋದಾವರಿ ನಂದಿನಿ ನಳಿನೀ ಹೇಮಾವತಿ
ಹರಿದ್ವತೀ ಕಾವೇರಿ ಕಪಿಲಾ ಸಿಂಧು ಸರಯು
ನೇತ್ರಾವತೀ ಕುಮುದ್ವತೀ ಭಾಗೀರಥೀ ಭೋಗವತಿ
ಜಾಹ್ನವಿ ಜಯಮಂಗಲಿ ತ್ರಿಜಗತ್ಪಾವನೀ ವಿಷ್ಣು
ಪಾದೋದ್ಭವೆ ದೇವಿ ಕೃಷ್ಣವೇಣಿ ಅಘನಾಶಿನೀ
ಗಂಗಾಯಮುನಾ, ತ್ರಿವೇಣಿ ದಕ್ಷಿಣ ಅಘನಾಶಿನೀ'[೩೧]

ಹೆಣ್ಣಿನ ಮಾತನ್ನು ಮೌನವಾಗಿಸಿದ ಪರಿಸರದಲ್ಲಿ ಯಾವುದೇ ಮಾಧ್ಯಮದ ನೆರವೂ ಇಲ್ಲದೆ ಇಷ್ಟೆಲ್ಲಾ ನದಿಗಳ ಹೆಸರನ್ನು ತಿಳಿದಿರುವುದು ಹೆಣ್ಣಿನ ತಿಳುವಳಿಕೆ ವಿಸ್ತಾರತೆಯನ್ನು ತಿಳಿಸುತ್ತದೆ. ಜೀವೂಬಾಯಿಯವರು ನದಿಗಳ ಪಟ್ಟಿ ಮಾಡುತ್ತಾ ಗಂಗೆ, ಗೋದಾವರಿ, ತುಂಗೆಯರ ಬಗ್ಗೆ ಇರುವ ಕಥೆಗಳು ಮತ್ತು ಅವುಗಳ ಪವಿತ್ರತೆಯನ್ನು ತಿಳಿಸಿದ್ದಾರೆ.

ಇಲ್ಲಿ ಸ್ನಾನವೆನ್ನುವುದು ಕೇವಲ ಹೊರಮೈ ಕೊಳೆಯನ್ನು ತೆಗೆಯುವುದಲ್ಲ. ಒಳಮನಸ್ಸಿನ ಕೊಳೆಯನ್ನು ಹೋಗಲಾಡಿಸಿ, ದಾಸ್ಯ ಭಾವದಿಂದ ಹರಿಯನ್ನು ಸ್ತುತಿಸುವುದು. ಇದು ನಮ್ಮ ಪ್ರಾಚೀನರು ತಮ್ಮ ದೈನಂದಿನ ಕೆಲಸಗಳನ್ನು ಮಾಡುವಲ್ಲಿ ತೋರುವ ಶ್ರದ್ಧೆ ಮತ್ತು ವಿವೇಚನೆಯನ್ನು ಸ್ಪಷ್ಟಪಡಿಸುತ್ತದೆ.

ಹೆಣ್ಣಿನ ವಿಚಾರ, ಆಕೆಯ ಸ್ಥಾನಮಾನದ ಬಗ್ಗೆ ದಾಸರದು ಪರಂಪರೆಯ ದೃಷ್ಟಿಯಿದೆ. ಅವರ ವಿಚಾರದಲ್ಲಿ ಸಹಾನುಭೂತಿಯೂ ಇದೆ. ಆದರೆ 'ಹೆಂಡತಿಗೆ ಸ್ವಾತಂತ್ರ್ಯ ಕೊಡದಿರು' ಎಂದು ಹೇಳುವಲ್ಲಿ ಎಚ್ಚರಿಕೆಯ ಮಾತಿದೆ. ಕಾಮಾಸಕ್ತಿ ಖಂಡಿಸುವ ಇವರು ಸ್ತ್ರೀ ನಿಂದಕರಲ್ಲ, ಐಹಿಕ ಬದುಕಿನ ವಿರೋಧಿಗಳು ಆಗಿರಲಿಲ್ಲ. ಬದುಕಿನ ಕಷ್ಟ, ನಿಷ್ಠುರಗಳನ್ನು ಯಥಾರ್ಥವಾಗಿ ಚಿತ್ರಿಸುವಂತೆಯೇ ಜಾಗೃತಿಗೊಳಿಸುವ ಚೈತನ್ಯ ಮತ್ತು ಬದುಕಿನ ಪ್ರಜ್ಞೆ ದಾಸ ಸಾಹಿತ್ಯದಲ್ಲಿದೆ.

ಹರಿದಾಸರು ಅಭಿವ್ಯಕ್ತಿ ಮಾಧ್ಯಮವಾಗಿ ಆರಿಸಿಕೊಂಡ ಇನ್ನೆರಡು ಮಾಧ್ಯಮಗಳೆಂದರೆ ಸುಳಾದಿ ಮತ್ತು ಉಗಾಭೋಗ. ಸುಳಾದಿ ತಾಳ ಪ್ರಧಾನವಾಗಿದ್ದು, ವಾದ್ಯ ನರ್ತನಗಳಿಗೆ ಸರಿಯಾಗಿ ಸಮನ್ವಯಗೊಳಿಸುತ್ತದೆ. ಪ್ರತಿಯೊಂದು ಸುಳಾದಿಯಲ್ಲಿ ಆವೇಶಭಾವ ಕಾಣಿಸುತ್ತದೆ. ಆಲೋಚನೆ, ಸೂತ್ರಪ್ರಾಯವಾದ ಮಾತಿನ ಸರಣಿ, ಆಧ್ಯಾತ್ಮದ ಮಹತ್ವ ಇವೆಲ್ಲವೂ ಇಲ್ಲಿ ಸ್ವಾನುಭವದ ಮೂಲಕ ಬಂದಿರುವುದನ್ನು ಗಮನಿಸಬಹುದಾಗಿದೆ. ಉಗಾಭೋಗ ಸ್ವರ ಪ್ರಧಾನವಾದ ಗೀತೆ. ಅನುಭವಕ್ಕೆ ಬಂದ ವಿಷಯಗಳನ್ನು ಸಂಕ್ಷೇಪವಾಗಿ ಮಾತಿನ ರೂಪದಲ್ಲಿ ಹೇಳಿರುವುದೇ ಉಗಾಭೋಗ.

ಹರಿದಾಸರು ಮಾಧ್ವತತ್ತ್ವ, ಭಕ್ತಿ ವಿಚಾರಗಳನ್ನು ವಿವರವಾಗಿ ವಿಶದೀಕರಿಸಲು 'ಸುಳಾದಿ' ಮಾಧ್ಯಮವನ್ನು ಬಳಸಿಕೊಂಡಿದ್ದಾರೆ.

'ಜ್ಞಾನ ಭಕುತಿ ಏನು ಇಲ್ಲದ ಹೀನವಾದ ಕರಣ
ನಾನು ನನ್ನದೆಂಬ ಹಮ್ಮು ಮಮತೆಗಳು
ಏನ ಮಾಡಲು ಬೆನ್ನ ಬಿಡವು
ನೀನೇ ಸ್ವತಂತ್ರನು ನಿನ್ನ ದಾಸನು ನಾನು
ಎನಿಸೆನು ಪುರಂದರ ವಿಠಲ'[೨೨]

ಈ ಸುಳಾಗಿ ಭಕ್ತಿ-ಜ್ಞಾನಗಳಿಂದ ದೂರವಾದ ವ್ಯಕ್ತಿಯ ಹೀನ ಸ್ಥಿತಿಯ ಬಗ್ಗೆ ಹೇಳುತ್ತಿದೆ. ಹಮ್ಮು-ಬಿಮ್ಮುಗಳು ವ್ಯಕ್ತಿಯ, ವ್ಯಕ್ತಿತ್ವ ನಾಶಕ್ಕೆ ಕಾರಣವಾಗುತ್ತವೆಂಬುದು ತಿಳಿದ ವಿಷಯವೇ. ವಿದ್ಯೆ ನಮಗೆ ಸ್ವತಂತ್ರ ವಿಚಾರಶೀಲತೆಯನ್ನು ಬೆಳೆಸಬೇಕು. ಅದಕ್ಕೆ ತಕ್ಕಂತ ವಿನಯವೂ ಅಗತ್ಯ. ಅದಕ್ಕೆ ಹಿರಿಯರು 'ವಿದ್ಯೆಗೆ ವಿನಯವೇ ಭೂಷಣ' ಎಂದಿದ್ದಾರೆ. ವ್ಯಕ್ತಿಯ ಜೀವನವೇ ಒಂದು ತಪಸ್ಸು.

ಆದರೆ ಆ ತಪಸ್ಸು ದೇಹ ದಂಡನೆಯ ಕಠಿಣ ಸಾಧನೆ, ಲೌಕಿಕ ತ್ಯಾಗಗಳಲ್ಲಿ ಇಲ್ಲ. ಆತನ ಅಧ್ಯಯನ, ಸಂಯಮ, ಧ್ಯಾನ, ನಡೆ–ನುಡಿಗಳಲ್ಲಿ ವ್ಯಕ್ತವಾಗಬೇಕು. ನಾವು ಪಡೆಯುವ ಜ್ಞಾನ ಅನುಭವಕ್ಕೆ ಇಳಿದು ಆಚರಣೆಯಲ್ಲಿ ಅಳವಡಿಸಬೇಕು. ಅಂದಾಗಲೇ ನಿನ್ನ ದಾಸನು ನಾನು ಎನ್ನುವ ಮೂಲಕ ಎಲ್ಲವನ್ನು ಅರ್ಪಿಸಿ ಸ್ವತಂತ್ರನಾಗಲು ಸಾಧ್ಯ

'ಬೆಲ್ಲದ ಕಟ್ಟೆಯ ಬೇವಿನ ಬೀಜವ ಬಿತ್ತಿ
ಜೇನು ಮಳೆಗರೆದರೆ ವಿಷ ಹೋಹುದೇನಯ್ಯ
ಏನ ಓದಿದರೇನು ಏನ ಕೇಳಿದರೇನು
ಮನದೊಳಗಿನ ತಾಮಸ ಮಾಣದನಕ
ಏನ ಓದಿದರೇನು ಏನ ಕೇಳಿದರೇನು
ಕೊಳಲಧ್ವನಿಗೆ ಸರ್ಪ ತಲೆದೂಗುವಂದದಿ
ಎನ್ನೊಡೆಯ ಕೇಳಯ್ಯ ಶ್ರೀಪತಿ ಪುರಂದರವಿಠಲ'[೩೩]

ವ್ಯಕ್ತಿಯ ಆಲೋಚನೆಗಳು ಹೇಗಿರುತ್ತವೆಯೋ, ಅದರ ಫಲಗಳು ಹಾಗೇ ಇರುತ್ತವೆ ಎಂಬುದಕ್ಕೆ ಈ ಉಗಾಭೋಗ ಉದಾಹರಣೆಯಾಗಿದೆ. 'ಬಿತ್ತಿದಂತೆ ಬೆಳೆ' ಎಂಬಂತೆ ಬೇವಿನ ಬೀಜದಿಂದ ಬೇವಿನ ಕಹಿಯೇ ಹುಟ್ಟುತ್ತದೆಯೇ ಹೊರತು, ಬೆಲ್ಲದ ಸಿಹಿ ಹುಟ್ಟಲಾರದು. ವ್ಯಕ್ತಿ ಬೌದ್ಧಿಕ ಪರಿಸರದಲ್ಲಿ ಅನೇಕ ಶಕ್ತಿಗಳ ಪ್ರಭಾವದಿಂದ ಶ್ರೀಮಂತನಾಗಿ ಬೆಳೆಯುತ್ತಿದ್ದರೂ ಆತ ನಿಜವಾಗಿಯೂ ತೇಜೋಮಯನಾಗಿ, ವಿಚಾರವಂತನಾಗಿ ಬೆಳೆಯಬೇಕಾದರೆ ಅಂತರಂಗದ ಆತ್ಮಶಕ್ತಿಯ ವೀಕ್ಷಣೆ ಅನಿವಾರ್ಯ. ಅದಕ್ಕೆ ಕೇವಲ ಪಠ್ಯ ವಿಷಯಗಳಿಂದ ಪಡೆಯುವ ವಿದ್ಯೆಯಷ್ಟೇ ಜ್ಞಾನವಲ್ಲ. ಅವುಗಳ ಮೌಲ್ಯವನ್ನು ಅರಿತು ಅಳವಡಿಸಿಕೊಂಡು ನಡೆಯುವುದೇ ನಿಜವಾದ ಜ್ಞಾನ. ಅವನೇ ನಿಜವಾದ ಜ್ಞಾನಿಯಾಗುತ್ತಾನೆ.

'ಸ್ನಾನ ಮಾಡಿದರಿನ್ನೇನು ಫಲವೊ
ಮೌನ ಮಾಡಿದರಿನ್ನೇನು ಫಲವೊ
ದಾನ ಮಾಡಿದರಿನ್ನೇನು ಫಲವೊ
ಸ್ನಾನ ಮೌನ ದಾನಾ ನಾನಾ ಕರ್ಮವೆಲ್ಲ
ಭಾನು ಉದಯದಲಿ ನೀನೆದ್ದು ಭಕುತಿಲಿ
ಶ್ರೀ ನಾರಾಯಣನೆಂಬೊ ನಾಮ
ಆನಂದವಾಗಿ ಒಮ್ಮೆ ಕೊನೆ ನಾಲಿಗೆಯಿಂದ
ನೀ ನೆನೆಯೊ ನೆನೆಯೊ ಮನವೆ
ಜ್ಞಾನ ಗೋಚರ ವಿಜಯವಿಠಲನ್ನ
ಧ್ಯಾನದಲ್ಲಿ ಒಮ್ಮೆ ನೆನೆದರೆ ಸಾಕು'[೩೪]

ವಿಜಯದಾಸರ ಉಗಾಭೋಗದಲ್ಲಿ ಲೋಕನೀತಿಯನ್ನು ಕುರಿತು ಚರ್ಚಿಸಿದ್ದಾರೆ. ಅರ್ಥಪೂರ್ಣ ಆಚರಣೆಗಳಿಗೆ ಪ್ರಾಶಸ್ತ್ಯವಿತ್ತಿದ್ದಾರೆ. ಕೇವಲ ಶುಷ್ಕರೀತಿಯ ಬಾಹ್ಯಾಚಾರ ಮುಕ್ತಿಯ ಸಾಧನವಲ್ಲ. ಸ್ನಾನ, ಮೌನ, ದಾನ ಮೊದಲಾದ ಕರ್ಮಗಳಿಗಿಂತ 'ಶ್ರೀ ನಾರಾಯಣನ ನಾಮ ನೆನೆಯೋ ಮನವೆ' ಎಂದಿದ್ದಾರೆ. ಮಡಿಯೆಂಬುದು ಲೌಕಿಕ ಜಗತ್ತಿನಲ್ಲಿ ಎಂತಹ ಸ್ವರೂಪ ಪಡೆದಿದೆ ಎಂಬುದನ್ನರಿತಿದ್ದ ದಾಸರು, ಸ್ನಾನದ ಅಂತರಾರ್ಥದ ಕಡೆಗೆ ಜನರ ಮನವನ್ನು ಸೆಳೆದಿದ್ದಾರೆ. ಆಚಾರದ ಮಡಿಗಿಂತ ಅಂತರಂಗದ ವಿಚಾರದ ಮಡಿ ಮಹತ್ವದ್ದು ಎಂದಿದ್ದಾರೆ. ದಾಸರ ಇಂತಹ ಮಾತುಗಳು ಲೋಕ ವ್ಯವಹಾರದ ಬಗ್ಗೆ ವ್ಯಕ್ತಿಯನ್ನು ಜಾಗೃತಗೊಳಿಸುತ್ತವೆ. ಇಂತಹ ನೈತಿಕ ಜೀವನವೇ ಅಂತರಂಗದ ವಿಕಾಸಕ್ಕೆ ಕಾರಣವಾಗುತ್ತದೆ.

'ಮನಶುದ್ಧಿಯಿಲ್ಲದವಗೆ ಮಂತ್ರದ ಫಲವೇನು
ತನುಶುದ್ಧಿಯಿಲ್ಲದವಗೆ ತೀರ್ಥದ ಫಲವೇನು
ಮಿಂದಲ್ಲಿ ಫಲವೇನು ಮೀನು ಮೊಸಳೆಯಂತೆ
ನಿಂದಲ್ಲಿ ಫಲವೇನು ಶ್ರೀಶೈಲದ ಕಾಗೆಯಂತೆ
ಹೊರಗೆ ಮಿಂದು ಒಳಗೆ ಮೀಯದವರ ಕಂಡು
ಬೆರಗಾಗಿ ನಗುತಿದ್ದ ಪರಂದರವಿಠಲ'[೨೫]

ಈ ಉಗಾಭೋಗ ಅಂತರಂಗದ ಶುದ್ಧಿಯ ಮಹತ್ವವನ್ನು ಹೇಳುತ್ತದೆ. ಅಂತರಂಗದ ಶುದ್ಧಿ ಮಾತ್ರ ಭೋಗದ ಬದುಕಿನಲ್ಲಿ ಗೆಲುವನ್ನು ತರುತ್ತದೆ. ಹೊರಗೆ ಮಿಂದು ಒಳಗೆ ಮಿಯದವರನ್ನು ಶ್ರೀಶೈಲದ ಕಾಗೆಗೆ ಹೋಲಿಸಿದ್ದಾರೆ. ಕಾಗೆ ಅಪಶಕುನದ, ಅಶುದ್ಧಿಯ ಸಂಕೇತವೆಂಬ ನಂಬಿಕೆಯಿದೆ. ಅದು ಯಾವ ಪುಣ್ಯಕ್ಷೇತ್ರದಲ್ಲಿ ಮಿಂದರೂ ಶುದ್ಧವೆನಿಸದು. ಅಂತರಂಗದ ಶುದ್ಧಿಯಿಲ್ಲದವರು ಈ ಕಾಗೆಗಳಂತೆ ಎಂದಿದ್ದಾರೆ. ಆದರೆ ಕಾಗೆ ಕೇವಲ ಅಪಶುಕುನದ ಸಂಕೇತವಲ್ಲ. ಅದು ಶುಭಶಕುನದ ಸಂಕೇತವೂ ಹೌದು. ಒಳ್ಳೆಯತನ, ಕೆಟ್ಟತನಗಳು ಕೇವಲ ವಸ್ತುವಿನಲ್ಲಿ ಮಾತ್ರ ಇರುವುದಿಲ್ಲ. ನಾವು ನೋಡುವ ದೃಷ್ಟಿಯಲ್ಲಿದೆ. ಬಸವಣ್ಣ 'ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನ್ನೆಲ್ಲಾ' ಎಂದು ಅದರ ಶ್ರೇಷ್ಠತೆಯನ್ನು ಹೇಳಿದ್ದಾರೆ. ಸ್ವಾರ್ಥಿ ಮಾನವ ಹಂಚಿಕೊಂಡು ತಿನ್ನದೆ ಇಂದಿಗೆ ನಾಳೆಗೆ ಎಂದು ಬಚ್ಚಿಡುವ ಮಂಕುಬುದ್ಧಿಯ ಮಾನವನಿಗಿಂತ, ತನ್ನ ಬಂಧು-ಬಳಗದೊಂದಿಗೆ ಹಂಚಿಕೊಂಡು ತಿನ್ನುವ ಕಾಗೆಯ ಮನಸ್ಥಿತಿ ಸಕಲ ಜೀವರಲ್ಲಿ ಚೇತನವನ್ನು ಕಾಣುವಂತದ್ದಾಗಿದೆ.

'ಗುರುವ್ಯಾಸ ಮುನಿಯೆಂದು
ಧರಣಿಯೊಳಗೆ ಪೆಸರಾಗಿ
ನೆರೆದು ಸಜ್ಜನರಿಗೆ ಗರೆದು ನ್ಯಾಯಶಾಸ್ತ್ರ
ಅರುಹಿ ವೈಷ್ಣವ ಮತ ಅದರಂದ ಉದ್ಧರಿಸಿ
ಪೊರೆದು ನಂಬಿದವರ ಎರಡೊಂದು ಜನ್ಮ ಸುಂ
ದರ ಗರ್ಭದಲ್ಲಿ ಬಂದು

ಪರಿಪೂರ್ಣ ಜ್ಞಾನ ಭಕುತಿ ವೈರಾಗ್ಯದಲ್ಲಿ ನಡೆದು
ಎರಡೊಂದು ಉತ್ತಮ ಗುರು ಸಂತತಿಯೊಳಗೆ
ಚರಿಸಿ ಚತುರ್ಥಾಶ್ರಮ ಧರಿಸಿ ಚತುರರಾಗಿ
ಭರತಖಂಡದೊಳು ಪಸರಿಸಿ ಕೀರ್ತಿಯ ಪಡೆದು
ಭರದಿಂದ ವಾಲಗವು ಸುರರಿಂದ ಕೈಗೊಳ್ಳುತ್ತ
ಪರಲೋಕದಲ್ಲಿ ವಪ್ಪೆ
ನಿರಾಮಯ ಗುಣನಿಧಿ ವಿಜಯವಿಠ್ಠಲರೇಯನ
ನೆರೆನಂಬಿ ಪ್ರತಿದಿನ ಮೆರೆದು ಮೂರ್ಧನ್ಯರಾಗಿ'[೩೬]

ಶಿಕ್ಷಣ ಕಾರ್ಯವು ಪೂರ್ಣಗೊಳ್ಳಬೇಕಾದರೆ ಗುರೂಪದೇಶ ಶಿಷ್ಯನಿಗೆ ಅಗತ್ಯ, ಗುರುವಿನ ಬೋಧನೆಯಲ್ಲಿ ಜೀವಕಳೆ ಇದೆ, ವ್ಯಕ್ತಿತ್ವವಿದೆ. ಗುರು ಸನ್ನಿಧಿಯಲ್ಲಿ ವಿಷಯ ಚರ್ಚೆಗೆ ಅವಕಾಶವಿದೆ. ಶಿಷ್ಯನು ಸಂದಿಗ್ಧ ವಿಷಯಗಳನ್ನು ತನ್ನ ಉಪಾಧ್ಯಾಯನೊಂದೆಗೆ ನಿಷ್ಕರ್ಷಿಸಿ. ಚರ್ಚಿಸಿ ತನ್ನ ಅನುಮಾನಗಳನ್ನು ನಿವಾರಿಸಿಕೊಳ್ಳಲು ಅನುಕೂಲವಿದೆ. 'ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ' ಎನ್ನುವ ನಾಣ್ನುಡಿಯಂತೆ ಗುರೂಪದೇಶದಿಂದಲ್ಲದೆ ವಿದ್ಯೆಯು ಪಕ್ವವಾಗದು, ಫಲಿಸಲಾರದು, 'ಗುರು ಇಲ್ಲದ ಮಠವು, ಹಿರಿಯರಿಲ್ಲದ ಮನೆಯು, ಅರಸಿಲ್ಲದೂರು–ಇವು ಮೂರು 'ನೂಲಿ ಹರಿದ ಹೊರಸಿನಂತೆ' ಕಟ್ಟುಪಾಡು ಇಲ್ಲದೆ, ಬಲವಿಲ್ಲದೆ ಬಿದ್ದುಹೋಗುವವು. ಅದರಂತೆ ವ್ಯಕ್ತಿಯ ಸಂಸ್ಕಾರಕ್ಕೆ ಭಕ್ತಿ–ಜ್ಞಾನ–ವೈರಾಗ್ಯಗಳು ಅಗತ್ಯವಾಗಿ ಬೇಕು. ಮಕ್ಕಳಲ್ಲಿ ವಿಧೇಯತೆ ತುಂಬುವ, ಸುಲಭವಾಗಿ ವಿಷಯವನ್ನು ಹರಹುವ ವ್ಯಾಸರಾಯರಂತಹ ಗುರುವಿರಬೇಕೆಂಬುದು ದಾಸರ ಹಂಬಲವಾಗಿದೆ. ಗುರುಗಳ ಸಹಚರ್ಯವಿಲ್ಲದ ಜ್ಞಾನ 'ಉರಗನ ಉಪವಾಸದಂತೆ' ಎಂದು ಗುರು ಕರುಣೆ, ಪ್ರೇರಣೆ, ಗುರುವಿನ ಮಹತ್ವ, ಮತ್ತು ಜನರನ್ನು ಎಚ್ಚರಿಸುವಂತಹ ಗುರುವಿನ ಅವಶ್ಯಕತೆ ನಮಗಿದೆ.

ನಿಜವಾದ ವಿದ್ಯೆ, ಒಂದು ಜೀವನ ವಿಧಾನ. ನಮ್ಮ ದೇಶದ ಮಣ್ಣಿನ ಅನುಭವಗಳಿಂದ ದೊರೆತ ಮೌಲ್ಯಗಳನ್ನು ವಿದ್ಯಾರ್ಥಿಗಳಿಗೆ ಕೊಡುವಂತಾಗಬೇಕು. ಜ್ಞಾನಸಂಪಾದನೆ, ಸಂಸ್ಕೃತಿಯ ಅಭಿವ್ಯಕ್ತಿ. ನಡವಳಿಕೆಯ ಪಾಠ, ಜೀವನ ಮೌಲ್ಯಗಳ ಆರಾಧನೆಯಂತಹ ಶಿಕ್ಷಣವನ್ನು ಅಧ್ಯಾಪಕರು ನೀಡುವಂತಾಗಬೇಕು.

ಹರಿದಾಸರ ಪ್ರಕಾರ ಮನುಷ್ಯನನ್ನು ಮಂದಮತಿಯನ್ನಾಗಿಸುವ, ದುಃಖದ ಕೂಪಕ್ಕೆ ತಳ್ಳುವ ಮೂರು ಅಂಶಗಳೆಂದರೆ ಹೆಣ್ಣು, ಹೊನ್ನು, ಮಣ್ಣು ಇವುಗಳ ಅತಿಯಾದ ಮೋಹವೇ ಮನುಷ್ಯನ ನೋವು–ನಿರಾಸೆಗಳಿಗೆ ಕಾರಣವಾಗಿದೆ.

'ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ
ನೇಮನಿಷ್ಠೆಗಳ ಮಾಡುವಿರಲ್ಲ ತಾಮಸ ಬಿಡಲಿಲ್ಲ
ತಾವೊಂದರಿಯದೆ ಆಗಮ ತಿಳಿಯದೆ
ಶ್ವಾನನ ಕುಳಿಯಲಿ ಬೀಳುವಿರಲ್ಲ'[೩೭]

ಈ ಕಾಮ ಮೋಹಗಳು ಮನುಷ್ಯನನ್ನು ಶತ-ಶತಮಾನಗಳಿಂದ ಆವರಿಸಿರುವುದು ಆಶ್ಚರ್ಯಕರ ವಿಷಯವೇನಲ್ಲ. ಆದರೆ ಇಲ್ಲಿ ಕಾವಿತೊಟ್ಟ ಯೋಗಿಗಳು ಇದರಿಂದ ಮುಕ್ತರಾಗಿಲ್ಲ. ಭಕ್ತಿಯ ಹೆಸರಿನಲ್ಲಿ ಅನೇಕ ಹೆಣ್ಣು ಮಕ್ಕಳನ್ನು ಶೋಷಿಸಿರುವ ಕುರುಹುಗಳು ಇಲ್ಲಿವೆ. ದೇಹ, ಮನಸ್ಸುಗಳನ್ನು ಹತೋಟಿಗೆ ತರುವ ಮೂಲಕ ಭಕ್ತಿ-ಜ್ಞಾನ-ಕರ್ಮಗಳನ್ನು ಪ್ರಧಾನವಾಗಿಟ್ಟುಕೊಂಡು ನಮ್ಮಲ್ಲಿರುವ ಶಕ್ತಿಗಳನ್ನು ಎಚ್ಚರಗೊಳಿಸಿ ಪರಮಾತ್ಮನೊಡನೆ ಸಂಯೋಗ ಸಾಧಿಸಬೇಕೆಂದರೆ, ಇವುಗಳೊಂದಿಗೆ ಪರಸ್ಪರ ಅವಲಂಬಿಗಳಾಗಿ, ಪೂರಕವಾಗಿರಬೇಕು. ನಾವು ಮಾಡುವ ಕೆಲಸಗಳು ನಮ್ಮ ಕರ್ಮವನ್ನು ನಿರ್ಧರಿಸುತ್ತವೆ. ಆದಾಗ್ಯೂ ಭಕ್ತಿಯ ಹೆಸರಿನಲ್ಲಿ ಕಾವಿಧಾರಿಗಳು ಇಂದಿಗೂ ಕೂಡ ಸ್ತ್ರೀಯರ ಮಾನ ಹಾಳು ಮಾಡುತ್ತಿರುವುದು ಮಾಧ್ಯಮಗಳಲ್ಲಿ ದಿನ-ದಿನಕ್ಕೂ ದ್ವಿಗುಣಗೊಳ್ಳುತ್ತಿದೆ. ಇಂತಹವರನ್ನು ನಾಯಿಗೆ ಹೋಲಿಸಿ ಜರಿದಿದ್ದಾರೆ. ವಾದಿರಾಜರು 'ಯಾಕೆ ಮೈಮರೆವೆ ನೀನು' ಎಂದು ಕೇಳುತ್ತಾ 'ಕಾಕು ವ್ಯಸನಗಳ ತ್ಯಜಿಸೊ' ಎಂದು ಬುದ್ಧಿ ಹೇಳುತ್ತಾ ಎಚ್ಚರಿಕೆ ನೀಡಿದ್ದಾರೆ.

'ಧರೆಯೊಳು ಅಜ್ಞಾನವೆಂಬೊ ಕತ್ತಲೆಗಿನ್ನು
ಹರಿ ನಿನ್ನ ಚರಣಸ್ಮರಣೆ ದೀಪ ನಿಲ್ಲಿಸೆ
ಇರಬಲ್ಲುದೆ ತಾ ತಮವು ಹರಿದು ಪೋಗುವುದಯ್ಯ
ಕರುಣಾಕರನೆ ಸ್ಮರಣೆ ಫಲ ಉಳ್ಳವರಿಗೆ
ಕರಿಯೆಂಬೊ ದೋಷವಿನ್ನು ಹರಿಯು ಕಂಡ ತೆರದಿ
ಅರಿಯೆ ನಾನಾಪರಿ ಸಾಧನದೊಳಗೆ'[೩೮]

ಗೋಪಾಲದಾಸರ ಸುಳಾದಿಯಲ್ಲಿ ಭಕ್ತಿಯನ್ನು ನಿರೂಪಿಸುತ್ತಲೇ, ಭಗವಂತನ ಮೇಲೆ ಪೂರ್ಣ ನಂಬಿಕೆಯಿರಿಸಿ ಕಾಪಾಡು ಎಂದು ಕೇಳಿಕೊಳ್ಳುತ್ತಾರೆ. ಅನ್ಯದೈವವರಿಯದ, ಅನ್ಯಕ್ಕೆ ಎರಗದೆ ತನ್ನನೆ 'ನೆರೆನಂಬಿ ಚಿಂತಿಪರ ತನ್ನವನೆಂತೆಂದು ತನ್ನ ತಿಳಿಸಿಕೊಟ್ಟು ಘನ ಪದವಿಗೇರಿಸಿನ್ನು ತಾ ಸಲಹುವ' ಎನ್ನುವ ದೃಢವಾದ ನಂಬಿಕೆ ಅವರಲ್ಲಿದೆ. ಇಲ್ಲಿ ಹರಿಸ್ಮರಣೆಯೇ 'ಅರಿವು' ಆಗಿದೆ. ಅಜ್ಞಾನ, ತಮವನ್ನು ತೊಲಗಿಸುವ ದೀಪವಾಗಿದೆ. ಹರಿಸ್ಮರಣೆ ಇಲ್ಲದ ಬದುಕು ವ್ಯರ್ಥವೆಂದಿದ್ದಾರೆ.

'ಜ್ಞಾನಕಿದೇ ನಡಿ ಕುರುಹು
ಶ್ರೀ ರಮಾನಾಥಾಂಪ್ರಿಯ ಕಾಣುವದರಿತು.
ನಿನ್ನನೇ ಮೊರೆಹೊಕ್ಕಿಹೆನೋ
ನಿನ್ನ ನಂಬಿದ್ದವರ ಘನ್ನ ಭಯ ಹರಿವೆ ಎಂದು
ಧ್ಯಾನ ಮೌನಗಳೆಂಬ ಜ್ಞಾನ ಸಾಧನಗಳು
ಏನು ಅರಿಯದಾ ಅತಿ ದೀನನಾ ಭವಕಂಜಿ'[೩೯]

ಎಲ್ಲಾ ಅವಗುಣಗಳನ್ನು ತ್ಯಜಿಸಿದ ಮಾತ್ರಕ್ಕೆ ಜ್ಞಾನವೆನಿಸುವುದಿಲ್ಲ. ನಡೆ-ನುಡಿಗಳು ಹೇಗಿರಬೇಕು ಎನ್ನುವುದನ್ನು ಅರಿತುಕೊಂಡರೆ ಮಾತ್ರ ಅದು ಪರಮಾತ್ಮನನ್ನು ಅರಿಯಲು ಸಾಧ್ಯವೆಂದು, ಜ್ಞಾನದ ಗುರುತುಗಳನ್ನು ಕೃಷ್ಣದಾಸರು ಹೇಳಿದ್ದಾರೆ. 'ಕೋಪ ತಾಪ ಬಿಡಬೇಕು ಪಶ್ಚಾತ್ತಾಪದಿ ವೈರಾಗ್ಯ ಘನ

ಬಲಿಯಬೇಕು' ಎಂದಿದ್ದಾರೆ. ಧ್ಯಾನ ಮೌನಗಳು ಮನಸ್ಸನ್ನು ಶುಚಿಗೊಳಿಸುವ ಮೂಲಕ ವಿವೇಚನಾ ಶಕ್ತಿಯನ್ನು ಬೆಳೆಸುತ್ತದೆ. ಇದರಿಂದ ಪರಿಪೂರ್ಣ ಜ್ಞಾನವಂತನಾಗಬಹುದೆಂಬುದು ಹರಿದಾಸರ ನಂಬಿಕೆಯಾಗಿದೆ.

'ಕಾಲಕಾಲಕೆ ನಿನ್ನ ನಾಮದ ಸ್ಮರಣೆಯನ್ನು
ನಾಲಗೆಗೆ ಕೊಡು ಕಂಡ್ಯ ನಾರಾಯಣನೆ
ಕೀಳು ಮತಿಯನು ಬಿಡಿಸೊ ಕೀರ್ತನೆಯ ಮಾಡಿಸೋನಿ
ನ್ನಾಳುಗಳೊಳಗೆ ಉಳಿಗವನಿತ್ತು ಪಾಲಿಸೊ
ಬಳಲಿದೆನೊ ಭವದೊಳಗೆ ಬಿದ್ದು ಬ
ಯಲಾಸೆಯಲ್ಲಿ ನಾ ಕಾಲದ ಕಳೆದೆ
ಪಾಲಸಾಗರಶಾಯಿ ವಿಜಯವಿಠಲ ನಿನ್ನ
ಪಾಲಿಗೆ ಬಂದೆನೊ ಪರಮ ಪುರುಷ ಹರೆ'[೨೦]

ವಿಜಯದಾಸರ ಉಗಾಭೋಗಗಳು ಲೋಕನೀತಿ, ಅರ್ಥಪೂರ್ಣ ಬದುಕು ಮತ್ತು ಆಚರಣೆಗಳಿಗೆ ಮಹತ್ವ ನೀಡಿವೆ. ಅವುಗಳೆಲ್ಲವುಗಳ ಉದ್ದೇಶ ಒಂದೇ ಹರಿಯ ನಾಮಸ್ಮರಣೆಯನ್ನು ಮಾಡುವುದು. ಅದಕ್ಕೆ ಮಡಿಯಾಗಬೇಕಾಗಿರುವುದು ಮನಸ್ಸೇ ಹೊರತು, ದೇಹವಲ್ಲ. ಕೊನೆಗೆ ಹರಿಯಲ್ಲೇ ಸಂಪೂರ್ಣ ಶರಣಾಗತರಾಗಿ ನಿನ್ನ ಧ್ಯಾನವನ್ನು ಕೊಡುವ ಭಾರವು ನಿನ್ನದೇ ಎಂದು ಹರಿಯನ್ನು ಬೇಡುತ್ತಾರೆ.

ಹರಿದಾಸರ ಈ ಪ್ರಕಾರಗಳಲ್ಲಿ ಭಕ್ತಿಯ ತೀವ್ರತೆ ಹೆಚ್ಚಾಗಿ ಕಾಣುತ್ತದೆ. ದೇಹ, ಮನಸ್ಸು, ಬುದ್ಧಿ ಎಲ್ಲವೂ ಅವನದೇ ಎನ್ನುವ ಸಮರ್ಪಣಾಭಾವ ಎದ್ದುಕಾಣುತ್ತದೆ. ಪ್ರತಿಯೊಂದು ಉಗಾಭೋಗ ಸುಳಾದಿಯಲ್ಲಿ ಆಲೋಚನೆ, ಸೂತ್ರಪ್ರಾಯವಾದ ಮಾತಿನ ಸರಣಿ, ಆಧ್ಯಾತ್ಮದ ಮಹತ್ವ ಇವೆಲ್ಲವೂ ಸ್ವ ಅನುಭವದ ಮೂಲಕ ಬಂದಿರುವುದನ್ನು ಕಾಣುತ್ತೇವೆ. ಇವು ದೈವಸ್ತುತಿ ಮತ್ತು ಲೋಕನೀತಿಯನ್ನು ಒಳಗೊಂಡಿವೆ. ಕೀರ್ತನಾ ಸಾಹಿತ್ಯದಲ್ಲಿದ್ದಂತೆ, ಸಮಾಜವನ್ನು ವಿಡಂಬಿಸುವ ನೆಲೆಯಲಿಲ್ಲ, ವ್ಯಕ್ತಿಗತ ನೆಲೆಯಲ್ಲಿಯೇ ವ್ಯಕ್ತಿಯನ್ನು ತಿದ್ದುವ, ತಿಳಿಹೇಳುವ, ಎಚ್ಚರಿಸುವ ರೀತಿಯಲ್ಲಿ ದಾಸಸಾಹಿತ್ಯ ಮೂಡಿ ಬಂದಿದೆ.

ಹರಿದಾಸರ ನೀತಿಬೋಧೆ ಕೇವಲ ಗೊಡ್ಡು, ಧರ್ಮಾಂಧತೆಯನ್ನು ಕಲಿಸುವಂಥಹದು ಎಂಬ ಭಾವನೆ ಹುಟ್ಟುವುದು ಸಹಜ ಆದರೆ, ಲೌಕಿಕದಲ್ಲಿದ್ದೂ ಇಲ್ಲದಂತೆ ಬಾಳಿದ ರೀತಿ, ನಿರ್ಲಿಪ್ತ ಬದುಕಿನ ಸಂಕೇತವಾಗಿದೆ. ಬದುಕನ್ನು ವಾಸ್ತವವಾಗಿ ಅನುಭವಿಸುತ್ತಲೇ, ಅದರಲ್ಲಿರುವ ಸಮಸ್ಯೆಗಳನ್ನು ಕಂಡುಕೊಂಡು, ಅವುಗಳಿಗೆ ಪರಿಹಾರ ಹುಡುಕುವ ಪ್ರಯತ್ನ ಇವರದು. ಆಧುನಿಕತೆಯ ಸೋಗಿನಲ್ಲಿ, ಸಾಂಪ್ರದಾಯಿಕ ಆಚಾರ-ವಿಚಾರವನ್ನೆಲ್ಲವನ್ನು ಪ್ರಶ್ನಿಸುವ ಈ ವೈಚಾರಿಕ ಯುಗಕ್ಕೂ, ಜೀವನ ವಿಕಾಸದ ದೃಷ್ಟಿ ಅಗತ್ಯವೇ ಆಗಿವೆ. ಈ ದೃಷ್ಟಿ ಹರಿದಾಸ ಸಾಹಿತ್ಯದಲ್ಲಿ ದೊರೆಯುತ್ತದೆ. ಆಸ್ತಿಕತೆ, ತನಗಿಂತಲೂ ಅತ್ಯುನ್ನತ ಆದದ್ದು ಎನೊ ಒಂದು ಚೇತನ, ಸೃಷ್ಟಿ-ಸ್ಥಿತಿ-ಲಯ ಕರ್ತೃ ಆಗಿ ಇದೆ ಎಂಬುದು, ಮಾನವತೆಯ ವಿಕಸನಕ್ಕೆ ಅವಕಾಶ ನೀಡುತ್ತಿದೆಯೇ ವಿನಹ ತೊಂದರೆ ಮಾಡುವುದಿಲ್ಲ.

ಇದು ಆಸ್ತಿಕ್ಯಭಾವ, ವೈಯಕ್ತಿಕ, ಸಾಂಘಿಕ ಜೀವನದಲ್ಲಿ ಶಾಂತಿ ಸಮಾಧಾನದ ನೆಲೆ ತರಿಸುತ್ತದೆಂಬುದು ಪರಂಪರಾಗತ ಸತ್ಯವೇ ಆಗಿವೆ. ಇದರಿಂದ ದಾಸರ ಸಂದೇಶದಂತೆ ದಾಸನಾಗುವುದು ಎಂದರೆ ಮಾನವಿಯತೆಯನ್ನು ಸಂಪೂರ್ಣವಾಗಿ ಅರಳಿಸಿಕೊಳ್ಳುವ ಜೀವನಯೋಗ ಸಾಧನೆ ಎಂದು ಹೇಳಬೇಕಾಗುತ್ತದೆ.

**ಅಡಿಟಿಪ್ಪಣಿಗಳು**

೧. ಸುಪ್ರಿಯಾ ನಾಗರಹಳ್ಳಿ; ೨೦೧೭; ಪುರಂದರದಾಸರ ಪ್ರತಿಮಾಲೋಕ; ಪುಟ-೭೬

೨. ಅದೇ, ಪುಟ-೭೮

೩. ಬಸವರಾಜ ಸಬರದ; ೨೦೦೩; ಪುರಂದರದಾಸರ ಕೀರ್ತನೆಗಳು ಭಾಗ-೧ ಪುಟ-೧೬

೪. ನಾವಡ ಎ.ವಿ; ೨೦೧೪; ಕನಕನ ಕಿಂಡಿ; ಪುಟ-೭೩೩

೫. ಬಸವರಾಜ ಸಬರದ;೨೦೦೩; ಪುರಂದರದಾಸರ ಕೀರ್ತನೆಗಳು ಭಾಗ-೨ ಪುಟ-೧೯೯

೬. ಶ್ರೀನಿವಾಸ ಹಾವನೂರು;೨೦೦೩; ಶ್ರೀಪಾದರಾಜರ ಮತ್ತು ವ್ಯಾಸರಾಯರ ಕೀರ್ತನೆಗಳು; ಪುಟ-೨೪೬-೨೪೭

೭. ನಾವಡ ಎ.ವಿ; ೨೦೦೨; ಈಸಬೇಕು ಇದ್ದು ಜಯಿಸಬೇಕು; ಪುಟ-೭೨

೮. ಸುಪ್ರಿಯಾ ನಾಗರಹಳ್ಳಿ;೨೦೧೭; ಪುರಂದರದಾಸರ ಪ್ರತಿಮಾಲೋಕ; ಪುಟ-೧೨

೯. ನಾವಡ ಎ.ವಿ; ೨೦೦೨; ಈಸಬೇಕು ಇದ್ದು ಜಯಿಸಬೇಕು; ಪುಟ-೪

೧೦. ಸುಪ್ರಿಯಾ ನಾಗರಹಳ್ಳಿ;೨೦೧೭; ಪುರಂದರದಾಸರ ಪ್ರತಿಮಾಲೋಕ; ಪುಟ-೯೦

೧೧. ಅದೇ, ಪುಟ-೧೧೭

೧೨. ಬಸವರಾಜ ಸಬರದ; ೨೦೦೩; ಪುರಂದರದಾಸರ ಕೀರ್ತನೆಗಳು ಭಾಗ-೨ ಪುಟ-೧೫೧

೧೩. ಸುಪ್ರಿಯಾ ನಾಗರಹಳ್ಳಿ;೨೦೧೭; ಪುರಂದರದಾಸರ ಪ್ರತಿಮಾಲೋಕ; ಪುಟ-೯೧

೧೪. ಬಸವರಾಜ ಸಬರದ; ೨೦೦೩; ಪುರಂದರದಾಸರ ಕೀರ್ತನೆಗಳು ಭಾಗ-೨ ಪುಟ-೨೭೫

೧೫. ಅದೇ, ಭಾಗ-೨ಪುಟ-೧೭೬

೧೬. ನಾವಡ ಎ.ವಿ; ೨೦೦೨; ಈಸಬೇಕು ಇದ್ದು ಜಯಿಸಬೇಕು; ಪುಟ-೭೫

೧೭. ಅದೇ, ಪುಟ-೭೨

೧೮. ಬಸವರಾಜ ಸಬರದ; ೨೦೦೩; ಪುರಂದರದಾಸರ ಕೀರ್ತನೆಗಳು ಪುಟ-೧೪೬

೧೯. ಅದೇ, ಪುಟ-೨೪೮

೨೦. ಅದೇ, ಪುಟ-೯೫

೨೧. ಅಶ್ವತ್ಥನಾರಾಯಣ, ಜಿ; ೨೦೦೩; ವಿಜಯದಾಸರ ಕೀರ್ತನೆಗಳು ಹಾಗೂ ಉಗಾಭೋಗಳು; ಪುಟ ೭೦

೨೨. ರಾಮಶೇಷನ್.ಎನ್.ಕೆ;೧೯೯೧; ಹರಿದಾಸ ಆಂದೋಲನ; ಪುಟ-೨೫೦

೨೩. ಬಸವರಾಜ ಸಬರದ; ೨೦೦೩; ಪುರಂದರದಾಸರ ಕೀರ್ತನೆಗಳು ಪುಟ-೧೧೬

೨೪. ಸೀತಾರಾಮಯ್ಯ.ವಿ; ೨೦೧೨; ದಾಸ ಸಾಹಿತ್ಯ; ಪುಟ-೧೭೯

೨೫. ಅದೇ, ಪುಟ-೧೮೬

೨೬. ಲಕ್ಕಪ್ಪಗೌಡ.ಎಚ್.ಜೆ; ೨೦೦೪; ಕನಕ ಮುಖಗಳು, ಪುಟ-೬

೨೭. ನಾವಡ ಎ.ವಿ; ೨೦೦೨; ಈಸಬೇಕು ಇದ್ದು ಜಯಿಸಬೇಕು; ಪುಟ-೨೭

೨೮. ಜ್ಯೋತಿ ಶಂಕರ್; ೨೦೧೨; ದಾಸ ಸಾಹಿತ್ಯ; ಪುಟ-೧೨೮

೨೯. ರಾಮಚಂದ್ರರಾವ್.ಸಾ.ಕೃ; ೨೦೧೩; ದಾಸ ಸಾಹಿತ್ಯ ಮತ್ತು ಸಂಸ್ಕೃತಿ; ಪುಟ-೨೬೮

೩೦. ಜ್ಯೋತಿ ಶಂಕರ್; ೨೦೧೨; ದಾಸ ಸಾಹಿತ್ಯ; ಪುಟ-೧೩೦

೩೧. ಅದೇ, ಪುಟ-೧೪೩

೩೨. ಸೀತಾರಾಮಯ್ಯ.ವಿ; ೨೦೧೨; ದಾಸ ಸಾಹಿತ್ಯ; ಪುಟ-೧೪೮

೩೩. ಅದೇ, ಪುಟ-೧೭೦

೩೪. ಅಶ್ವತ್ಥನಾರಾಯಣ, ಜಿ; ೨೦೦೩; ವಿಜಯದಾಸರ ಕೀರ್ತನೆಗಳು ಹಾಗೂ ಉಗಾಭೋಗಗಳು; ಪುಟ-೩೨೪

೩೫. ವಸಂತ ಕುಷ್ಟಗಿ; ೨೦೦೩; ಪುರಂದರ ದಾಸರ ಉಗಾಭೋಗಳ ಮತ್ತು ಸುಳಾದಿಗಳು; ಪುಟ-೨೨೨

೩೬. ರಾಮಚಂದ್ರರಾವ್.ಸಾ.ಕೃ; ೧೯೯೧; ದಾಸ ಸಾಹಿತ್ಯ ಮತ್ತು ಸಂಸ್ಕೃತಿ; ಪುಟ-೨೬೦

೩೭. ಅದೇ, ಪುಟ-೨೮೦

೩೮. ಜ್ಯೋತಿ ಶಂಕರ್; ೨೦೧೨; ದಾಸ ಸಾಹಿತ್ಯ; ಪುಟ-೯೧

೩೯. ಜ್ಯೋತಿ ಶಂಕರ್; ೨೦೧೨; ದಾಸ ಸಾಹಿತ್ಯ; ಪುಟ-೮೯

೪೦. ಅದೇ, ಪುಟ-೮೩

ಅಧ್ಯಾಯ ಆರು

# ತತ್ವಪದ ಸಾಹಿತ್ಯದಲ್ಲಿ ಜ್ಞಾನದ ಪರಿಕಲ್ಪನೆ

ದಾರ್ಶನಿಕ ಹಾಗೂ ಅನುಭಾವ ಪರಂಪರೆಯಲ್ಲಿ ಜ್ಞಾನ ಎಂಬ ಪರಿಭಾಷೆ ಹಲವು ಬಗೆಗಳಲ್ಲಿ ನಿರ್ವಚಿಸಲ್ಪಡುತ್ತದೆ. ಈ ಜ್ಞಾನ ಎಂಬ ಪದ ವಿದ್ಯೆ, ಅರಿವು, ತಿಳಿವು ಎಂಬ ಹೆಸರುಗಳಿಂದಲೂ ಬಳಕೆಯಾಗುತ್ತದೆ. ಭಾರತಕ್ಕೆ ಬ್ರಿಟಿಷರ ಆಗಮನ ಮತ್ತು ವಸಾಹತುಶಾಹಿ ಶಿಕ್ಷಣದ ಪ್ರವೇಶದಿಂದ ಭಾರತೀಯರ ಜೀವನ ವಿಧಾನ ಕ್ರಮದಲ್ಲಿ ಮಾತ್ರವಲ್ಲ, ನಮ್ಮ ಚಿಂತನಾ ಪ್ರಸ್ಥಾನಗಳಲ್ಲೂ ಅನೇಕ ಬಗೆಯ ಸ್ಥಿತಂತರಗಳಾದವು. ಈ ಬದಲಾವಣೆ ಭಾರತೀಯರ ಆಲೋಚನಾ ವಿಧಾನವನ್ನೇ ಬದಲಿಸಿತು. ಅಂದರೆ ಕೇವಲ ಅಕ್ಷರಜ್ಞಾನ ಉಳ್ಳವರು ಮಾತ್ರ ಸುಶಿಕ್ಷತರು, ನಾಗರಿಕರು ಉಳಿದವರು, ಅನಾಗರಿಕರು ಎಂಬ ಭಾವನೆಯನ್ನು ವಸಾಹತುಶಾಹಿ ಶಿಕ್ಷಣ ಮೂಡಿಸಿತು. ಇದರ ಪರಿಣಾಮ ಭಾರತೀಯ ಶಿಕ್ಷಣದ ಭಾಗವಾಗಿದ್ದ ನಮ್ಮ ಪೂರ್ವಿಕರ ಪಾರಂಪರಿಕ ಜ್ಞಾನ ಹಾಗೂ ಕುಶಲ ಕಲೆಗಳು ಶೈಕ್ಷಣಿಕ ವಲಯದಿಂದ ದೂರ ಉಳಿದವು. ಆ ನಂತರ ಓದು-ಬರಹ ಎಂದರೆ ಶಿಕ್ಷಣ, ಶಿಕ್ಷಣವೆಂದರೆ ಪುಸ್ತಕದ ಓದು ಎಂಬುವುದಕಷ್ಟೇ ಸೀಮಿತವಾಯಿತು.

ಕನ್ನಡ ತತ್ವಪದ ಸಾಹಿತ್ಯದಲ್ಲಿ ಜ್ಞಾನ ಎಂಬ ಪರಿಭಾಷೆಯು ಪ್ರಧಾನವಾಗಿ ಗುರು-ಶಿಷ್ಯರ ನಡುವಿನ ಸಂವಾದದ ರೂಪದಲ್ಲಿ ನಿರ್ವಚಿಸಲ್ಪಟ್ಟಿದೆ. ದಾರ್ಶನಿಕ ಪಂಥ (ಸಿದ್ಧ, ಅರೂಢ, ನಾಥ, ಸೂಫಿ)ಗಳಲ್ಲಿ ಸಾಧಕನ ಸಾಧನೆಗೆ, ಗುರುವಿನ ಅಗತ್ಯವೇ ಹೆಚ್ಚು. ಇವರು ಸಮಾಜದ ಭೌತಿಕ ಬದಲಾವಣೆಗಿಂತ ವ್ಯಕ್ತಿಯ ಆತ್ಮೋನ್ನತಿಯನ್ನು ಬಯಸಿದವರು. ಅದಕ್ಕಾಗಿ ಪ್ರತಿಯೊಬ್ಬ ಸಾಧಕ ಕಡ್ಡಾಯವಾಗಿ ಗುರುವನ್ನು ಪಡೆದುಕೊಳ್ಳಬೇಕು. ಶಿಷ್ಯ, ಗುರುವಿನ ಮೂಲಕ ಅರಿವಿನ ದಾರಿಯಲ್ಲಿ ಸಾಗುತ್ತಾ ಸಾಧಕನಾಗಿ ಬೆಳೆಯುತ್ತಾನೆ. 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದು ಗುರುವಿನೊಂದಿಗಿನ ಒಡನಾಟ, ಸಲಿಗೆ ಚರ್ಚೆ ತನ್ನತನದ ಹುಡುಕಾಟವೇ ಆಗಿದೆ. ತತ್ವಪದಕಾರರಲ್ಲಿ ಗುರುವಿನ ಭೌತಿಕ ಅಸ್ತಿತ್ವಕ್ಕಿಂತ, ಆಂತರಿಕ ಅಸ್ತಿತ್ವ ಮುಖ್ಯವಾಗಿತ್ತು. ಗುರು ಸಾಧಕನ ಸಾಧನೆಗೆ ಮಾರ್ಗದರ್ಶಕ ಮಾತ್ರ, ಗುರುವೇ ಎಲ್ಲವೂ ಆಗಿರಲಿಲ್ಲ. 'ನರನ ಕೆಡಿಸಿ ಹರನ ಮಾಡಿದ ಸದ್ಗುರುರಾಯ' 'ಹರ ಮುನಿದರೆ, ಗುರು ಕಾಯ್ವನು ಶಾಶ್ವತ' ಇಂಥ ಮಾತುಗಳು ತತ್ವಪದಕಾರರಲ್ಲಿ ಕಂಡು ಬರುತ್ತವೆ. ಯೋಗ ಧ್ಯಾನಗಳ ಮೂಲಕ ಅಂತರಂಗದ ತಮ್ಮ ನಿಜದನಿಗೆ ಓಗೊಡುವ ಇವರಿಗೆ, ಗುರು ಅರಿವಿನ ಸ್ವರೂಪ. ಗುರು-ಶಿಷ್ಯ ಪರಂಪರೆಗೆ ಅತ್ಯುತ್ತಮ ಉದಾಹರಣೆಯೆಂದರೆ

ಶಿಶುನಾಳ ಶರೀಫ ಮತ್ತು ಗುರುಗೋವಿಂದ ಭಟ್ಟರು. ಶರೀಫರ 'ಅನುಭಾವ'ವನ್ನು ಗುರು ಕೃಪೆ, ಗುರುಕಾರಣ್ಯಗಳು ಬಹುವಾಗಿ ಪ್ರಭಾವಿಸಿವೆ. ಸಾಧಕನಿಗೆ ಗುರು ಮಾರ್ಗದರ್ಶಕ, ತಂದೆ, ತಾಯಿ, ಸ್ನೇಹಿತ ಎಲ್ಲವೂ ಆಗಿರುತ್ತಾನೆ. ಶಾಕ್ತಪಂಥೀಯ ಬ್ರಾಹ್ಮಣ ಗುರುಗಳಾದ ಗೋವಿಂದ ಭಟ್ಟರು, ವ್ಯಕ್ತಿಗತವಾಗಿ ಶರೀಫರಿಗೆ ಗುರುಗಳು. ಅವರು ಶರೀಫರನ್ನು ಸಾಧನೆಯ ದಾರಿಗೆ ತಂದು ನಿಲ್ಲಿಸಿ, ಮುನ್ನಡೆವ ಬಗೆಯನ್ನು ತೋರುತ್ತಾರೆ. 'ನನ್ನೊಳಗೆ ನಾ ತಿಳಕೊಂಡೆ, ನನಗೆ ಬೇಕಾದ ಗಂಡನ್ನ ಮಾಡಿಕೊಂಡೆ' ಎಂದು ಶರೀಫರು ಸ್ಪಷ್ಟವಾಗಿ ಹೇಳಿರುವುದುಂಟು. ಗುರುವಿನ ಉಪದೇಶ ಆದು ಕೇವಲ ಸಾಮಾನ್ಯವಾದ ಮಾತಲ್ಲ, ಅದು ಭವಬಂಧನದಿಂದ ಸರ್ವಭಯಗಳಿಂದ ಮುಕ್ತಗೊಳಿಸುವ ಪರುಷವಿದ್ದ ಹಾಗೆ ಎನ್ನುವುದು ತತ್ವಪದಕಾರರ ನಿಲುವು.

'ದೊರಕಿಕಾ ಗುರು-ದೊರಕಿದಾ! ಪರಮಾಂದ ಬೋಧ
ಅರವಿನೊಳಗೆ ಬಂದು ! ದೊರಕಿದಾ ಗುರು ದೊರಕಿದಾ
ಕರಪಾತ್ರೆ ಹಿಡಿದು ಈ ! ನರ ಶರೀರದಿ ತನ್ನ
ಆರುವ ಸಾಲಿಗಳಲ್ಲಿ ಗುರು ತೋರಿ! ಪರಮ ನಂಬಿಗೆಯಲಿ! ದೊರಕಿದಾ'[೧]

ಎಂಬ ಸಾಲುಗಳಲ್ಲಿ 'ಗುರು ತತ್ವ' ಶರೀಫರ ಪದಗಳ ಬಂದು ವಸ್ತುವಾಗಿರುವಂತೆ, ಪ್ರಧಾನ ಆಶಯವೂ ಆಗಿದೆ. ಗುರುವಿನ ಆಯ್ಕೆ, ಮಹತ್ವ, ಉಪಕಾರಗಳು ಶಿಷ್ಯನಲ್ಲಿ ಸಾರ್ಥಕತೆಯ ಅನುಭವವನ್ನುಂಟು ಮಾಡಿದೆ. ಇವರಿಬ್ಬರ ಆತ್ಮೀಯ ಸಂಬಂಧ ವೈಯಕ್ತಿಕ ಮತ್ತು ಸಾಮೂಹಿಕ ನೆಲೆಗಳಲ್ಲಿ ಗುರು-ಶಿಷ್ಯ ತತ್ವ ರೂಪಗೊಂಡಿದೆ.

ಕಡಕೋಳ ಮಡಿವಾಳಪ್ಪನಿಗೂ ಗುರುವಿನ ಮೇಲೆ ಅದಮ್ಯ ಪ್ರೀತಿ. ಆದ್ದರಿಂದ ಇವನ ಅನೇಕ ವಿಚಾರಗಳು ಗುರುವಿನ ಮೂಲಕ ಅನುಸಂಧಾನಗೊಳ್ಳುತ್ತವೆ. ಇವನ ಅನೇಕ ವಸ್ತು ವಿಚಾರಗಳಿಗೆ ಗುರುವೇ ಕೇಂದ್ರ. 'ಗುರುಕರುಣವಿಲ್ಲದವನ ಸ್ನೇಹ ಸಾವುತನಕ ಬೇಡ' ಎಂದು ದೃಢ ನಿಚ್ಚಯನಾಗಿ ಗುರುವನ್ನು ಒಲಿಸುವ ಜ್ಞಾನಮಾರ್ಗಗಳಿಗಾಗಿ ಸದಾ ಹುಡುಕಾಟ ಮಾಡುತ್ತಾನೆ. ಹೀಗೆ ಹುಡುಕಾಟ ಮಾಡುತ್ತಾ 'ಶ್ರೀ ಗುರುವಿನೋಲಿಸುವ ಸಾಧನ ಸುಮ್ಮನಲ್ಲ' ಎಂದು ಸಾರಿದ್ದಾನೆ.

"ಗುರು ಮುಖೇನ ವಿದ್ಯೆ ಪಡೆಯುವ ಎಲ್ಲಾ ಪಂಥಗಳೂ ಹುಟ್ಟಿನಿಂದ ಬರುವ ಶ್ರೇಷ್ಠ-ಕನಿಷ್ಠಗಳ ಜೊತೆಗೆ ಗ್ರಂಥಸ್ಥ ಜ್ಞಾನವನ್ನು ದೊಡ್ಡದೆಂದು ತಿಳಿಯುವುದಿಲ್ಲ. ನಾಥಪಂಥಗಳಾದಿಯಾಗಿ ಎಲ್ಲಾ ಭಕ್ತಿ ಪಂಥಗಳು ವೇದ, ಶಾಸ್ತ್ರ, ಸ್ಮತಿಗಳನ್ನು ಪ್ರಮಾಣವೆಂದು ಒಪ್ಪುವುದಿಲ್ಲ. ಸ್ವಾನುಭವದಿಂದಲೇ ಪರತತ್ವ ಪಡೆಯಬೇಕು. ಇದಕ್ಕೆ ಗುರುವಿನ ಮಾರ್ಗದರ್ಶನ ಅಗತ್ಯ ಎಂದು ಹೇಳುತ್ತವೆ. ದೈವ ಸಾಕ್ಷಾತ್ಕಾರದ ಅನುಭವಕ್ಕಾಗಿ ತನ್ಮಯತೆಯನ್ನು ಹೊಂದಲು ಲೌಕಿಕದ ಕಟ್ಟುಪಾಡುಗಳನ್ನು ಬದಿಗಿರಿಸಿ, ಒಳದನಿಗೆ ಓಗೊಟ್ಟವರು ಕನ್ನಡದ ತತ್ವಪದಕಾರರು. ಸಮಾಜದ ಭೌತಿಕ ಬದಲಾವಣೆಗಿಂತ ವ್ಯಕ್ತಿಯ ಆತ್ಮೋನ್ನತಿಯನ್ನು ಬಯಸಿದವರು.'[೨] ಸಾಧಕನಿಗೆ, ಗ್ರಂಥಸ್ಥ ಜ್ಞಾನದ ಆಕರಗಳು ನಿಷ್ಪ್ರಯೋಜಕ ವಾದವುಗಳಾಗಿವೆ. ಅದಕ್ಕೆ ಸಾಧಕನನ್ನು ಎಚ್ಚರಿಸುವ, ಜಾಗೃತಗೊಳಿಸುವ, ಅವನ ಅರಿವಿಗೆ ದಾರಿ

ಮಾಡಿಕೊಡುವ ಪಕ್ವಮನಸ್ಸಿನ ಗುರುವನ್ನು ಪಡೆಯುವುದೇ ಇವರ ಆರಂಭದ ಗುರಿಯಾಗಿರುತ್ತದೆ. ಗುರು-ಶಿಷ್ಯರ ಸಂಪ್ರದಾಯದಲ್ಲಿ ಜಾತಿಗೆ ಸ್ಥಾನವಿರುವುದಿಲ್ಲ.

'ಗುರುವಿನ ಮಗ ತಾ ಆದ ಬಳಿಕ ಹ್ಯಾಂಗಿರಬೇಕೊ
ಅಲ್ಲಿ ಅರಿವು ತಿಳಿದು ಮರವಿನ್ಯಾಗ ಬೀಳೋದ್ಯಾಕೊ
ಮೆಟ್ಟಲಿ ಹೊಡದಾರ ಎಂದು ಎಚ್ಚರಿರಬೇಕೊ'[3]

ಈ ತತ್ವಪದದಲ್ಲಿ ಧಾರ್ಮಿಕ ಮತ್ತು ರಾಜಕೀಯ ವ್ಯವಸ್ಥೆಗಳನ್ನು ಖಂಡಿಸುತ್ತಲೇ, ಎಚ್ಚರಿಕೆ ನೀಡಿದೆ. ಧಾರ್ಮಿಕ ವ್ಯಕ್ತಿಗಳೆಂದು ವೇಷ ಹಾಕಿ, ಅನೈತಿಕವಾಗಿ ನಡೆಯುವವರನ್ನು ಮತ್ತು ಸಮಾಜದ ಗಣ್ಯ ವ್ಯಕ್ತಿಗಳೆಂದು ಕರೆಸಿಕೊಳ್ಳುವವರು, ತಮ್ಮನ್ನು ಅಧಿಕಾರದ ಗದ್ದುಗೆ ಏರಿಸಿದ ಪ್ರಜೆಗಳನ್ನು ಮರೆತು, ಎಚ್ಚರ ಕಳೆದುಕೊಂಡ ಗಣ್ಯರನ್ನು ಮತ್ತು ಅವರು, ತಮ್ಮ ಅಧಿಕಾರವನ್ನು ದುರುಪಯೋಗ ಮಾಡಿಕೊಳ್ಳುವ ಇಂದಿನ ರಾಜಕಾರಿಗಳಿಗೆ ಅನ್ವಯಿಸಿ ಹೇಳಿದ್ದಾರೆ. 'ಗುರುವಿನ ಮಗ' ಆದ ಬಳಿಕ ನೈತಿಕವಾಗಿರಬೇಕು. ಇಲ್ಲದಿದ್ದರೆ ಸಾಮಾನ್ಯರೇ, ಅಧಿಕಾರಿಗಳನ್ನು ದಂಡಿಸುವರು ಎಂಬ ನೈತಿಕ ಎಚ್ಚರವನ್ನು ನೀಡಿದ್ದಾರೆ.

ಜ್ಞಾನ ಮತ್ತು ಅಜ್ಞಾನದ ನಡುವೆ ಏರ್ಪಡುವ ಇಲ್ಲಿನ ಸಂವಾದ ಅನೇಕ ಅರ್ಥ ಸುರುಳಿಗಳನ್ನು ಹೊಮ್ಮಿಸುತ್ತದೆ. ಬಹುಮುಖ್ಯವಾಗಿ ಜನಪದ ಸಂಸ್ಕೃತಿಗೆ ಸೇರಿರುವ ತತ್ವಪದಕಾರರು ಲಿಖಿತ ರೂಪದ ವೇದ, ಶಾಸ್ತ್ರ, ಪುರಾಣಗಳನ್ನು ಮತ್ತು ಇವುಗಳನ್ನು ಓದಿ, ಇವುಗಳನ್ನೇ, ಬಂಡವಾಳ ಮಾಡಿಕೊಂಡು, ಅಕ್ಷರ ಹಾಗೂ ವಿದ್ಯೆಗಳನ್ನು ಮಾರಾಟದ ವಸ್ತುಗಳನ್ನಾಗಿದ ಪ್ರವೃತ್ತಿಗಳ ವಿರುದ್ಧ ಸಿಡಿದು ಬೀಳುತ್ತಾರೆ. 'ಹಲವು ದೇಶವ ತಿರುಗಿ ನಾನಾ ಭಾಷೆಯ ಕಲಿತು ಬಲು ಶ್ಯಾಣೆರಾದವರು ಪಂಡಿತರೆ?' ಎಂದು ಪ್ರಶ್ನೆ ಕೇಳುವ ಮೂಲಕ ಕೂಡಲೂರು ಬಸಲಿಂಗಪ್ಪ, ಬ್ರಾಹ್ಮಣ ಭಾಷೆಯಾದ ಸಂಸ್ಕೃತವನ್ನು ಗಮನದಲ್ಲಿರಿಸಿಯೇ ಹೇಳಿದ್ದಾರೆ. ಸಂಸ್ಕೃತ ಭಾಷೆಯ ಓದು ಮತ್ತು ಅದರ ಜ್ಞಾನವನ್ನು ತಿರಸ್ಕರಿಸಿದ್ದಾರೆ.

'ಬಾಯಿಲೊಂದು ಆಡ್ತೀರಿ
ಮನಸಿನೊಳಗೊಂದು ಮಾಡ್ತೀರಿ
ಬರದಿಟ್ಟಿದ್ದು ಓದಿಕೊಂಡು
ಭ್ರಾಂತಿಗೆಟ್ಟು ಹೋಗತೀರಿ'[4]

'ಬರದಿಟ್ಟಿದ್ದು' ಎಂದರೆ ಸ್ವಂತಿಕೆ ಇಲ್ಲದ್ದು. ಎರವಲು ಪಡೆದ ಜ್ಞಾನದಿಂದ ನಿಜಜ್ಞಾನ ಸಿಗುವುದಿಲ್ಲ. ಅನುಭವ ಹಾಗೂ ಅರಿವಿನಿಂದ ಪಡೆದ ತಿಳುವಳಿಕೆಯೇ ಶ್ರೇಷ್ಠವಾದದ್ದು. ಭಾಷೆ ಮತ್ತು ಭಾಷೆಯಲ್ಲಿನ ಅಭಿವ್ಯಕ್ತಿ ಮಾತ್ರವೇ ಜ್ಞಾನದ ಮಾಧ್ಯಮವಾಗಿ ಪ್ರತಿಷ್ಠಾಪಿತವಾಗಿದ್ದುದನ್ನು ಪ್ರಶ್ನಿಸಿ, ನೆಲಮೂಲ ಭಾಷೆಗೆ ಒತ್ತು ಕೊಟ್ಟಿದ್ದಾರೆ.

'ಶಾಸ್ತ್ರ ಪುರಾಣ ವೇದ ಆಗಮ
ಮಾಡಿ ಇಟ್ಟಾರೋ ಮುಂದೆ ಓದುದಕ
ನಿಲುಕದ ಮಾತಿಗೆ ನಿಗರ್ಯಾಡಿ ಸತ್ತಾರೊ'[5]

'ಶಾಸ್ತ್ರ ಪುರಾಣ ವೇದ ಖುರಾನ
ಮಿತ್ರ ಭಕ್ತಗ ಇಲ್ಲದೆ ಖೂನ
ಸ್ತೋತ್ರ ಮಾಡೊ ನೀ ದಿನಾ ದಿನ
ಮತ್ತ ನೆನಪಿಡು ನೀ ಲಿಂಗದ ವಚನ'[1]

ಶರಣರು, ದಾಸರರಂತೆ, ತತ್ವಪದಕಾರರು ಕೂಡ ಪಠ್ಯ ಜ್ಞಾನದ ಆಕರಗಳನ್ನು ತಿರಸ್ಕರಿಸುತ್ತಾರೆ. ಈ ಪದ್ಯದಲ್ಲಿರುವ ಪದಗಳು ಅಕ್ಷರ ವಿದ್ಯೆಯ ಶುಷ್ಕತೆಯನ್ನು ಹೇಳುತ್ತವೆ. ಬದುಕನ್ನು ರೂಪಿಸದ, ಸ್ವಅನುಭವವನ್ನು ಮೂಡಿಸದ ಪರಾವಲಂಬಿ ವಿದ್ಯೆ, ಸಾಮಾನ್ಯರನ್ನು ವಂಚಿಸುವ, ಮತ್ತು ವಾದ, ವಿವಾದಗಳಿಂದ ಹುಟ್ಟುವ ಪಾಪ-ಪುಣ್ಯ, ಸ್ವರ್ಗ-ನರಕ, ಶ್ರೇಷ್ಠ-ಕನಿಷ್ಠ, ಪಂಡಿತ-ಪಾಮರ ಎನ್ನುವ ಶೋಷಣಾ ಮೂಲಗಳನ್ನು ಖಂಡಿಸುತ್ತವೆ.

'ಶಾಸ್ತ್ರಿ ಓದುವದೇನೋ ಹೇ ಮನುಜಾ
ಶಾಸ್ತ್ರದೊಳಗ ಏನು ಇಲ್ಲಾ
ಶಾಸ್ತ್ರ ಹೇಳುವುದೆಲ್ಲಾ ಅಪಾತ್ರದೊಳಾಗುವುದೆ?
ಸೂತ್ರದಾರ ಒಳಗೆ ಸುಶೀಲವು ತಿಳಿಯದೇನೋ
ವೇದ ಶಾಸ್ತ್ರಗಳ ಓದಿ ಅದರ
ಭೇದವರಿಯದೆ ಬರೆ ಓದಿದರೇನೋ
ಸಾಧಿಸಿ ತಾ ಸದ್ಗತಿ ಪಡೆಯದೆ ಭವ
ಭಾದೆಯಲ್ಲಿ ಭವಭವ ತಿರುಗುವ'[2]

ನೆಲಮೂಲ ಸಂಸ್ಕೃತಿಯ ಕೌಶಲಿಗಳಿಗೂ ಹಾಗೂ ಶೋಷಿತ ವಲಯದ ಅಕ್ಷರರೂಪಿ ಜ್ಞಾನಿಗಳ ನಡುವಿನ ಜಗಳ ಇಂದು ನಿನ್ನೆಯದಲ್ಲ. ಅನುಭವ ಮತ್ತು ಅರಿವಿನ ಮೂಲಕ ಪಡೆದ ಕೌಶಲ್ಯ ಮತ್ತು ಕಸುಬುಗಳು ಮಾನವೀಯತೆಗೆ ಕಾರಣವಾದರೆ, ಮೂಲತಃ ಬರೆದಿಟ್ಟ ಜ್ಞಾನ ಶೋಷಣೆ, ಹಿಂಸೆಗೆ ದಾರಿಯಾಗಿದೆ. ಬದುಕಿನಿಂದ ಪಡೆದ ಜ್ಞಾನಕ್ಕಿಂತ, ಓದಿನಿಂದ ಪಡೆದ ಜ್ಞಾನಕ್ಕೆ ಹೆಚ್ಚು ಮನ್ನಣೆ ಇರುವ ಇಂದಿನ ಸಂದರ್ಭದಲ್ಲಿ, ಬದುಕಿನಿಂದ ಪಡೆದ ಜ್ಞಾನ ಅಪಾರವಾಗಿದ್ದರೂ, ಲೆಕ್ಕಕ್ಕೆ ಬರುವುದಿಲ್ಲ. ಪದವಿ ಇದ್ದರೆ ಜ್ಞಾನವಿದೆ ಎಂದು ತಿಳಿಯುವ ಇಂದಿನ ಸ್ಥಿತಿಗೂ, ಶಾಸ್ತ್ರದ ಓದು ಇದ್ದರೆ ಪಂಡಿತರೆಂದು ತಿಳಿಯುವ ಅಂದಿನ ವಾಸ್ತವಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಇಂತಹ ಅಕ್ಷರ ಜ್ಞಾನದ ಪಂಡಿತರನ್ನು ಮೊಟ್ನಳ್ಳಿ ಹಸನಸಾಬ 'ಶ್ಯಾಣ್ಯಾ' ಎಂದು ಹೇಳಿ ಗೇಲಿ ಮಾಡಿ ಕರೆದಿದ್ದಾನೆ.

'ಶ್ಯಾಣ್ಯಾನಂದರ ಯಾತರ ಶ್ಯಾಣ್ಯಾ?
ಮೂರು ಮಲದ ಕಸಮುಸಿರಿ ಇಟಕೊಂಡು ನಾ
ಧೀರನೆಂದರೆ ಯಾತರ ಶ್ಯಾಣ್ಯಾ
ಬೇರೆ ಬೇರೆ ಕುಲ ಭಾವಿಸಿ ಭವದ

ವಿಚಾರವಿಲ್ಲದವ ಯಾತರ ಶ್ಯಾಣ್ಯಾ
ನಾ ನಂಬುದು ನರಕ ಹೌದು
ನಾ ನಳಿಯದವ ಯಾತರ ಶ್ಯಾಣ್ಯಾ
ಮಾನವ ಜನ್ಮದ ಖೂನಾ ತಿಳಿಯದೆ
ಶ್ವಾನನಾದರ ಯಾತರ ಶ್ಯಾಣ್ಯಾ
ಜ್ಞಾನಭರಿತ ನಮ್ಮ ಇಟಪೂರೀಶನೊಳು
ತಾನೇತಾನದವನೇ ಶ್ಯಾಣ್ಯಾ"[೮]

ಈ ಹಾಡು ಅಕ್ಷರದ ಅಹಂಕಾರವನ್ನು ಮತ್ತು ಅದರ ನಿಷ್ಪ್ರಯೋಜಕತೆಯನ್ನು ಹೇಳುತ್ತದೆ. ಅಕ್ಷರದಿಂದ ಬರುವ ಅರಿವಿಗಿಂತ, ಹಣಕ್ಕೆ ಹೆಚ್ಚು ಬೆಲೆ ಇದೆ. ಇಂದಿನ ಓದು ಮನುಷ್ಯನಲ್ಲಿ ಅನ್ನವಾಗಿ ಪೋಷಕವಾಗುವುದಕ್ಕಿಂತ ಹೆಚ್ಚಾಗಿ, ಅಹಂಕಾರಿಗಳನ್ನಾಗಿಸಿ, ವಿಕೃತತೆಯನ್ನೇ ಹುಟ್ಟು ಹಾಕುತ್ತಿದೆ. ಶ್ರೀಮಂತಿಕೆಯಲ್ಲಿ ಕಳೆದು ಹೋಗಿರುವ ಇಂದಿನ ಶಿಕ್ಷಣಕ್ರಮ ಮನುಷ್ಯನ 'ಖೂನ(ಗುರುತು)'ವನ್ನೇ ಕಳೆದು ಹಾಕಿದೆ. ಹಣದ ಮುಂದೆ ಎಲ್ಲಾ ಸಂಬಂಧ, ಸಂಸ್ಕಾರಗಳು ತೃಣವಾಗಿವೆ. ಶ್ಯಾಣ್ಯಾ ಎಂಬ ಪದ ಮತಿಹೀನತೆಯನ್ನು, ಸಂಸ್ಕೃತಿ ಹೀನತೆಯನ್ನು ಹೇಳುತ್ತದೆ. 'ಜ್ಞಾನಭರಿತ' ಎಂದರೆ ಸ್ವಅನುಭವದ ಜ್ಞಾನ, ತಿಳುವಳಿಕೆಯ ಜ್ಞಾನ, ಮನುಷ್ಯತ್ವದ ಮತಿಯುಳ್ಳ ಅರಿವು ಜ್ಞಾನವೇ ಹೊರತು, ಓದಿನ ಅಹಂಕಾರ ಜ್ಞಾನವಲ್ಲ ಎಂಬುದು ತತ್ವಪದಕಾರರ ನಿಲುವು.

ಈ ಸಾಮಾಜಿಕ ಶ್ರೇಣಿಕರಣ ವ್ಯವಸ್ಥೆಯಲ್ಲಿ ತೀರಾ ಉಪೇಕ್ಷೆಗೆ ಒಳಗಾಗಿರುವ ಅಸಂಖ್ಯಾತ ಸಮುದಾಯಗಳು, ಜ್ಞಾನವನ್ನು ನಿರ್ವಚಿಸಿರುವ ಬಗೆ ಭಿನ್ನವಾದದ್ದು. ತಮ್ಮ ದಿನನಿತ್ಯದ ಜೀವನಾನುಭವದಿಂದ ದತ್ತವಾದ ತಿಳಿವಿನ ಬಗೆಯನ್ನು ತಮ್ಮ ಪದಗಳಲ್ಲಿ ಕಟ್ಟಿ ಹಾಡಿದ್ದಾರೆ. ಕೂಡಲೂರು ಬಸವಲಿಂಗಪ್ಪನ ಈ ತತ್ತ್ವಪದ ಅದಕ್ಕೊಂದು ನಿದರ್ಶನ. ಅರಿವನ್ನು ತನ್ನದಾಗಿಸಿಕೊಳ್ಳುವ ಬಗೆ ಹೇಗೆ ಎಂಬುದರ ಬಗ್ಗೆ ಈ ತತ್ವಪದ ಹುಡುಕಾಟ ಮಾಡುತ್ತದೆ. ಮಾಸಿದರಿವೆಗಳ ಸೋಸಿ ಗಂಜಿ ಮಾಡುವಂಥ ಅಗಸರ ಜ್ಞಾನ ಸಾಮಾನ್ಯವಾದುದ್ದಲ್ಲ. 'ಅರಿವು ಎಂಬೊ ಸೌಳು, ಸುಣ್ಣವದರೊಳು ಕಲಸಿ' ಮಾಡುವ ಜ್ಞಾನದ ಮಥನ, ಮನುಷ್ಯನ ಬದುಕಿನ ಒಟ್ಟಾರೆ ಜೀವನ ವಿಧಾನವನ್ನು ರೂಪಕಾತ್ಮಕದಲ್ಲಿ ಹೇಳುತ್ತಿವೆ. ಈ ವೃತ್ತಿಯೊಳಗೂ ಒಂದು ಕೌಶಲ್ಯವಿದೆ. ನೈಪುಣ್ಯತೆ ಇದೆ. ಮನಸ್ಸಿನ ಕಲ್ಮಶಗಳನ್ನು ತೊಡೆದು ಹಾಕುವ ಅರಿವಿನ ಮಾರ್ಗದ ಹುಡುಕಾಟವಿದೆ ಎಂಬುದನ್ನು ಒತ್ತಿ ಹೇಳುತ್ತಿದೆ.

ತತ್ವಪದಕಾರರು ತಮ್ಮ ಪದಗಳಲ್ಲಿ ಮುಖ್ಯವಾಗಿ ವ್ಯಕ್ತಪಡಿಸಿರುವುದು ಉತ್ತಮರೆಂದು ಭಾವಿಸಿರುವ ಮೇಲ್ವರ್ಗಗಳ ಬದುಕಿನ ಬಗೆಗಲ್ಲ, ಯೋಗಿಗಳಂತೆ ತಮ್ಮ ಪಾಡಿಗೆ ತಾವು ನಿತ್ಯ ಕಾಯಕದಲ್ಲಿ ತೊಡಗಿಕೊಂಡು ದುಡಿವ ಕಮ್ಮಾರ, ಚಮ್ಮಾರ, ಕುರುಬ, ಒಕ್ಕಲಿಗ, ಪಿಂಜಾರ, ಅಗಸ ಇತ್ಯಾದಿ ಶ್ರಮಿಕ ವರ್ಗಗಳ ಬಗ್ಗೆ. ಇಂತಹ ಅಸಂಖ್ಯಾತ ವರ್ಗಗಳ ಶ್ರಮಿಕರು ಈ ತತ್ವಪದಗಳಲ್ಲಿ ಸ್ಥಾನ ಪಡೆದಿದ್ದಾರೆ.

'ನೀರು ಇಲ್ಲದೆ ಜಳಕ ಮಾಡಿರಬೇಕು
ಮಡಿಯನಿಲ್ಲದೆ ಬಟ್ಟೆ ಉಟ್ಟಿರಬೇಕು
ಊಟಾ ಮಾಡದೆ ಹೊಟ್ಟೆ ತುಂಬಿರಬೇಕು
ಎಚ್ಚರದೊಳು ನಿದ್ದಿ ಹತ್ತಿರಬೇಕು
ತಂಬಾಕಿಲ್ಲದೆ ಬತ್ತಿ ಸೇದಿರಬೇಕು
ಸೆರೆಯ ಕುಡಿಯದೆ ನಿಶಾ ಆಗಿರಬೇಕು
ಝೋಲಿ ಹೋಗಿ ಮಹಾಂತನ ಮುಟ್ಟಿರಬೇಕು'[೯]

ಕೂಡಲೂರು ಬಸಲಿಂಗಪ್ಪನಲ್ಲಿ, ಅಗಸನು ಬಟ್ಟೆ ಒಗೆದು ಮಡಿ ಮಾಡುವಂತೆ, ರೈತ ಹೊಲವನ್ನು ಹದಮಾಡಿ ಉತ್ತಿ, ಬಿತ್ತಿ, ಬೆಳೆ ಬೆಳೆಯುವಂತೆ, ಅಡಿಗೆ ಮಾಡುವಂತೆ, ಮಡಿವಾಳಪ್ಪನಲ್ಲಿ ಶರೀರವೆಂಬುದನ್ನು ಬಟ್ಟೆ, ಹೊಲ, ಅಡಿಗೆಗೆ ಅನ್ವಯಿಸಿ ಹಾಡು ಕಟ್ಟುವ ಕ್ರಮ ಕಾಣುತ್ತದೆ. ಮನುಷ್ಯನ ಶರೀರವನ್ನು ಯೋಗದ ಮೂಲದ ಹದ ಮಾಡುವ, ಪಕ್ವಗೊಳಿಸುವ ಛಲ ಎಲ್ಲಾ ಅನುಭಾವಿಗಳ ಮುಖ್ಯ ಗುರಿ. ಇವು ಮನುಷ್ಯ ಶರೀರವು ತಲುಪಬೇಕಾದ, ಇರಬೇಕಾದ ಸ್ಥಿತಿಯನ್ನು ಹೇಳುತ್ತದೆ.

ಚಿದಾನಂದ ಅವಧೂತ ಆಧ್ಯಾತ್ಮ ಮತ್ತು ವಿದ್ಯೆ ಇವೆರಡನ್ನು ಮುಖಾಮುಖಿ ಮಾಡುತ್ತಾನೆ.

'ಆಧ್ಯಾತ್ಮ ಹೆಚ್ಚೇನು ಅವಿದ್ಯೆ ಕಡಿಮೇನು
ಆಧ್ಯಾತ್ಮ ವಿದ್ಯೆಯನು ಅನುಭವಿಸಲರಿಯದವಗೆ ॥ಪ॥
ಪುಸ್ತಕಂಗಳ ಪಿಡಿದು
ಪುಸ್ತಕದೊಳಿದ್ದುದನು ವಿಸ್ತರಿಸಿ ಎಲ್ಲರಿಗೆ ಹೇಳುತಿಹನು
ಪುಸ್ತಕದ ಅರ್ಥವನು ಮನಕೆ ತಾರದಲೆ
ಪುಸ್ತಕದ ಅಕ್ಷರವ ಪೇಳುವವಗೆ
ಜ್ಞಾನವನು ಹೇಳುತಿಹ
ಜ್ಞಾನವನು ತಾನರಿಯ
ಜ್ಞಾನಿಗಳ ನಡೆಯನು ಮೊದಲೆ ತಿಳಿಯ
ಜ್ಞಾನಿಗಳನೇ ಕಂಡು ಜ್ಞಾನವಿಲ್ಲೆಂದೆಂಬ
ಜ್ಞಾನಿ ತಾನೆಂತೆಂದು ಬರೆ ಬಣ್ಣಿಸುವವಗೆ'[೧೦]

ಆಧ್ಯಾತ್ಮ ಮತ್ತು ವಿದ್ಯೆಯ ನಡುವಿನ ತರ್ಕವೇ ಈ ತತ್ವಪದದ ಮುಖ್ಯ ಆಶಯ. ಇಲ್ಲಿ ಆಧ್ಯಾತ್ಮ ಮತ್ತು ವಿದ್ಯೆ ಇವೆರಡರಲ್ಲಿ ಯಾವುದು ಹೆಚ್ಚು? ಎಂಬ ಪ್ರಶ್ನೆಯ ಶೋಧಕ್ಕೆ ತೊಡಗುತ್ತಾರೆ. 'ಪುಸ್ತಕದ ಅರ್ಥವನು ಮನಕೆ ತಾರದಲೆ' ಜ್ಞಾನ ಹೇಗೆ ಲಭಿಸಿತು ಎನ್ನುವ ಅವಧೂತರು, ಆಧ್ಯಾತ್ಮವನ್ನು ಕುರಿತು 'ಯೋಗಾಮೃತದ ಪೂರ್ಣರಸದ ಸವಿದುಣ್ಣದಲೆ' ಆಧ್ಯಾತ್ಮ ದೊರಕದು ಎಂದಿದ್ದಾರೆ. ಇವರು ಯೋಗ ಸಾಧಕರು. ಲೋಕಾನುಭವವನ್ನೇ ಪ್ರಮಾಣವೆಂದು ನಂಬಿದವರು.

ಜ್ಞಾನಸಾಧನೆ ಇನ್ನೊಬ್ಬರು ಮಾಡುವುದನ್ನು ನೋಡಿಯಾಗಲಿ, ಬೇರೊಬ್ಬರು ಹೇಳುವುದನ್ನು ಕೇಳಿಯಾಗಲಿ, ಬರುವಂತಹದ್ದಲ್ಲ. ಅದನ್ನು ಪ್ರಯತ್ನಪೂರ್ವಕವಾಗಿ ಅರಿಯುವ ಮೂಲಕ, ಸ್ವತಃ ತಾವೇ ಸಿದ್ಧಿಸಿಕೊಳ್ಳಬೇಕು. ಸಾಧನೆ, ಮನನ, ಅಭ್ಯಾಸ ಹಾಗೂ ದೃಢ ಚಿತ್ತದಿಂದ ಮಾತ್ರ, ಆಧ್ಯಾತ್ಮದ ಉನ್ನತಿಗೆ ಏರಬಹುದು. ವಿದ್ಯೆಯನ್ನು ಪಡೆಯಬಹುದೆಂಬುದು ಇಲ್ಲಿನ ಗೂಡಾರ್ಥ. ಜಪ-ತಪಗಳ ಮೂಲಕ ದೇವರನ್ನು ಪೂಜಿಸಿದರೆ ಯೋಗಿಯಾಗುವುದಿಲ್ಲ. ಪುಸ್ತಕಗಳನ್ನು ಓದಿ ಪಠಿಸಿದ ಮಾತ್ರಕ್ಕೆ ವಿದ್ಯೆ ದೊರಕುವುದಿಲ್ಲ. ಅದಕ್ಕೆ ಸಿದ್ಧರಾಮನ ವಿದ್ಯೆಯೆಂಬುದು ಅಭ್ಯಾಸಿಗನ ಕೈವಶ ಎಂದಿದ್ದಾನೆ. ಇವೆರಡೂ ದೊರಕಬೇಕೆಂದರೆ, ಮೊದಲು ತನ್ನ ತಾನು ಅರಿಯಬೇಕು. ಇದೇ ಅನುಭಾವಿಗಳ ದಾರ್ಶನಿಕ ತತ್ವ. ಬಹುತೇಕ ಎಲ್ಲಾ ಅನುಭಾವಿಗಳ ಜೀವನಾನುಭವ ಸಾರ ಇದೇ ಆಗಿದೆ.

ಸಾಧಕನು ಸಾಧಿಸಿಕೊಳ್ಳುವ ಜ್ಞಾನವೆಂಬ ಸಾಧನವು ಸಾಮಾಜಿಕ ನೆಲೆಯಲ್ಲಿ ಜಾತಿ, ವರ್ಗ, ಲಿಂಗ ಮತ್ತು ಧರ್ಮಾತೀತವಾದುದಾಗಿರುತ್ತದೆ. ಇವರು ಮಾಡುವ, ಸಾಧಿಸಿಕೊಳ್ಳುವ ಸುಜ್ಞಾನ, ಅರಿವು, ವಿವೇಕಗಳು ಸಾಮಾಜಿಕ ನೆಲೆಯಲ್ಲಿ ಎಲ್ಲಾ ಸಾಮಾಜಿಕ ಕಟ್ಟಳೆಗಳನ್ನು ಮೀರಿರುತ್ತವೆ. ಅದನ್ನು ಮೀರದೇ ಇರುವುದು ಜ್ಞಾನವೇ ಅಲ್ಲ. ಅಂದರೆ ಸಾಮಾಜಿಕ ತಾರತಮ್ಯಗಳನ್ನು ಒಪ್ಪುವ ಅರಿವು, ಅರಿವೇ ಅಲ್ಲ.

'ಜಾತಿ ಸೂತಕವಿಡಿದೇತಕೆ ಬಳಲುವಿ
ಜಾತಿ ನಿಬಂಧದ ಮಾತಿಲ್ಲ ಜ್ಞಾನದಿ
ಆತ್ಮವನರಿಯದ ಪಾತಕಿಗಳು ಕೂಡಿ
ಜಾತಿಯ ಸೂತ್ರದಿ ಬದ್ಧರಾಗಿಹರು
ಜಾತಿ ಕಲ್ಪನೆಯಳಿದು ಹೋದಂತಹ
ದಾತಗೆ ಜಾತಿಯ ಸೂತಕವುಂಟೆ
ಪರಶಿವ ಬೀಜ ಸರ್ವರ ಯೋನಿಯೊಳು ಪು
ಟ್ಟಿರುವ ದೆಂಬುವ ಮರ್ಮವರಿಯದ ನರರು
ಧರೆಯೊಳು ಕುಲಛಲವೆರಸಿ ಜ್ಞಾನಿಗಳನು
ಪುರಡಿಸಿ ನರಕಕೆ ಹಿರಿಯರಾಗುವರು
ಜಾತಿ ವರ್ಣವು ಕುಲಗೋತ್ರಗಳೆಲ್ಲಬ್ಜ
ಜಾತನ ಸೃಷ್ಟಿಯಲ್ಲೇತರ ಫಲವು
ಭೂತನ ಮನುಜರಿಂ ರೀತಿಯಿಲ್ಲದ ಕುಲ
ಜಾತಿಗಳಾಗಿ ಪ್ರಖ್ಯಾತಿ ತೋರಿದವು
ಕುಲಜಾತಿಯ ಗೋತ್ರಗಳು ಬಹುವಾದೊಡೆ
ಸಲೆಜ್ಞಾನದೊಳೈಕ್ಯಪೊಂದುವವೇಕೆ

ಕುಲಮತ ಬಹುವೆಂಬ ಬಲೆಗೆ ಬೀಳದೆ ನಿ
ಚ್ಚಲಶಂಕರ ಗುರುವಿನ ಕುಲದೊಳು ವಾಸಿಸು'[೧೧]

ಎಂದು ಜಾತಿಯನ್ನು ವ್ಯಂಗ್ಯ ಮಾಡುತ್ತಲೇ, ಜ್ಞಾನವನ್ನು ಅರಿಯುವ ಮಾರ್ಗವನ್ನು ತೋರುತ್ತಾನೆ. 'ಕುಲ ಕುಲ ಎನ್ನತಿದಿ ಕುಲಗೇಡಿ, ಕುಲದ ಖೂನು ಹೇಳು ನಿಜನೋಡಿ' ಎಂದು ವೈದಿಕ ಸಂಸ್ಕೃತಿಯ ವರ್ಣಾಶ್ರಮವನ್ನು ಆಧ್ಯಾತ್ಮದಿಂದ ಹೊರಗೆಳೆದು ಅದರ ಪ್ರವೃತ್ತಿಗಳನ್ನೆಲ್ಲ ಜಾಡಿಸಿದ್ದಾರೆ. ಕೈವಾರ ನಾರಾಯಣಪ್ಪ, ಹೊಲೆಯನ ಅಂತರಂಗದಲ್ಲಿ ದೇವರಿದ್ದಾನೆ, ಅಲ್ಪಜಾತಿ ಎಂಬುದಿಲ್ಲ ಎನ್ನುವುದರ ಮೂಲಕ ಸಮಾನತೆಯ ಪರಿಕಲ್ಪನೆಯನ್ನು ಕಟ್ಟಿಕೊಟ್ಟಿದ್ದಾರೆ. 'ಜಾತಿ ಕಲ್ಪನೆಯಳಿದು ಹೋದಂತಹ ಜಾತಿಯ ಸೂತಕವುಂಟೆ?' ಎಂದು ಎಚ್ಚರಿಸಿದ್ದಾರೆ. ಜಾತಿಯ ಬಗೆಗಿನ ವ್ಯಾಮೋಹ ತೊಲಗಿದಾಗ ಮಾತ್ರ ಜ್ಞಾನ ವರ್ಧಿಸುತ್ತದೆ. ಜಾತಿ ಮತ್ತು ಜ್ಞಾನ ಎಂದಿಗೂ ಜೊತೆಯಾಗಿ ಸಾಗಲಾರವು. ಆದ್ದರಿಂದ ಜಾತಿ, ಕುಲ ಮತಗಳೆಂಬ ಮೋಹದಿಂದ ಮುಕ್ತನಾಗಬೇಕೆಂದಿದ್ದಾರೆ.

ತತ್ವಪದಕಾರರು ವ್ಯಕ್ತಿಗತ (ವೈಯಕ್ತಿಕ) ಸಾಧಕರು. ಅದನ್ನು ಸಾಮಾಜಿಕ ನೆಲೆಯಲ್ಲಿ ಮಾಡಲೆಂದು, ಶರಣರು 'ಅನುಭವ ಮಂಟಪ'ವನ್ನು ಸ್ಥಾಪಿಸಿದ್ದರು. ಅದರಂತೆ ತತ್ವಪದಕಾರರು ವ್ಯಕ್ತಿ ಮತ್ತು ಸಮಾಜಗಳ ಮೇಲೇರುವಿಕೆಗಾಗಿಯೇ ಅರಿವಿನ ಅಡಿಗೆಯನ್ನು ಮಾಡಬೇಕಾಗಿದೆ ಎಂದಿದ್ದಾರೆ. ಹಲವು ಪದಾರ್ಥಗಳನ್ನು ಕೂಡಿಸಿ, ಒಂದು ತಿನಿಸನ್ನು ತಯಾರಿಸುವಂತೆ, ಸಾಮಾಜಿಕವಾಗಿ ಮಾಡುವ ಜ್ಞಾನದ ಅಡುಗೆಯು ಹಲವು ಜಾತಿ ಧರ್ಮಗಳ ಜನರು ಕೂಡಿ ಮಾಡುವ ಅಡುಗೆಯೇ ಆಗಿದೆ. ಅಂದರೆ ಸಂತ ಪರಂಪರೆಯಲ್ಲಿ ತಯಾರಿಸಿರುವ ಅರಿವು. ಜ್ಞಾನ, ಸಾಮಾಜಿಕ ವಿವೇಕಗಳು ಎಲ್ಲಾ ಜಾತಿಗಳು, ಧರ್ಮಗಳು ಕೂಡಿ ತಯಾರಿಸಿದ ಅಡಿಗೆಯಾಗಿದೆ. ಇದನ್ನೇ ಎಚ್.ಎಸ್.ಶಿವಪ್ರಕಾಶ ಅವರು 'ಎಲ್ಲ ಜಾತಿಯ ಮರಗಳ ಕಾಡು ತತ್ವಪದಕಾರರು' ಎಂದು ಹೇಳಿದ್ದಾರೆ. ಈ ಕಾಡು ವೈದಿಕ ಪುರೋಹಿತಶಾಹಿ ಪರಂಪರೆ ಕಟ್ಟಿರುವ ಜ್ಞಾನಕ್ಕಿಂತ, ಭಿನ್ನವಾದ ಜ್ಞಾನದ ಅಡುಗೆಯಾಗಿದೆ.

'ಅಡಿಗೆ ಮಾಡಬೇಕಣ್ಣ
ನಾವೀಗ ಜ್ಞಾನದ ಅಡಿಗೆಯನು ಮಾಡಬೇಕಣ್ಣ
ಅಡಿಗೆಯನು ಮಾಡಬೇಕು, ಮಥಿಸಬೇಕು ಮದಗಳನು
ಒಡೆಯನಾಜ್ಞೆಯಿಂದ ಒಳ್ಳೇ ಸಡಗರಾದ ಮುಕ್ತಿ ಅದಕೆ
ಕಳೆಯೊಟ್ಟಳುಂಟು ಅಡಿಗೆಯನು ಮಾಡಬೇಕಣ್ಣ'[೧೨]

'ಗಡಿಗಿ ತೊಳೆದು ಅಡಗಿ ಮಾಡಮ್ಮ
ಅನುಭಾವದಡಗೆಯ ಮಾಡಿ ಎಡಿಯ ಮಾಡಮ್ಮಾ
ದೇವರಿಗೆಡಿಯ ಮಾಡಿ ಗಂಡಗುಣಿಸಮ್ಮಾ
ಗಡಗಿ ತೊಳೆದು ಅಡಗಿ ಮಾಡಮ್ಮಾ। ತನುವೆಂಬ
ಗಡಗಿ ತೊಳೆದು ಅಡಗಿ ಮಾಡಮ್ಮಾ'[೧೩]

ಈ ತತ್ವಪದಗಳಲ್ಲಿ ಜ್ಞಾನವು ಸಾಮಾನ್ಯವಲ್ಲ, ಅದು ಸುಲಭದಲ್ಲಿ ದೊರಕುವುಂಥದ್ದು ಅಲ್ಲ. ಇವರು ಮಾಡುವ ಅಡುಗೆ ಅಂದರೆ ಜ್ಞಾನ. ತನ್ನನ್ನು ತಾನು ಮಥಿಸಿಕೊಂಡು, ಪರಿಪೂರ್ಣವಾದಂತಹ ಆತ್ಮಜ್ಞಾನ. ಇವರು ರೂಪಿಸುವ ಜ್ಞಾನ ಕೇವಲ ವ್ಯಕ್ತಿವಾದಿಯಾದ ಸ್ವಾರ್ಥದ, ಜ್ಞಾನದ ಉತ್ಪಾದನೆಯಲ್ಲ. ಅದು ಸಾಮಾಜಿಕ ಬಿಡುಗಡೆಗೆ ದಾರಿಯಾಗುವಂತಹ ಜ್ಞಾನವೇ ಆಗಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಅದಕ್ಕಾಗಿ ನಮ್ಮೊಳಗಿರುವ ಮದ, ಮತ್ಸರ, ಹಮ್ಮು-ಬಿಮ್ಮು ಇತ್ಯಾದಿ ಕಲ್ಮಷಗಳನ್ನು ಕಳೆದು ಗುರುವನ್ನು ನೆನೆಯಬೇಕು. ಆಗ ಭಕ್ತಿ ಮತ್ತು ಅರಿವಿನ ಮೂಲಕ ಭವ-ಭೇದಗಳು ಕಳೆದು ಜ್ಞಾನ ದತ್ತವಾಗುತ್ತದೆ. 'ಒಲೆ' ಮತ್ತು 'ಅಡಿಗೆ'ಗಳು, ರೂಪಕಗಳಾಗಿ ಜ್ಞಾನದ ಪ್ರಕ್ರಿಯೆಗೆ ಇಂಬುಕೊಡುತ್ತಿವೆ. ಅಡುಗೆ ತಯಾರಾಗಲು ಅನುಸರಿಸಿದ ಕ್ರಮಗಳು ರುಚಿಯಾದ ಊಟಕ್ಕೆ ಅಣಿಗೊಳಿಸುವಂತೆ, ಜ್ಞಾನದ ತಿಳಿಯುವಿಕೆಯು ನಿರಂತರವಾಗಿ ನಮ್ಮ ದೈನಂದಿನ ಚಟುವಟಿಕೆಗಳ ರೀತಿಯಲ್ಲಿ ಪ್ರತಿಯೊಬ್ಬ ಮನುಷ್ಯನಲ್ಲಿ ನಿತ್ಯವೂ ಮಥನಗೊಳ್ಳಬೇಕು. ಆಗಲೇ ನಮ್ಮೊಳಗಿನ ಅರಿವು ಜಾಗೃತಗೊಂಡು ನಮಗೆ ಗುರುವಾಗಿ ದಕ್ಕುವುದು ಎಂಬುದನ್ನು ಸೂಚ್ಯವಾಗಿ ಹೇಳಲಾಗಿದೆ.

ತತ್ವಪದಕಾರರ ರಚನೆಗಳ ಮತ್ತೊಂದು ನೆಲೆಯೆಂದರೆ ಶೋಷಣೆ ದಬ್ಬಾಳಿಕೆಗಳ ವಿರುದ್ಧ ಎತ್ತಿರುವ ಧ್ವನಿ. ಆ ಕಾಲದ ಜನ ಪ್ರಭುತ್ವದ ಶೋಷಣೆಗೆ ಗುರಿಯಾಗಿದ್ದರಿಂದ ವ್ಯಾಪಾರ, ವಹಿವಾಟು, ಗ್ರಾಮಾಡಳಿತ, ರಾಜಕೀಯ ಕೋಲಾಹಲ, ಗಣ್ಯವ್ಯಕ್ತಿಗಳು ಮತ್ತು ಭೂ ಯಜಮಾನರಿಂದ ಆಗುತ್ತಿದ್ದ ಸುಲಿಗೆಯಂಥಹ ಕ್ರೂರ ನಿಯಮಗಳು ಅಂದಿನ ಸಮಾಜವನ್ನು ತಲ್ಲಣಗೊಳಿಸಿವೆ. ಏಕೆಂದರೆ ಸಾಮ್ರಾಜ್ಯಶಾಹಿ ವ್ಯವಸ್ಥೆ ನಮ್ಮ ಸತ್ವಗಳನ್ನು ಬರಿದು ಮಾಡಿ, ನಮ್ಮನ್ನು ಬೌದ್ಧಿಕವಾಗಿ ಮತ್ತು ಮಾನಸಿಕವಾಗಿ ಹಿಡಿತ ಸಾಧಿಸಿ ನಿಂತ ನೆಲೆಯೇ ಪರಕೀಯವಾಗುತ್ತಿದ್ದ ಸ್ಥಿತಿಯನ್ನು ನಿರ್ಮಾಣ ಮಾಡಿತ್ತು. ಆ ಕಾಲದ ಒತ್ತಡ ಘರ್ಷಣೆಯಿಂದ ಜನರ ಬದುಕನ್ನು ಹದಗೆಡಿಸಿ, ಸಂಸ್ಕೃತಿಯ ನಾಶಕ್ಕೂ ಮುಂದಾಯಿತು. ಸಾಮ್ರಾಜ್ಯಶಾಹಿ ಹಿಡಿತ ದೃಡಗೊಂಡ ನಂತರ ಸಮುದಾಯದ ಬದುಕು ಮತ್ತಷ್ಟೂ ಅಸ್ಥಿರವಾಯಿತು. ಅನುಭಾವಿಗಳೆಲ್ಲರೂ ಬದುಕನ್ನು, ಅಸ್ಥಿರವೆಂದು ಹೇಳುವುದಕ್ಕೆ ಈ ಹಿನ್ನೆಲೆಯಲ್ಲಿ ಉತ್ತರ ಹುಡುಕಬಹುದಾಗಿದೆ. ವೈದಿಕರು ಧರ್ಮದ ನಿರ್ಬಂಧಗಳ ಮೂಲಕ ಬಂಧನವನ್ನು ಒಡ್ಡಿದ್ದರು. ಹೊಸ ಸಾಮಾಜಿಕ ನಿಯಮಗಳನ್ನು ರೂಪಿಸಿಕೊಳ್ಳಲು ಸಿದ್ಧವಾಗುತ್ತಿದ್ದ ಸ್ಥಿತಿಯಿಂದಾಗಿ, ಹೊಸ ಆಡಳಿತ ವ್ಯವಸ್ಥೆಯನ್ನು ರೂಪಿಸುವುದು ಅಸಾಧ್ಯವಾಗಿತ್ತು. ಇಂತಹ ಸಂದರ್ಭದಲ್ಲಿ, ಸಾಮಾಜಿಕ ಬದುಕಿನ ಐಕ್ಯತೆಯನ್ನು ಬಯಸುವ ಇವರ ಮನಸ್ಥಿತಿಯನ್ನು ಇವರ ರಚನೆಗಳ ಮೂಲಕ ತಿಳಿಯಬಹುದಾಗಿದೆ. ಸಾಮ್ರಾಜ್ಯಶಾಹಿ ಆರ್ಥಿಕ ಯೋಜನೆಗಳು ಪಟ್ಟಣಗಳ ಬೆಳೆಸುವಿಕೆಯ ಕಡೆಗೆ ಹೊರಟು, ಗ್ರಾಮೀಣ ಬದುಕಿನ ವಿಘಟನೆಗೆ ದಾರಿ ಮಾಡಿಕೊಟ್ಟವು. ಪಟ್ಟಣದ ಬದುಕು ಮತ್ತು ಗ್ರಾಮೀಣ ಸ್ಥಿತಿಗತಿಗಳು ವಿಲಕ್ಷಣ ಸ್ಥಿತಿಯನ್ನು ಸೃಷ್ಟಿಸಿ, ತೀವ್ರ ಕಳವಳಕ್ಕೆ ಗುರಿ ಮಾಡಿತು.

'ಜಿಟ್ಟೀಯ ಹುಳುಗಳೆದ್ದವು ನೋಡು
ಸೃಷ್ಟಿಪತಿ ಅರಸರಿಗೆಲ್ಲಾ ಕೇಡು

ಹೇಸಿ ಮತಿಗೇಡಿ ಮಾರಿಕುಮಾರ
ದೇಶ ದೇಶವ ನುಂಗುವ ಕ್ರೂರ
ರೂಸ ಪ್ಯಾರಿಸ ಇಂಗ್ಲಿಷ್ ದೇಶಾಧಿಪರು ಅವನೊಳು
ರೋಷದಿಂದಲಿ ಕಾದಿ ವರ್ಗ
ವಿನಾಶ ಮಾಡುವರೆಂದು ತಿಳಿದು'[೧೪]

ಒಂದು ಸಂಸ್ಕೃತಿಯ ಕ್ರಿಯಾಸಂಬಂಧವನ್ನು ಜಾಗೃತ ಮತ್ತು ಆಂತರಿಕ ಪ್ರಜ್ಞೆಯ ಎಚ್ಚರದಿಂದ ನಿಂತು ಪರಿಭಾವಿಸುವಾಗ, ಮಹತ್ತರ ಒಳನೋಟಗಳು ಏರ್ಪಡುತ್ತವೆ. ಒಂದು ಕಾಲದ ಸಾಂಸ್ಥಿಕ ನಂಬಿಕೆಗಳ ನಡುವಣ ಘರ್ಷಣೆಯನ್ನು ಈ ಶತಮಾನವೂ ಅನುಭವಿಸಿದೆ. ಬ್ರಿಟಿಷ್ ವಿದ್ಯಾಭ್ಯಾಸವೇ, ರಾಷ್ಟ್ರೀಯ ಜಾಗೃತಿಗೆ ಮೂಲ ಕಾರಣವಾಯಿತು ಎಂಬ ಚರಿತ್ರೆಯ ಮಾತಿಗೆ, ಇಂತಹ ರಚನೆಗಳು ತೋರಿಸಿರುವ ಪ್ರತಿಕ್ರಿಯೆ ಗಮನಾರ್ಹವಾಗಿದೆ.

ಸಾಮಾನ್ಯರನ್ನು ತನ್ನಂತೆ ಬದುಕಲು ಬಿಡದ ವಸಾಹತುಶಾಹಿ ನೀತಿ, ದೇಶಿ ಸಂಸ್ಕೃತಿಯನ್ನು ಅಧೀನದಲ್ಲಿ ಇಟ್ಟುಕೊಳ್ಳಲು ಹೆಣಗಿತು. ಇದನ್ನೇ 'ಏನಾಗತದ ಎಂತಾಗತದೋ ಈ ನಾಡ ನೀನೋಡ ತಮ್ಮಾ' ಎಂದು ಮಡಿವಾಳಪ್ಪ ಕಾಲಜ್ಞಾನದಂತೆ ಮಾತನಾಡಿದ್ದಾನೆ. ಇದು ವಾಸ್ತವತೆಗೆ ಹತ್ತಿರವಾದದ್ದೇ ಆಗಿದೆ. ಮೇಲುನೋಟಕ್ಕೆ ಭವಿಷ್ಯದಲ್ಲಿ ಆಗುವಂಥ ಸ್ಥಿತಿಯನ್ನು ಹೇಳುವಂತೆ ಕಂಡರೂ, ಅದರ ಗರ್ಭದಲ್ಲೇ ಹುದುಗಿಟ್ಟಿದ್ದ ವಾಸ್ತವ ಸ್ಥಿತಿಯನ್ನು ಹೇಳಿದ್ದಾರೆ.

'ದುಡಿದುಣ್ಣುವ ರೈತರಿಗೆ ಏನಿಲ್ಲ ರೊಕ್ಕ
ದುಡಿಯುವ ಭಂಟರಿಗೆ ಭಾರಿ ಬಿಂಕ
ದುಡಿಸಿಕೊಳ್ಳುವ ಜನಕೆ ಭಾರಿ ಸೊಕ್ಕು
ಅಂಥವರೆ ಆಳಾಕ ಬರತಾರ ದೇಶಕ
ದೇಶವನು ನಿಯಂತ್ರಿಸಿ ಆಳಾಕ ಬರತಾರ
ನಲಿದು ದುಡಿವರ ಕೈಕಡಿಯುವ ಸರತಿ ಬರತಾದೊ
ಸುಳ್ಳೇಳುವರೆಲ್ಲ ಸತ್ಯವಂತರಾಗಿ ಮರೆತಾರೊ
ಕಳ್ಳರೆಲ್ಲ ಕೂಡಿ ನಾಡನಾಳುವ ಸರತಿ ಬರತಾದೊ'[೧೫]

ಬ್ರಿಟಿಷರ ಆಗಮನ ಭಾರತಕ್ಕೆ ವರ್ತಕರ ಹಂತದಿಂದ ಹಿಡಿದು, ಆಡಳಿತಗಾರರ ಹಂತದವರೆಗೆ ಬದಲಾವಣೆಯಾದಂತೆ, ಪರಿಸ್ಥಿತಿಯು ಪರಿವರ್ತಿತವಾಯಿತು. ಪಾಶ್ಚಿಮಾತ್ಯ ತತ್ವಗಳು, ಮಿಲಿಟರಿ ಬಲ ಹಾಗೂ ಹೊಸ ನಾಗರಿಕತೆಗಳ ಪ್ರಭಾವಕ್ಕೆ ಒಳಗಾಯಿತು. ಗ್ರಾಮಪ್ರದೇಶಗಳಲ್ಲಿ ಶಾನುಭೋಗ, ಅಮಲ್ದಾರ, ಪಟೇಲ, ಕರಣಿಕ ಪದವಿಗಳು ಹುಟ್ಟಿಕೊಂಡವು. ದುಡಿಯದೆ, ದುಡಿಯುವವರ ಶಕ್ತಿಯ ಮೇಲೆ ಪ್ರಭುತ್ವವನ್ನು ಪಡೆಯುವ ದಲ್ಲಾಳಿಗಳಿಗೆ, ದೇಶವನ್ನು ಆಳುವ ಬಲ ಬರುತ್ತದೆ ಎಂದಿರುವ ಮಾತು ವಾಸ್ತವವಾಗಿದೆ. ಇವುಗಳು ಮನುಷ್ಯನ ಬುದ್ಧಿ ಮತ್ತು ಭಾವ, ಕ್ರಿಯೆ ಮತ್ತು ಅರಿವುಗಳ

ಮಧ್ಯ ಅಂತರವನ್ನು ಹುಟ್ಟು ಹಾಕಿ ಮನುಷ್ಯನ ಬೌದ್ಧಿಕ ಹಾಗೂ ಭೌತಿಕ ಸ್ವರೂಪಗಳಲ್ಲಿ ಅಂತರವನ್ನು ಬೆಳೆಸಿತು. ದುಡಿಯುವ ವರ್ಗಗಳನ್ನು ವಂಚಿಸಿ, ಬೆಳೆದ ಬೆಳೆಯಲ್ಲಾ ಲಾಭಕೋರರ ಪಾಲಾಗುತ್ತಿದೆ. ಪ್ರಸ್ತುತ ದಿನಗಳಲ್ಲೂ, ರೈತ ದೇಶದ ಬೆನ್ನೆಲುಬು, ಅನ್ನ ಕೊಡುವ ದೇವರು ಎಂದು ಹೊಗಳುತ್ತಾರೆ. ಆದರೆ ಬೆಳೆ ಬೆಳೆದ ರೈತರಿಗೆ ಲಾಭವಿಲ್ಲದೆ, ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಪ್ರಸಂಗಗಳು ಹೆಚ್ಚುತ್ತಿವೆ. ಇಂದಿನ ಬಹುರಾಷ್ಟ್ರೀಯ ಕಂಪನಿಗಳ ವ್ಯವಸ್ಥೆಯ ಹಿನ್ನೆಲೆಯಲ್ಲಿ ನೋಡಿದರೆ, ಈ ತತ್ವಪದ ಇನ್ನೂ ಅರ್ಥಪೂರ್ಣವಾಗುತ್ತದೆ. ಬಂಡವಾಳ ಹೂಡಿ, ದುಡಿಯದ ಭಂಟರಾಗಿ ಕಾಣುವ ಬಹುರಾಷ್ಟ್ರೀಯ ಕಂಪನಿಗಳ ಮಾಲೀಕರು ಸ್ಥಳೀಯರ ಜ್ಞಾನ, ಶ್ರಮ, ಕೌಶಲ್ಯವನ್ನು ಬಳಸಿಕೊಂಡು ಶ್ರೀಮಂತರಾಗುತ್ತಿದ್ದಾರೆ. ಅನೇಕ ಅಪರಾಧಗಳನ್ನು ಮಾಡಿದ್ದರೂ, ರಾಜಕೀಯ ಮುಖಂಡರಾಗಿ ದೇಶವನ್ನು ಆಳುತ್ತಿದ್ದಾರೆ. ಕೇವಲ ರಾಜಕೀಯ ವಲಯದಲ್ಲಿ ಮಾತ್ರವಲ್ಲ, ಸಮಾಜದ ಎಲ್ಲಾ ವಲಯಗಳಲ್ಲಿ ನಿಷ್ಠೆಯಿಲ್ಲದ, ಕನಿಷ್ಠ ಪ್ರಾಮಾಣಿಕತೆಯೂ ಇಲ್ಲದ ಬರೀ, ಸ್ವಾರ್ಥಿಗಳೇ ತುಂಬಿದ್ದಾರೆ. ಇಂತಹ ರಾಜಸತ್ತೆಯ ವಿರುದ್ಧದ ತತ್ವಪದಕಾರರ ಧ್ವನಿ ಇಂದಿಗೂ ಪ್ರಸ್ತುತವಾಗಿದೆ. ಇದು ಶ್ರಮ ಮತ್ತು ಶ್ರಮಿಕರನ್ನು ಅಗೌರವಿಸುವ ಯಜಮಾನ್ಯದೊಂದಿಗೆ ಮುಖಾಮುಖಿಯಾಗುವುದನ್ನು ಹೇಳುತ್ತವೆ.

ಶಿಲ್ಲಪ್ಪ ಎನ್ನುವ ಅನುಭಾವಿ ತನ್ನ 'ಭವದ ಬಾಜಾರ' ಎನ್ನುವ ಹಾಡಿನಲ್ಲಿ ಇಂಥ ನಿರ್ವೀರ್ಯ ಅರಿವಿನ ನೆಲೆಗಳ ಕುರಿತು ಅರ್ಥಪೂರ್ಣವಾಗಿ ಹೇಳುತ್ತಾನೆ. ಆಧುನಿಕ ಶಿಕ್ಷಣ ಹಾಗೂ ಅದು ಕೊಟ್ಟ ಭೋಗ ಹಾಗೂ ಬಾಹ್ಯಾಡಂಬರ ಪ್ರಧಾನ ನೆಲೆಗಳ ಕುರಿತು,

'ಬಟ್ಟಿ ತೊಟ್ಟಿನಿ ಚೆಸ್ಟರ್ ಮಲ್ ಮಲ್
ಕೋಟ ಕಮೀಸ ಮೈ ಒಳಗ
ಸೂಟ್ ಬೂಟ್ ಪಟ್ಲೋನ ನೆಕ್ಟಾಯ್
ಬೆಲ್ಟ್ ಕಟ್ಟಿದೇನ ಟೊಂಕನ್ಯಾಗ
..........................................
ಸಾಲಿ ಬರದ ನಾ ಕಾಲೇಜದೊಳಗ
ಮೇಲಾಗಿ ಮ್ಯಾಟ್ರಿಕ್ ಬಿ.ಎ.ದೊಳಗ
ಕನ್ನಡ ಮರಾಠಿ ಹಿಂದಿ ಅರಬ್ಬೀ
ಇಂಗ್ಲಿಷ್ ಮಾರ್ವಾಡಿ ತೆಲಗ
ಕಲಕಲ್ತು ಬ್ಯಾಸರಾದೇನಲ್ಲ
ಕಾಲೇಜು ವಿದ್ಯೆವು ಮುಗಿಯಲಿಲ್ಲ'[೧೬]

ಹಲವು ಬಗೆಯ ಉಡುಪು ಉಟ್ಟು, ಸುಗಂಧ ದ್ರವ್ಯಗಳನ್ನು ಪೂಸಿಸಿ, ಹಲವು ಭಾಷೆಗಳನ್ನು ಕಲಿತರೂ ತೃಪ್ತಿಯಿಲ್ಲ. ಕೇವಲ ಬಾಹ್ಯಡಂಬರವೇ ಪ್ರಧಾನವಾಯಿತೆ ವಿನಃ ಅಂತರಂಗದ ವಿಕಾಸವಾಗಲಿಲ್ಲ. ವಸಾಹತುಶಾಹಿ ಆಡಳಿತ, ಶಿಕ್ಷಣ ಹಾಗೂ ಜ್ಞಾನದ ಮೌಲ್ಯವನ್ನು ಕ್ಷೀಣಿಸುವಂತೆ ಮಾಡಿದೆ. ಕಾಲೇಜು(ಉನ್ನತ) ಶಿಕ್ಷಣವೆಂಬುದು ಇಂದಿನ ಮಟ್ಟಿಗೆ 'ಫ್ಯಾಶನ್' ಆಗಿ ಪರಿಣಮಿಸಿದೆ. ಆತ್ಮ

ಜಾಗೃತಿಯಂತಹ ಪ್ರಾಚೀನ ಜ್ಞಾನಮಾರ್ಗಗಳು, ಇಂದು ಸಂಪೂರ್ಣವಾಗಿ ನಾಶವಾಗಿ ಹೋಗಿವೆ ಎಂಬುದು ಈ ಹಾಡಿನಿಂದ ತಿಳಿಯುತ್ತದೆ.

'ಚಹಾ ಕಾಫಿ ಕುಡಿಬ್ಯಾಡೋ ಮಂಗ
ಚಾಳಿ ಚಟದ ಮನಸಿನ ಸಂಗ
ಥೇ ಇಂದ್ರಿಯ ನಷ್ಟವೇ ಭಂಗ'[೧೭]

ಹೋಟೆಲ್, ಕಾಫಿ, ಚಹಾ, ಸಿಗರೇಟ್ ಮುಂತಾದ ಹೊಸ ಪದ್ಧತಿಗಳನ್ನು ಈ ತತ್ವಪದಕಾರರು, 'ಊರಾಳು ಹೇಸಿ' ಎಂದಿದ್ದಾರೆ. ಇವು 'ಇಂದ್ರಿಯ ನಷ್ಟ' ಮಾಡಿ ಅನಾರೋಗ್ಯಕ್ಕೆ ದಾರಿ ಮಾಡಿಕೊಡುತ್ತವೆ. ಕೇವಲ ಉಪಭೋಗವೇ ಪ್ರಧಾನವಾದ, ಉತ್ಪಾದನಾ ರಹಿತವಾದ ಬದುಕಿನ ನಿರ್ಭಾವುಕ ನೆಲೆಗಳನ್ನು ಮೇಲಿನ ಹಾಡುಗಳು ಗ್ರಹಿಕೆಗೆ ತರುತ್ತವೆ. ಆಧುನಿಕ ಮನುಷ್ಯನ ಇಂತಹ ಲೌಕಿಕ ಅಪೇಕ್ಷೆಗಳಿಂದಾಗಿ ಅನೈತಿಕತೆ, ಭ್ರಷ್ಟಾಚಾರ, ಅಧಿಕಾರದ ವ್ಯಾಮೋಹಕ್ಕೆ ಒಳಗಾಗಿ ಅಧೋಗತಿಗಳಿದಿದ್ದಾನೆ. ಜೀವನಪರಿಯಂತ ಕಲಿತರೂ ವಿವೇಕವಂಥನಾಗದ, ನೈತಿಕ ಅಧಃಪತನವನ್ನು ಮನುಷ್ಯ ಕಂಡಿದ್ದಾನೆ. ಇದರಿಂದ ವೈಯಕ್ತಿಕ ನೈತಿಕತೆ ಹಾಗೂ ಸಾಂಸ್ಕೃತಿಕ ಬೆಳವಣಿಗೆ ಕುಂಠಿತಗೊಂಡಿದೆ.

ಚಹಾ, ಕಾಫಿ, ಸಿಗರೇಟ್ ಮುಂತಾದ ಚಟಗಳಿಂದ ದೈಹಿಕ, ಮಾನಸಿಕ ಆರೋಗ್ಯ ಹಾಳು ಎಂದ ತತ್ವಪದಕಾರರ ಸಾಮಾಜಿಕ ಕಾಳಜಿ, ವ್ಯಕ್ತಿಯ ಕಲ್ಯಾಣ ಬಯಸುತ್ತಿರುವುದನ್ನು ತೋರಿಸುತ್ತದೆ. ಇವುಗಳಲ್ಲದೆ ಬ್ರಿಟಿಷರ ಆಳ್ವಿಕೆಯಿಂದಾಗಿ ಕೋರ್ಟ್, ಕಚೇರಿ, ವಕೀಲ ಮುಂತಾದ ಹೊಸ ವ್ಯವಸ್ಥೆಗಳು ಕಾಣಿಸತೊಡಗಿದ್ದವು. ನ್ಯಾಯವನ್ನು ಕೊಡಿಸುವ 'ವಕೀಲ'ರು ಸಮಾಜದಲ್ಲಿ ಮಧ್ಯವರ್ತಿಗಳಾಗಿ ನಿಂತರು. ಆದಕ್ಕೆ, ವಡಕಿ ತಾತಪ್ಪಯ್ಯನಿಗೆ 'ವಕೀಲ' ವಿಶೇಷವಾಗಿ ಕಂಡಿದ್ದಾನೆ.

'ವಕೀಲ ಬಂದನೆ ನೋಡು
ಪರಬ್ರಹ್ಮ ವಕೀಲ ಬಂದನೆ ನೋಡು
ಅಖಿಲ ಬ್ರಹ್ಮಾಂಡ ಕಾಯ್ದುವ
ಧೀರೋಕೀಲ ಬಂದನೆ ನೋಡು
ಕಾಮ, ಕ್ರೋಧ, ಲೋಭ, ಮೋಹ
ಮದ, ಮತ್ಸರದ ಖಟ್ಲೆ ಬಗೆಹರಿಸುವ ವಕೀಲ'[೧೮]

ನ್ಯಾಯ ಒದಗಿಸಿಕೊಡುವ ವಕೀಲ ಈ ಅನುಭಾವಿಯ ದೃಷ್ಟಿಯಲ್ಲಿ ಮನುಷ್ಯನನ್ನು ಭವ-ಬಂಧನಗಳಿಂದ ಬಿಡಿಸುವ ದೇವರಂತೆ ಕಂಡಿದ್ದಾನೆ. ಮನುಷ್ಯ ತನ್ನ ಜೀವಿತ ಕಾಲದಲ್ಲಿ ಮಾಡಿದ ಪಾಪ-ಪುಣ್ಯಗಳ ಲೆಕ್ಕಾಚಾರವನ್ನು ದೇವರು ಪರಿಶೀಲಿಸುತ್ತಾನೆ. ಇಲ್ಲಿ ಸರ್ಕಾರವೇ ದೇವರು. ಈ ವಕೀಲ, 'ಪಂಚತತ್ವ ಹೈಕೋರ್ಟಿನಲ್ಲಿ ನ್ಯಾಯ ಹೂಡಿ ಪಾಸು ಆದನಲ್ಲ' ಎಂದು ವಕೀಲನ ಕೆಲಸವನ್ನು ದೇವರ ಕೆಲಸದೊಂದಿಗೆ ಸಮೀಕರಿಸಿ ಗ್ರಹಿಸಿದ್ದಾನೆ.

'ಸೂಜಿಯೇ ನೀನು ಸೂಜಿಯೇ
ಈ ರಾಜ್ಯದೊಳಗೆಲ್ಲಾ ತೇಜ ಕಾಣಿಸುವಂಥ

ತಂಪುಳ್ಳ ಉಕ್ಕಿನೊಳು ಹುಟ್ಟಿದ ಸೂಜಿಯೇ
ಸಿಂಪಿಗಣ್ಣನಿಗೆ ಬಲವಾದ ಸೂಜಿಯೇ
ಇಂಪುಳ್ಳದಾರ ಸೊಂಪು ಗುಡಿಸುವಂಥ
ಕಂಪನಿ ಸರಕಾರ ವಶವಾದ ಸೂಜಿಯೇ'[19]

ಈ ಹಾಡು ಜ್ಞಾನ-ಕ್ರಿಯೆಗಳು ಸಮನ್ವಯ ಸಾಧಿಸದೇ ಹೋದರೆ, ಜ್ಞಾನ ಎನ್ನುವುದು ಕೇವಲ ಉಳ್ಳವರ ವಶವಾಗುವ ಅಪಾಯವನ್ನು, ಆತಂಕವನ್ನು ಹೇಳುತ್ತದೆ. ಆಧುನಿಕರಲ್ಲದಿದ್ದರೂ, ಆಧುನಿಕ ಕಾಲಘಟ್ಟದಲ್ಲಿ ಬದುಕಿದ ಇವರ ರಚನೆಗಳು ಪ್ರಭುತ್ವ ವಿರೋಧಿ ನಿಲುವುಗಳಾಗಿವೆ. ಕೈಗಾರೀಕರಣ ಸಮಸ್ಯೆಗಳು, ವಿದ್ಯಾಭ್ಯಾಸ ಪದ್ಧತಿಯ ನೆಲೆಗಳು ನಮ್ಮ ಸಂಸ್ಕೃತಿಯ ಮೇಲೆ ಉಂಟು ಮಾಡಿದ ಘಾತಕವನ್ನು ಈ ಅನುಭಾವಿಗಳ ಅಭಿವ್ಯಕ್ತಿಯಲ್ಲಿ ಕಾಣಬಹುದು. ಅಲ್ಲದೆ, ಇವುಗಳನ್ನೆಲ್ಲಾ ಇವರೆಲ್ಲರೂ ತಮ್ಮ ಅನುಭಾವದ ನೆಲೆಯಲ್ಲಿ ಗ್ರಹಿಸಿದ್ದೆ ಹೆಚ್ಚು. ಗ್ರಾಮೀಣ ಸಂಸ್ಕೃತಿಯ ಮೇಲೆ ಬ್ರಿಟಿಷರ ದಬ್ಬಾಳಿಕೆಯ ಸಂದರ್ಭದಲ್ಲಿ, ತತ್ವಪದಕಾರರ ಈ ಸಮುದಾಯಿಕ ಎಚ್ಚರ ಮತ್ತು ವ್ಯಕ್ತಿಯ ವೈಯಕ್ತಿಕತೆಯ ದೃಷ್ಟಿಯಿಂದ ಮಹತ್ವದ ಮುನ್ನೆಡೆಯಾಗಿದೆ. ಇಲ್ಲಿ ಆಧುನಿಕ ಬದಲಾವಣೆಯನ್ನು ಮತ್ತು ಶಿಕ್ಷಣ ಕ್ರಮವನ್ನು ಸ್ವೀಕರಿಸುವ ಮತ್ತು ನಿರಾಕರಿಸುವ ದ್ವಂದ್ವ ಇವರ ರಚನೆಗಳಲ್ಲಿ ಕಂಡುಬರುತ್ತವೆ.

ಜ್ಞಾನವೊಂದು ಕೌಶಲ್ಯ ಇದ್ದಂತೆ. ತನ್ನ ತಾನರಿಯುವ ಪರಿ. ಕಾವ್ಯ ಹಾಗೂ ಶಾಸ್ತ್ರಗಳಿಗಿಂತ ಭಿನ್ನವಾದದ್ದು. ಕೌಶಲ್ಯ, ಸ್ವ-ಅನುಭವ ಹಾಗೂ ಸಾಧನೆಗಳಿಂದ ಕಲಿಯುವಂಥದ್ದು. ಅಕ್ಷರ ಬೌದ್ಧಿಕ ಕ್ರಿಯೆಯಾದರೆ, ಕೌಶಲ್ಯ ಅಂತರಂಗದ ಕ್ರಿಯೆ. ಕೌಶಲ್ಯ, ಜ್ಞಾನ ಹಾಗೂ ಅನುಭವವನ್ನು ವಿಚ್ಛೇದನಗೊಳಿಸುವುದರಿಂದ ಸೃಷ್ಟಿಶೀಲತೆ ಸಾಧ್ಯವಾಗುವುದಿಲ್ಲ

'ಜ್ಞಾನವನು ಹೇಳುತಿಹ ಜ್ಞಾನವನು ತಾನರಿಯ
ಜ್ಞಾನಿಗಳ ನಡೆಯನು ಮೊದಲೇ ತಿಳಿಯ
ಜ್ಞಾನಿಗಳನೇ ಕಂಡು ಜ್ಞಾನವಿಲ್ಲೆಂದೆಂಬ
ಜ್ಞಾನಿ ತಾನೆಂತೆಂದು ಬರೆ ಬಣ್ಣಿಸುವವಗೆ'[20]

ಲೋಕಾನುಭವವನ್ನೇ ಪ್ರಮಾಣವೆಂದು ನಂಬಿದ ತತ್ವಪದಕಾರರು, ಪುಸ್ತಕದಿಂದ ದೊರಕುವ ಜ್ಞಾನವನ್ನು ಅನುಮಾನದಿಂದ ನೋಡಿದ್ದಾರೆ. ಒಂದು ವೇಳೆ ಪುಸ್ತಕದಲ್ಲಿ ಅರಿವಿನ ಮಾರ್ಗಗಳಿದ್ದರೂ, ಅಕ್ಷರ ಬಲ್ಲ ಪಂಡಿತರನ್ನು 'ಕೂಚಿ ಭಟ್ಟರು' ಎಂದಿದ್ದಾರೆ. ಓದಿಕೊಂಡು ಅದನ್ನು ತೋರಿಕೆಯ ಜ್ಞಾನವಾಗಿ, ಬಂಡವಾಳ ಮಾಡಿಕೊಂಡವರನ್ನು ಈ ಪದ್ಯದಲ್ಲಿ ವಿಮರ್ಶಿಸಲಾಗಿದೆ. ಮತ್ತೊಬ್ಬರಿಗೆ ಓದಿ ಹೇಳುವ, ಬುದ್ಧಿ ಹೇಳುವ ಜನರು ಆ ಓದಿನ ಅರ್ಥ ಹಾಗೂ ಮಾತಿನ ಒಳಾರ್ಥವನ್ನು ತಾವೇ ತಿಳಿದಿರುವುದಿಲ್ಲ. ಇಂದಿನ ಆಧುನಿಕ ಓದು ಇದೇ ರೀತಿಯದ್ದು. ಆಧುನಿಕ ಓದಿನ ಫಲ ಸಮಾಜಕ್ಕಾಗಲಿ, ಸಂಸ್ಕೃತಿಗಾಗಲೀ ಉಪಯುಕ್ತವಾಗುತ್ತಿಲ್ಲ. ಓದು ಸಮಾಜಮುಖಿ ಚಿಂತನೆಯಾಗದೇ ವ್ಯಕ್ತಿಯ ಅಹಂನ್ನು ಬೆಳೆಸುತ್ತದೆ. ಸಂಸ್ಕಾರ ನೀಡಬೇಕಾದ ಅಕ್ಷರ, ವ್ಯಕ್ತಿತ್ವದ ನಾಶಕ್ಕೆ ಕಾರಣವಾಗಿದೆ.

ಇಂಥ ಜ್ಞಾನಕ್ಕೆ ಪುನರುತ್ಪತ್ತಿ ಸಾಮರ್ಥ್ಯವೇ ಬರುವುದಿಲ್ಲ. ಜ್ಞಾನವು ತನ್ನನ್ನು ಲೋಕಗ್ರಹಿಕೆಯಿಂದ ಭಿನ್ನವೆಂದು ತಿಳಿದಾಗ ಅದು ಅಜ್ಞಾನ ಮತ್ತು ಅಹಂಕಾರಕ್ಕೆ ಕಾರಣವಾಗುತ್ತದೆ. ಇದರಿಂದ ಮನುಷ್ಯ ತನಗೆ ತಾನೇ ಅನ್ಯವಾಗುತ್ತಿದ್ದಾನೆ. ಅಲ್ಲದೇ ವ್ಯಕ್ತಿಯ ಕ್ರಿಯಾಶೀಲತೆಯ ನಾಶದೊಂದಿಗೆ ಅರಿವಿನ ಸತ್ವ ಕುಂಠಿತಗೊಳ್ಳುತ್ತಿದೆ.

ಸಾಮಾನ್ಯವಾಗಿ ದಾರ್ಶನಿಕರೆಲ್ಲರೂ ಯೋಗ ಹಾಗೂ ಧ್ಯಾನಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದವರು. ಆತ್ಮಸಿದ್ಧಿಗಾಗಿ ಏಕಾಂತವನ್ನು ಬಯಸಿದವರು. ಸಂಸಾರವನ್ನು ಸುಖವೆಂದು, ಶಾಶ್ವತವೆಂದು ತಿಳಿದಿರಲಿಲ್ಲ. ಅನೇಕರು ಸಂಸಾರವನ್ನು ನಡೆಸಲಾಗದೆ ಬಿಟ್ಟವರೇ ಜಾಸ್ತಿ. 'ಸಂಸಾರ' ಎಂದಾಗ ಅನುಭವದ ನೆಲೆಯಲ್ಲಿ ಅದು ಕುಟುಂಬಕ್ಕೂ ಸೀಮಿತವಾಗಬಹುದು. ಅಥವಾ ಬದುಕಿನ 'ಲೌಕಿಕತೆ' ಎನ್ನುವುದು ಆಗಬಹುದು. ಒಂದರ್ಥದಲ್ಲಿ ಸಂಸಾರದ ವಿಷಮತೆಯನ್ನು ಅದರ ನಿಷ್ಪ್ರಯೋಜನವನ್ನು ಹೇಳಿದರೆ, ಇನ್ನೊಂದರ್ಥದಲ್ಲಿ ಬದುಕಿನ ಕ್ರಿಯಾತ್ಮಕ ಸ್ವರೂಪವನ್ನು, ಅದರ ಅನಿವಾರ್ಯತೆಯನ್ನು ಹೇಳುತ್ತದೆ. ಸಂಸಾರ ಮತ್ತು ಆಧ್ಯಾತ್ಮದ ಸಾಧನೆ ಜ್ಞಾನದ ನೆಲೆಗಳೆಂಬುದನ್ನು ಅರಿಯಬೇಕು. ಆದರೆ ಅದೇ ಅಜ್ಞಾನ ಅಂಧತ್ವಗಳಿಗೆ ಪೂರಕವಾಗಿ ನಿಲ್ಲಬಾರದು.

'ಸಾಕಾಯಿತು ಎವ್ವ ಸಂಸಾರ
ಬೇಕಾಗಿಲ್ಲ ಎವ್ವ ಎನಗ ಪೂರ'[೨೧]

'ಸಾಕವ್ವ ಸಾಕು ಈ ಸಂಸಾರ ಸುಡಲಿ
ಇನ್ಯಾರಿಗಿಬೇಕ'[೨೨]

'ಹೆಂಡತಿ ಮಕ್ಕಳು ಯಾರಣ್ಣ
ಗಂಡಗ ವೈರಿ ನೋಡಣ್ಣ'[೨೩]

'ಸಂಸಾರದ ಗೊಡವಿ ಇನ್ಯಾಕೆ। ಇನ್ಯಾರಿಗೆ ಬೇಕೆ
ಭವಸಾಗರದೊಳು ಮುಳುಗಿ ಮುಳುಗುತಿರೆ'[೨೪]

ತತ್ವಪದಕಾರರ ಈ ಪದಗಳು ಸಂಸಾರದ ಹೇಯತೆಯನ್ನು ಕಟ್ಟಿಕೊಡುತ್ತವೆ. ಅಶಾಶ್ವತವಾದ ಈ ದೇಹವನ್ನು ಇಂದ್ರಿಯ ಸುಖಕ್ಕೆ ಮೀಸಲಾಗಿಡದೆ, ಪರಮಾತ್ಮನನ್ನು ಕಾಣುವ ಆತ್ಮಸಿದ್ಧಿಯ ಕಡೆ ಸಾಗಬೇಕೆಂಬ ವಾಸ್ತವ ಸತ್ಯವನ್ನು ಅರಿತು 'ಬಿಡು ಅವಿಚಾರ, ಮಾಡು ವಿಚಾರ ಸ್ಥಿರವಲ್ಲವೋ ಸಂಸಾರ ಮರಳೇ' ಎಂದು ಹೇಳಿದ್ದಾರೆ. ಇಂತಹ ವಿಚಾರಗಳು ಮನುಷ್ಯ–ಮನುಷ್ಯನನ್ನೇ ವಿಭಾಗ ಮಾಡುವ, ಛಿದ್ರಗೊಳಿಸುವ ಸ್ಥಿತಿಯನ್ನು ಹೇಳುತ್ತವೆ. ತನ್ನ ಇರುವಿಕೆಯೇ ತನಗೆ ಹಗೆಯಾಗುವ, ಪ್ರೀತಿ–ಪ್ರೇಮವಿಲ್ಲದ ಯಾಂತ್ರಿಕ ಸ್ಥಿತಿಯನ್ನು ಹೇಳುವಂತಿದೆ. ಆದರೂ ವಾಸ್ತವದ ಹೊರತಾಗಿ ಏನನ್ನು ಹೇಳುವುದಿಲ್ಲ. ಮೊದಲು ಬದುಕಿನ ಸಮಸ್ಯೆಗಳನ್ನು ಗೋಚರಿಸುವಂತೆ ಮಾಡಿ, ಸಂಸಾರದ

ಹಿನ್ನೆಲೆಯಲ್ಲಿ ಪ್ರಸ್ತಾಪವಾಗುವ ಪಾಪ-ಪುಣ್ಯ, ಕರ್ಮ, ಇಂದ್ರಿಯ ನಿಗ್ರಹಗಳಂತಹ ಹಿಂದೂ ಧಾರ್ಮಿಕ ವ್ಯವಸ್ಥೆಯ ಕರ್ಮಸಿದ್ಧಾಂತಗಳನ್ನು ಇವು ವಿರೋಧಿಸುತ್ತವೆ. ಲೌಕಿಕದಲ್ಲಿದ್ದುಕೊಂಡೇ, ಕ್ರಿಯಾತ್ಮಕವಾಗಿ ಬದುಕುವ ಅಗತ್ಯತೆಯನ್ನು ಹೇಳುತ್ತವೆ. ಆದರೆ ಪಲಾಯನತೆಯನ್ನು ಹೇಳುವುದಿಲ್ಲ. ಬದುಕಬೇಕೆಂಬ ಬಯಕೆಯೇ ಪರಿಪೂರ್ಣ ಸತ್ಯವನ್ನು ಕಂಡುಕೊಳ್ಳುವಿಕೆಗೆ ದಾರಿಯಾನ್ನಾಗಿಸುತ್ತದೆ. ಬದುಕಿನ ಸಮಸ್ಯೆಗಳಿಂದ ಬೆಸತ್ತ ಮನಸ್ಥಿತಿಯನ್ನು ಆಧ್ಯಾತ್ಮದಲ್ಲಿ ತೊಡಗಿಸಿಕೊಳ್ಳುವ ಮೂಲಕ, ತಿಳಿಗೊಳಿಸುವ ಪ್ರಯತ್ನವಿದೆ.

ಸನ್ಯಾಸಿ ಎಂದರೆ ಯಾರು? ಸಕಲವನ್ನು ತೊರೆದವನು ಸನ್ಯಾಸಿಯೇ? ಎಂದು ಪ್ರಶ್ನಿಸುತ್ತಾ ಗುರುವಿನ ಮರ್ಮವನ್ನು ಅರಿತು ಜ್ಞಾನಿಯಾಗುವ ಮಾರ್ಗವೊಂದನ್ನು ರಾಚೋಳದ ಮುರಘೇಂದ್ರಸ್ವಾಮಿ ವಿವರಿಸಿದ್ದಾರೆ.

'ಯಾಕೆ ಸಂಸಾರ ಬಿಡಬೇಕೊ
ವೇಷ ಹಾಕಿ ಸನ್ಯಾಸಿಯಾಗುವುದ್ಯಾಕೋ
ಆಕಾರ ಉಕಾರ ಮಕಾರ ಸಾಕಾರ
ಓಂಕಾರ ಪ್ರಣಮ ಝೇಂಕಾರವ ತಿಳಿದರೆ
ಗುರುವಿನ ಮರ್ಮದ ಗುರುತು ಅರಿತವನಾಗಿ
ಗುರು ಎರಡಕ್ಷರ ಗುರಿ ಕಲಿಯುವನಾಗಿ
ಗುರುವರನ ಸೇವೆಗೆ ಗುಲಾಮನಾಗಿ
ಗುರುವೇ ಹರನೆಂದು ಗುಟ್ಟು ತಿಳಿದಾರೆ
ಮದ ಮತ್ಸರಂಗಳು ಮುರಿದವನಾಗಿ
ಮತ ಭೇದಂಗಳನು ಮರೆತವನಾಗಿ
ಮಂತ್ರ ವಿದ್ಯೆಗೆ ಮರುಗದವನಾಗಿ
ಮಾಯದ ಸೃಷ್ಟಿಯ ಮೂಲವ ತಿಳಿದಾರೆ'[೨೫]

ಗುರು-ಶಿಷ್ಯ ಸಂಬಂಧ ಲೌಕಿಕವನ್ನು ಮೀರಿದ ವ್ಯಕ್ತಿಯೊಬ್ಬನ ಅರಿವಿನ ಸಾಧನೆ. ಗುರು ಲೌಕಿಕತೆಯನ್ನು ಮೀರಿದವನು. ಸಾಧನೆ ಮಾಡಬೇಕಾದ ಶಿಷ್ಯ, ಗುರುವಿಗೆ ತನ್ನನ್ನು ಒಪ್ಪಿಸಿಕೊಳ್ಳುವುದರ ಮೂಲಕ ಅಧೀನನಾಗಿ ಉಳಿಯತ್ತಾನೆ. ಅಂತಿಮದಲ್ಲಿ ತನ್ನಲ್ಲಿರುವ ವ್ಯಸನಗಳನ್ನೆಲ್ಲಾ ಅಳಿದು, ಅರಿವಿನ ಪರಾಕಾಷ್ಠೆಯನ್ನು ತಲುಪುತ್ತಾನೆ. ತಿಂಥಿಣಿ ಮೌನೇಶ್ವರರು ಗುರುವಿನ ಔಚಿತ್ಯ ಕುರಿತು ಹೇಳುತ್ತಾರೆ. 'ಆರು ಶಾಸ್ತ್ರಕ್ಕೆ, ಐನೂರು ಶಾಸ್ತ್ರಕ್ಕೆ, ಮೀರಿದ ಶಾಸ್ತ್ರಕ್ಕೆ ಮಿಗಿಲು ಗುರು' ಎಂದು 'ಗುರುಗಳು ಎಂಬ ಗರ್ವ ನಿಮಗ್ಯಾತಕೆ' ಎಂದು ಗುರುವಿಗೆ ಇರಬೇಕಾದ ಮಿತಿಗಳನ್ನು ಹೇಳುತ್ತಾನೆ. ಎಲ್ಲವೂ ಗುರುವಿಗರ್ಪಿತವಾಗುವುದರಿಂದ ಗುರುವಿಗೆ ಎಲ್ಲವೂ ತಾನು, ತನ್ನಿಂದ ಎಂಬ ಅಹಂಕಾರ ಬರುತ್ತದೆ. ಅದಕ್ಕಾಗಿ ತಾನು ತನ್ನನ್ನು ಕಂಡುಕೊಳ್ಳುವ ಮೂಲಕ, ತನ್ನ ಅರಿವಿಗೆ ಬಾರದ್ದನ್ನು, ತನ್ನ

ತಿಳಿವಳಿಕೆಗೆ ನಿಲುಕದ್ದನ್ನು, ಗುರುವಿನಿಂದ ಅರಿಯಲು ಪ್ರಯತ್ನಿಸಬೇಕು. ನಮಗೆ ತಿಳಿಯದಿದ್ದುದ್ದನ್ನು ಗುರು ತಿಳಿಸಿಕೊಡಬೇಕೆ ವಿನಃ ನಮ್ಮನ್ನಾಳುವಂತಿರಬಾರದು. 'ಗುರು' ಮಾರ್ಗದರ್ಶಿಯಾಗಿರಬೇಕೆ ಹೊರತು' ನಿಯಂತ್ರಿಸುವಂತಿರಬಾರದು ಎಂಬ ನಿಲುವಿಲ್ಲಿದೆ.

ಈ ಪರಂಪರೆಯಲ್ಲಿ ಭಕ್ತಿ ಮತ್ತು ವಿರಕ್ತಿಯ ಮಾರ್ಗಗಳನ್ನು ತನ್ನ ಮುಖ್ಯ ಗ್ರಹಿಕೆಗಳೆಂದು ಒಪ್ಪಿದೆ. ಇಂದ್ರಿಯಾನುಭವಗಳ ಎಲ್ಲಾ ಮೂಲಗಳನ್ನು, ಅನುಭವಗಳ ಮೂಲಕ ಅನ್ವೇಷಿಸುವ ಪ್ರವೃತ್ತಿ ಒಂದು ವಲಯವನ್ನು ಆವರಿಸಿದೆ. ಇಂದ್ರಿಯಾನುಭವವನ್ನು ವಿವೇಚನೆಯೊಂದಿಗೆ ಸಂಯೋಗಗೊಳಿಸುವ ಕ್ರಿಯೆಯನ್ನು ಪ್ರಧಾನವಾದ ನೆಲೆಯನ್ನಾಗಿ ಸ್ವೀಕರಿಸುವ ಮಾರ್ಗಕ್ಕೆ ಮತ್ತೊಂದು ನೆಲೆ ಉದಾಹರಣೆಯಾಗುತ್ತದೆ. 'ವಿರಕ್ತಿ' ತಾತ್ಕಾಲಿನ ಬದುಕಿನ ಬರ್ಬರತೆ ಮತ್ತು ಅಸಹನೀಯ ಸ್ಥಿತಿಗಳ ಹಿನ್ನೆಲೆಯಲ್ಲಿಯೇ ವಿಶ್ಲೇಷಣೆಗೆ ಒಳಗೊಳ್ಳುತ್ತದೆ. ವಚನಕಾರರು, ಹರಿದಾಸರು ಸಂಸಾರ ಹೇಯದ ಸಂದರ್ಭವನ್ನು ನಿರ್ವಚಿಸಿಕೊಳ್ಳುವ ಕ್ರಮದ ಜೊತೆಗೆ ಆ ಕಾಲದ ಅನುಭಾವಿ ಅಭಿವ್ಯಕ್ತಿಯನ್ನು ಪರಿಶೀಲಿಸಬೇಕಾಗಿದೆ.

ಬದುಕಿನಿಂದ ವಿಮುಖವಾಗುವ ದೃಷ್ಟಿ ಇಲ್ಲಿ ಮುಖ್ಯವಲ್ಲ. ಅಮೂರ್ತವಾದ ಆದ್ಯಂತಿಕ(ಕೊನೆ, ಅಂತಿಮ) ನೆಲೆಯನ್ನು ಪಲಾಯನದಿಂದ ಹೋಗಿ, ತಲುಪಬೇಕೆಂಬ ಉದ್ದೇಶವೂ ಇವರಲ್ಲಿಲ್ಲ. ಈ ನಿರಾಕರಣೆ ಅವರ ಆಂತರಿಕ ಮತ್ತು ಬಾಹ್ಯ ಜಗತ್ತಿನ ಘರ್ಷಣೆಯಿಂದ ಸೃಷ್ಟಿಯಾದದ್ದು. ಸಂಸಾರವು 'ಹೇಸಿ ಕನಸಿನ ತೆನೆ' ಎಂದು ಶಿಶುನಾಳ ಶರೀಫ ಹೇಳುತ್ತಾನೆ. ಗಂಡು-ಹೆಣ್ಣುಗಳ ಸಂಬಂಧ, ಬಡತನ, ಅವಿದ್ಯೆ, ಅಂಧತ್ವ ಇವುಗಳಿಂದ ಮಾನವಿಕವಾದ ಎಲ್ಲಾ ಸಾಧ್ಯತೆಗಳನ್ನು ಮುರಿಯುವುದರಿಂದ, ಬದುಕಿನ ನಿಜ(ವಾಸ್ತವ)ಗಳತ್ತ ಚಲಿಸಲು ಅಡ್ಡಿಯಾಗಿದೆ. ಸಂಸಾರವನ್ನು ಹೇಯಗೊಳಿಸಿರುವ ಬಂಧನಗಳನ್ನು ಕಳೆಯಲು ನಡೆಸುವ ತಳಮಳ, ಹೋರಾಟಗಳು ಕೇವಲ ಒಬ್ಬನ ತಳಮಳವಷ್ಟೇ ಆಗದೆ, ಇಡೀ ಸಮುದಾಯದ ಧ್ವನಿಯಾಗಿದೆ.

'ಸ್ನೇಹ ಮಾಡಬೇಕಿಂಥವಳ
ಒಳ್ಳೇ ಮೋಹದಿಂದ ಕೂಡುವಂಥವಳ
ಚಂದ್ರಗಾವಿಯ ಶೀರಿನುಟ್ಟು-ದಿವ್ಯ
ಕೆಂದಾವರಿ ಮಗ್ಗಿ ಕುಪ್ಪಸ ತೊಟ್ಟು
ಬಂದಳು ಮಂದಿರ ಬಿಟ್ಟು ನಾಲ್ಕು
ಮಂದಿಯೊಳು ಬಂದು ನಾಚುವಳೆಷ್ಟು
ಅರಿಗಿಳಿ ಸಮ ಇವಳ ನುಡಿಯು ಚೆಲ್ವ
ಸುಳಿನಾಭಿ ಕುಚ ಕುಂಬಗಳ ಹಂಸ ನಡೆಯು
ಥಳಥಳಿಸು ತೋಳ್ತೊಡೆಯು-ಒಳ್ಳೇ
ಬಳು ಬಳುಕುವ ನಡುವ ತಳಿರಡಿಯು
ಮುಕ್ತಕಾಯಿನಿ ಎನ್ನ ಕಾಡಿ-ಮೋಹ

ಮತ್ತ ಸುರತ ಸುಖ ಸುಡುವಂತೆ ಕೋಡಿ
ಹುಟ್ಟನ್ನೇ ಕಳೆದಳಲೊ ಖೋಡಿ- ದೇವ
ಶಿಶುನಾಳಧೀಶನ ಪಾದಕೆ ದೂಡಿ'[೨೬]

ಈ ರಚನೆಯಲ್ಲಿ ಗಾಢವಾದ ಆತ್ಮೀಯತೆ ಇದೆ. ಬದುಕನ್ನು ಮುಕ್ತ ಮನಸ್ಸಿನಿಂದ ಗ್ರಹಿಸುವ ಪ್ರವೃತ್ತಿ ಎದ್ದು ಕಾಣುತ್ತದೆ. ಇಲ್ಲಿ ಬದುಕಿನ ಚೆಲುವು ಮತ್ತು ಅದರ ಗಾಢತೆಯನ್ನು ಬದುಕಿನ ವಸ್ತು ಪ್ರಪಂಚದ ಪ್ರತಿಮೆಗಳಿಂದ ಮಂಡಿಸುವ ರೀತಿ, ಬದುಕಿನ ದೃಢವಾಸ್ತವಗಳನ್ನು ಪ್ರಕಟಿಸುತ್ತದೆ.

'ಎಲ್ಲರಂಥವನಲ್ಲ ನನಗಂಡಾ
ಬಲ್ಲಿದನು ಪುಂಡಾ
ಎಲ್ಲರಂಥವನಲ್ಲ
ಅಕ್ಕತಂಗಿಯರಾರು ಮಂದಿಗಳಾ
ಅಗಲಿಸಿದನ್ಯೆವರು
ಕಕ್ಕುಲಾತಿಯ ಅಣ್ಣತಮ್ಮಗಳಾ
ನೆದರೆತ್ತಿ ಮ್ಯಾಲಕೆ ನೋಡಗೊಡದೆ'[೨೭]

ಶರೀಫರ ಈ ರಚನೆ ಲೈಂಗಿಕ ಪ್ರತೀಕಗಳನ್ನು ಮತ್ತು ಅದರ ಎಲ್ಲಾ ಸಾಧ್ಯತೆಗಳೊಂದಿಗೆ ಗ್ರಹಿಸುವ ರೀತಿ ಗಮನಾರ್ಹವಾಗಿದೆ. ಇವುಗಳು ಲೋಕಾನುಭವವನ್ನು ಮತ್ತು ವೈಯಕ್ತಿಕ ಅನುಭವಗಳನ್ನು ಸ್ವವಿಮರ್ಶೆಯ ಮಾಧ್ಯಮವನ್ನಾಗಿ ಮಾಡಿಕೊಳ್ಳುವ ರೀತಿ ವಿಶಿಷ್ಟವಾಗಿದೆ.

'ಹಾದರ ಮಾಡಿದೆನೆ ಹಗಲಿರುಳೆನ್ನದೆ
ಸಾಧು ಸತ್ಪುರುಷರ ಸದರಿನೊಳಗೆ'[೨೮]

'ನನ್ನೊಳಗೆ ನಾ ತಿಳಗೊಂಡೆ ನನಗೆ
ಬೇಕಾದ ಗಂಡನ್ನ ಮಾಡಿಕೊಂಡೆ
ಆಜ್ಞಾ ಪ್ರಕಾರ ನಡಕೊಂಡೆ ನಾ
ಎಲ್ಲಾರ ಹಂಗನ್ನ ಹರಕೊಂಡೆ'[೨೯]

ಈ ತತ್ವಪದಗಳು ಮನುಷ್ಯ ಮತ್ತು ನಿಸರ್ಗದಲ್ಲಿನ ಅಸಂಬದ್ಧತೆಯನ್ನು ಹೊಂದಿಸುವ ಪ್ರಯತ್ನದಲ್ಲಿವೆ. ಇವು ನಿಸರ್ಗ ಮತ್ತು ಮನುಷ್ಯನ ಗಾಢ ಸಂಬಂಧದಿಂದ ಹುಟ್ಟಿವೆ. ಮನುಷ್ಯನ ಪ್ರವೃತಿಗಳ ಮೂಲಕ ನೈತಿಕ ನಿರ್ಣಯಗಳನ್ನು ಹೇಳುವಾಗ ಈ ಹಾಡುಗಳು ಗೊಂದಲವನ್ನುಂಟು ಮಾಡುತ್ತವೆ. 'ಹಾದರ' ಮಾಡುವುದು ನೈತಿಕ ದೃಷ್ಟಿಯಿಂದ ಕೆಟ್ಟದೆನಿಸಿದರೂ, ಅದು ಗುರುವಿನೊಂದಿಗಿನ ಸಲಿಗೆಯಾಗಿದೆ. ಇಲ್ಲಿ ಗುರು ಗಂಡನಾಗಿ, ಶರಣರ ಸತಿ-ಪತಿ ಭಾವದಂತಿದೆ. ಗುರುವಿನ ಆಯ್ಕೆಯ ಪ್ರಕ್ರಿಯೆಯಲ್ಲಿ ತನಗೆ ಬೇಕಾದ ಗಂಡ(ಗುರು)ನನ್ನು ಪಡೆದುಕೊಳ್ಳುವ ಸ್ವಅನುಭವದ ತಿಳುವಳಿಕೆ ಇಲ್ಲಿ ಮುಖ್ಯವಾಗುತ್ತದೆ. ಅಲ್ಲದೆ 'ಈ ಭವಕೆ ಬಾರದಂತೆ ಮಾಡಿಕೊಂಡೆ' ಎನ್ನುವಲ್ಲಿ ಸಂಸಾರದಿಂದ

ಜಾರಿಗೊಳ್ಳದೆ, ಅದರಿಂದ ಬಿಡುಗಡೆಗೊಳ್ಳುವ ಮಾರ್ಗವನ್ನು ಕಂಡುಕೊಂಡೆ ಎನ್ನುತ್ತಾರೆ. ಸಾಮಾನ್ಯರಲ್ಲಿ ಸಾಮಾನ್ಯರಾಗಿದ್ದು, ಅವರಿಗಿಂತ ಭಿನ್ನ ಮನಸ್ಥಿತಿಯನ್ನು ಸಂಪಾದಿಸುವುದೇ ತತ್ವಪದಕಾರರ ಗುರಿ. ಲೌಕಿಕದ ಸಂಗತಿಗಳನ್ನು ಅಲೌಕಿಕವಾಗಿ ಪರಿವರ್ತಿಸುವ, ಪರಿವರ್ತಿಸಿ ಭಿನ್ನವಾದ ತಿಳುವಳಿಕೆಯನ್ನು ಪಡೆಯುವುದು ತತ್ವಪದಗಳಲ್ಲಿ ಕಾಣುತ್ತದೆ.

'ಹೌದಪ್ಪ ಹೌದು ನೀ ದೇವರು ನಿನ್ನ
ನೀ ತಿಳಿದರೆ ಇಲ್ಲಪ್ಪ ದೂರು
ತಂಬಾಕಿಲ್ಲದ ಬತ್ತಿ ಸೇದಿರಬೇಕು
ಏನೂ ಕುಡಿಯದೆ ನಿಃಶ್ವಾಸ ಆಗಿರಬೇಕು
ಕೊಬ್ಬಿನ ನಾಲಿಗೆ ಮಾತು ಅಡಗಿರಬೇಕು
ಒಳ್ಳೆ ಜೋರಾಗಿ ಗುರುಸೇವೆ ಮಾಡಿರಬೇಕು
ಆಗ
ಹೌದಪ್ಪ ಹೌದು ನೀ ದೇವರು ನಿನ್ನ
ನೀ ತಿಳಿದರೆ ಇಲ್ಲಪ್ಪ ದೂರು'[೩೦]

ಕಡಕೋಳ ಮಡಿವಾಳಪ್ಪನ ಈ ಪದ ಸಾಮಾಜಿಕ ನೆಲೆಯ 'ಗಾಂಜಾ ಸೇವನೆ'ಯನ್ನು ಆಧ್ಯಾತ್ಮದ ನೆಲೆಗೆ ಒಯ್ದು ಭಿನ್ನವಾದ ಅರ್ಥವನ್ನು ಕಲ್ಪಿಸಿದ್ದಾರೆ. ಸಾಧಕನಿಗೆ ಗುರುವೇ ಲೌಕಿಕ ವ್ಯಾಮೋಹವನ್ನು ಮರೆಯಲು ಗಾಂಜಾ ಸೇವನೆಗೆ ಅವಕಾಶ ನೀಡುತ್ತಾನೆ. ತತ್ವಪದಕಾರರಲ್ಲಿ ಲೌಕಿಕದ 'ಹಾದರ'ವು ಅನುಭಾವಿಕ ನೆಲೆಯಲ್ಲಿ ವಿಶೇಷ ಅರ್ಥವನ್ನು ಪಡೆದಿರುವಂತೆ, 'ಗಾಂಜಾ ಸೇವನೆ'ಯೂ ವಿಶೇಷ ಅರ್ಥವನ್ನು ಪಡೆದಿದೆ. ಇದು ವ್ಯಕ್ತಿಯ ಸಾಧನೆಯಿಂದ ಪಕ್ವಗೊಂಡು ವ್ಯಕ್ತವಾಗಿರುತ್ತದೆ. ವ್ಯಕ್ತಿಯ ಮನಸ್ಸು ಆಧ್ಯಾತ್ಮದ ಕಡೆಗೆ ವಾಲಿದಂತೆ ನಡವಳಿಕೆ, ಆಲೋಚನೆಗಳು ಭಿನ್ನವಾಗುತ್ತವೆ. ಆಗ ಅವನು ಲೌಕಿಕರಿಗಿಂತ ಭಿನ್ನವಾಗುತ್ತಾನೆ. ಅವನ ಮಾತಿಗೂ, ಅಲೌಕಿಕ ಶಕ್ತಿ ಬರುತ್ತದೆ. ಅನುಭಾವದಿಂದಲೇ ಲೋಕವನ್ನು ಅರಿಯುವ ಸ್ಥಿತಿಗೆ ತಲುಪುತ್ತಾನೆ.

ಈ ಲೋಕದ ಜಂಜಾಟಗಳಿಂದ ಮುಕ್ತಿ ಹೊಂದುವ ಬಗೆಯನ್ನು ಈ ಕೆಳಗಿನ ತತ್ವಪದದಲ್ಲಿ ವಿಶಿಷ್ಟವಾಗಿ ನಿರೂಪಿಸಲಾಗಿದೆ. ಅಂತರಂಗ ಪರಿಶುದ್ಧವಾಗಿ, ತತ್ವ ಬಲ್ಲ ಮಹಾಜ್ಞಾನಿಯ ಬೆನ್ನತ್ತಿ ನಡೆಯಬೇಕು ಎಂದು ಕರೆಕೊಡುತ್ತಾನೆ.

'ಮೂಕನಾಗಬೇಕೊ ಈ ಜಗದೊಳು ಜ್ವಾಕ್ಯಾಗಿರಬೇಕು
ಕಾಕಬುದ್ಧಿ ಕಡಿಗಿ ಹಾಯಿಸಲಾರದ
ಲೋಕದ ಗೊಡವಿ ನಿಗ್ಯಾತಕ ಬೇಕು
ಮಾತು ಕಲಿಯಬೇಕು
ಮಾತಿನ ನೀತಿ ತಿಳಿಯಬೇಕು
ಮಾತು ಬಲ್ಲ ಮಹಾಜ್ಞಾನಿಯ ಕೂಡ

ಕೋತಿ ಹಂಗ ಬೆನ್ನು ಹತ್ತಿರಬೇಕು
ತತ್ವ ಕಲಿಯಬೇಕು
ತತ್ವದ ಅರ್ಥ ತಿಳಿಯಬೇಕು
ಮಾತು ಬಲ್ಲ ಮಹಾಜ್ಞಾನಿಯ ಕೂಡ
ಕತ್ತಿ ಹಾಂಗ ಬೆನ್ನ ಹತ್ತಿರಬೇಕು
ಆಸಿ ಅಳಿಯ ಬೇಕು ಮನಸಿನ
ಹೇಸಿಗೆ ತೊಳಿಯಬೇಕು
ಆಸಿ ತಿಳಿದು ಹೇಸಿಗೆ ತೊಳೆದು
ಈಶ ಮಹಾಂತನ ಪಾದ ಹಿಡಿಯಬೇಕು'[೩೧]

'ಮಹಾಂತ' ಗುರು ಸ್ವರೂಪ. ಗುರು ತೋರಿದ ದಾರಿಯಲ್ಲಿ ನಡೆದು ತನ್ನಲ್ಲಿ ಅಂತರ್ಗತವಾಗಿರುವ 'ತಿಳಿ'ವನ್ನು ಕಾರ್ಯಗತ ಮಾಡಿಕೊಳ್ಳಬೇಕು. ಮಾತು, ನೀತಿ, ತತ್ವದ ಅರ್ಥ ಕಲಿಯಲು ಅವುಗಳ ಒಳಾರ್ಥವನ್ನು ಅರಿಯಬೇಕು. ಮಾತು, ನಡೆ ಶುದ್ಧವಾಗಿರಬೇಕು. ಅದಕ್ಕೆ ಶರಣರು ಮಾತನ್ನು 'ಜ್ಯೋತಿರ್ಲಿಂಗ'ವಾಗಿಸಿದ್ದಾರೆ. ಶಿಷ್ಯನ ಸರ್ವ ಪ್ರಪಂಚವನ್ನು ನಿವೃತ್ತಿ ಮಾಡಿ, ಅವನನ್ನು ಅರಿವಿನ ಹಾದಿಗೆ ಮುಟ್ಟಿಸುವವನು ಜ್ಞಾನಗುರು. ಅಂತಹ ಜ್ಞಾನಿಯ ಸಂಗ ಮಾಡಬೇಕು. ಜ್ಞಾನಿಯ ಸಂಗದಿಂದ ಜ್ಞಾನದ ಮಾರ್ಗ ತಿಳಿಯುತ್ತದೆ. ಮಾತು ಕಲಿಯಲು ಮಾತಿನ ನೀತಿ ತಿಳಿಯಲು, ಮಾತುಬಲ್ಲ ಮಹಾಜ್ಞಾನಿಯೊಂದಿಗೆ ಕೋತಿ, ಕತ್ತೆ ಹಾಗೆ ಬೆನ್ನತ್ತಿ ಸಂವಾದಕ್ಕೆ ಇಳಿದಾಗ ಮಾತ್ರ ಮಾತಿನ ಅರ್ಥ, ತತ್ವಗಳ ಅರ್ಥ ತಿಳಿಯುತ್ತದೆ. 'ಕೊರೆದಷ್ಟು ಗಂಧದ ಪರಿಮಳ ಹೆಚ್ಚು' ಎಂಬ ಮಾತಿನ ನಿಲುವು ಈ ಪದದ ಆಶಯವಾಗಿದೆ.

'ಬಿಡು ಬಿಡಿದ್ಯಾತರ ಜ್ಞಾನ
ನಿನ್ನ ನಡೆ ನುಡಿಯೊಂದಾಗದಿಹುದೆ ಅಜ್ಞಾನ'[೩೨]

ಜ್ಞಾನದ ಅರ್ಥ ಇಲ್ಲಿ ನಮ್ಮ ಮಾತು ಮತ್ತು ನಡವಳಿಕೆಯಲ್ಲಿನ ಹೊಂದಾಣಿಕೆಯೇ ಆಗಿದೆ. ನಡೆ ಮತ್ತು ನುಡಿಗಳಲ್ಲಿ ವ್ಯತ್ಯಾಸವಾದಾಗ ನಾವು ಆತ್ಮವಂಚಕರಾಗುತ್ತೇವೆ. ಮೊದಲು ತಮ್ಮನ್ನು ತಾವು ತಿದ್ದಿಕೊಳ್ಳಬೇಕು. ನಡೆದಂತೆ ನುಡಿದು, ನುಡಿದಂತೆ ನಡೆದು ತೋರಿಸಬೇಕು. ನಿಗರ್ವಿಯಾದ ಸಾಧಕ ನಡೆ ಮತ್ತು ನುಡಿಯಲ್ಲಿ ಒಂದಾಗಿ ಸಾಗಿದಾಗ ವ್ಯಕ್ತಿತ್ವ ವಿಕಸನಗೊಳ್ಳುತ್ತದೆ. ಅಂದಲ್ಲಿ ಮಾತ್ರ ಸಂದರ್ಭಾನುಸಾರಕ್ಕೆ ತಕ್ಕಂತೆ ನೋಡಿ, ತೂಗಿ ಮಾತನಾಡುವ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಇದು ಪರಿಪೂರ್ಣ ಜ್ಞಾನಿಯ ಲಕ್ಷಣವೂ ಹೌದು.

ತತ್ವಪದಕಾರರ ಧ್ಯೇಯೋದ್ದೇಶಗಳು, ಅವರ ವ್ಯಕ್ತಿತ್ವ, ಅವರ ಪರಂಪರೆಯನ್ನು ಗಮನಿಸಿದರೆ, ಕೇವಲ ಧಾರ್ಮಿಕ ಮನೋಭಾವದ ಏಕಮುಖ ವ್ಯಕ್ತಿತ್ವದವರಾಗಿ ಕಾಣುವುದಿಲ್ಲ. ಹಿಂದೂ, ಮುಸ್ಲಿಂ, ಕ್ರೈಸ್ತ ಎನ್ನುವಂತಹ ಧರ್ಮದ ಮಡಿವಂತಿಕೆಯನ್ನು ಮೀರಿದ್ದಾರೆ.

'ಅಜ್ಞಾನವೆಂಬುದು ಅಮವಾಸಿ
ಸುಜ್ಞಾನ ಚಂದ್ರನು ಉದಸಿ
ರಾಮ ರಹೀಮರು ಒಂದೇಯೆನಿಸಿ
ಪರಬ್ರಹ್ಮದೊಸ್ತರು ಹೌದೆನಿಸಿ'[೩೩]

ಚೆನ್ನೂರು ಜಲಾಲಸಾಹೇಬರ ಈ ಪದದಲ್ಲಿ 'ಅಜ್ಞಾನ' 'ಅಮವಾಸಿ' ಅಂಧಕಾರವನ್ನು ಸೂಚಿಸುತ್ತದೆ. 'ಸುಜ್ಞಾನ ಚಂದ್ರ' ಬೆಳಕಿನ ಸಂಕೇತ. ಅಂದರೆ 'ಅರಿವಿನ' 'ತಿಳಿವಿನ' ರೂಪ. ಜ್ಞಾನಿಯಾದವನು ಲೌಕಿಕ ಗುಣದೋಷಗಳನ್ನು ಮೀರಿ ಬೆಳೆಯುವಂತೆ, ಹಿಂದೂ, ಮುಸ್ಲಿಂ, ಕ್ರೈಸ್ತ ಎಂಬ ಮತೀಯವಾದವನ್ನು ಕಳೆದು, ಮಾನವರೆಲ್ಲರೂ ಒಂದೇ ಎನ್ನುವ ಸಹಕಾರ, ಸಹಬಾಳ್ವೆಯ ಜೀವನವನ್ನು ರೂಢಿಸಿಕೊಳ್ಳಬೇಕೆಂಬುದನ್ನು ಸೂಚಿಸುತ್ತದೆ. 'ದೇವರು' ಎನ್ನುವುದು ಒಂದು ಅನುಭವ. ಅಂಥಹ ಅನುಭವವನ್ನು ವೈಯಕ್ತಿಕವಾಗಿ ಎಲ್ಲಾ ಧರ್ಮದ ಜನರು ಸಾಧಿಸಿಕೊಂಡಿರುತ್ತಾರೆ. ಆದ್ದರಿಂದಲೇ ಹಿಂದೂ ಸಂಸ್ಕೃತಿಯಲ್ಲಿ ಹಲವಾರು ಧರ್ಮಗಳ ಕೊಡು-ಕೊಳ್ಳುವಿಕೆ ಸಂಬಂಧಗಳು, ಆಚಾರ-ವಿಚಾರಗಳು ಸಮ್ಮಿಳಿತಗೊಂಡಿವೆ. ಇದಕ್ಕೆ 'ಮೊಹರಂ' ಆಚರಣೆ ಒಂದು ಉದಾಹರಣೆ. ರಾಮ, ರಹೀಮ, ಅಲ್ಲಾ ಎಲ್ಲರೂ ಪರಬ್ರಹ್ಮನ ದೋಸ್ತ(ಗೆಳೆಯ)ರು ಆಗಿರುವಾಗ ಅವರನ್ನು ಪೂಜಿಸುವ ಭಕ್ತರಲ್ಲಿ ತರತಮ ಭಾವವಿರುವುದು ಅಸಹನೀಯ. ಇಂತಹ ಭೇದ ಕಲ್ಪನೆಯಿಂದ ಹೊರಬಂದು, ಎಲ್ಲರೂ ಒಂದೇ ಎನ್ನುವ 'ಸಮತಾ' ತತ್ವದಲ್ಲಿ ಒಂದಾಗಬೇಕೆಂದಿದ್ದಾರೆ.

ತತ್ವಪದಕಾರರು ಮನುಷ್ಯನ ಆಡಂಬರ, ವೈಭವೀಕೃತ ಜೀವನ ಸ್ವರೂಪಕ್ಕಿಂತ, ಸಹಜ ಹಾಗೂ ಗುಣಾತ್ಮಕ ವಿಕಾಸಕ್ಕೆ ಹೆಚ್ಚು ಒತ್ತು ಕೊಟ್ಟಿದ್ದಾರೆ.

'ಧನವಗಳಿಸಬೇಕೆಂಥಾದ್ದು
ಈ ಜನರಿಗೆ ಕಾಣಿಸದಂಥಾದ್ದು
ಕೊಟ್ಟರೆ ಹೋಗದಂಥಾದ್ದು ಅದು
ಇಟ್ಟರೆ ತೀರದಂಥಾದ್ದು
ಕಟ್ಟಿದ ಗಂಟು ಬಯಲೊಳಗಿಟ್ಟರೆ
ಮುಟ್ಟಲು ಬಾರದಂಥಾದ್ದು'[೩೪]

ಎನ್ನುವಲ್ಲಿ ಕಡಕೋಳ ಮಡಿವಾಳಪ್ಪ ಅರ್ಥಪೂರ್ಣ ವ್ಯಾಖ್ಯಾನ ಮಾಡುತ್ತಾರೆ. ವಸ್ತುರೂಪದ ಜ್ಞಾನಕ್ಕಿಂತ, ಆತ್ಮ ಸಾಕ್ಷಾತ್ಕಾರ, ನಿಜ ವಸ್ತುರೂಪಿ ಜ್ಞಾನದ ಮಹತ್ವವನ್ನು ಹೇಳುತ್ತಾನೆ. ಜ್ಞಾನವು ಬಳಸಿದಷ್ಟು ವೃದ್ಧಿಯಾಗುವಂಥದ್ದೇ ಹೊರತು, ಮುಗಿದು ಹೋಗುವಂತದ್ದಲ್ಲ. ಹೀಗಾಗಿ ಜ್ಞಾನದ ಅಸ್ತಿತ್ವವೆಂಬುದು ಶಾಶ್ವತವಾಗಿ ನಿಲ್ಲುವಂತದ್ದಾಗಿದೆ. ಅಂಥ ಜ್ಞಾನವೂ ವಿದ್ಯೆ, ಗುಣ, ಧರ್ಮ, ಆಚಾರ, ವಿಚಾರಗಳ ಸಾಧನೆಯಿಂದ ಬರುತ್ತದೆ. ಇದನ್ನು ಅಪ್ಪಿಕೊಂಡವರಿಗೆ ಕೈ ಬಿಡದೆ, ಆಧ್ಯಾತ್ಮದ ಹಾದಿ ತೋರುತ್ತದೆ.

'ಕೋಡಗನ ಕೋಳಿ ನುಂಗಿತ್ತ
ನೋಡವ್ವ ತಂಗಿ ಕೋಡಗನ ಕೋಳಿ ನುಂಗಿತ್ತ ॥ಪ॥
ಆಡು ಆನೆಯ ನುಂಗಿ
ಗೋಡೆ ಸುಣ್ಣವ ನುಂಗಿ
ಆಡಲು ಬಂದ ಪಾತರದವಳ ಮದ್ದಳೆ ನುಂಗಿತ ॥೧॥
ಒಳ್ಳು ಒನಕೆಯ ನುಂಗಿ
ಬೀಸಕಲ್ಲು ಗೂಟವ ನುಂಗಿ
ಕುಟ್ಟಲು ಬಂದ ಮುದಕಿಯ ನೊಣವು ನುಂಗಿತ ॥೨॥
ಗುಡ್ಡ ಗವ್ಹರ ನುಂಗಿ
ಗವ್ಹರ ಇರುವೆ ನುಂಗಿ
ಗುರುಗೋವಿಂದನ ಪಾದ ಆತ್ಮ ನುಂಗಿತ'[೩೫]

ಈ ಹಾಡು ಗಾತ್ರದಲ್ಲಿ ಹಿರಿದಾದುದು, ಕಿರಿದಾದುದನ್ನು ನುಂಗಿ ಹಾಕುವ ಕ್ರಿಯೆಯನ್ನು ವಿವರಿಸಿದೆ. ಹಾಗೂ ಕೆಟ್ಟದ್ದನ್ನು ಒಳ್ಳೆಯದು ನುಂಗಿ, ಅವುಗಳನ್ನು ಇಲ್ಲವಾಗಿಸುತ್ತದೆ. ಇಲ್ಲಿ ಗುಡ್ಡ, ದೇಹಗಳು, ದೇಹ ಗುಣಗಳಿಗೂ ಹಾಗೂ ಗಂವ್ಹರ ಅಂತಃಶಕ್ತಿಗಳಿಗೆ ಸಂಕೇತವಾಗಿದೆ. ಅಂತಃಶಕ್ತಿಗಳು, ದೇಹಗುಣಗಳನ್ನು ನುಂಗಿ ಇಲ್ಲದಂತೆ ಮಾಡಿದೆ. ಈ ಅಂತಃಶಕ್ತಿಯನ್ನು ನುಂಗಿ ನೀರು ಕುಡಿಯುವ ಮೂಲಕ ಎಲ್ಲವನ್ನೂ ಜ್ಞಾನಮಯವಾಗಿ ಮಾಡಿಬಿಡುತ್ತದೆ. 'ಗುರು ಗೋವಿಂದನ ಪಾದ ಆತ್ಮ ನುಂಗಿತ' ಎನ್ನುವ ಕೊನೆಯ ಸಾಲು ಗುರುಗಳ ಪಾದ ಆತ್ಮವನ್ನು ತನ್ನೊಳಗೆ ಲೀನಗೊಳಿಸಿಕೊಂಡು, ಕೈವಲ್ಯವನ್ನು ಪಡೆಯುವ ಅರ್ಥವನ್ನು ಸೂಚಿಸುತ್ತದೆ. ಗುರುಬೋಧೆಯಿಂದಾಗಿ ಅಂತರಂಗ ಶುದ್ಧಿ ಹಾಗೂ ಸಿದ್ಧಿಯಾದುದನ್ನು ಹಾಗೂ ಆ ಮೂಲಕ ಆತ್ಮ-ಪರಮಾತ್ಮರ ಸಮ್ಮಿಲನವಾದುದನ್ನು ಶರೀಫರು, ಜೀವಕ್ಕೆ ಅರುಹುವ ಮೂಲಕ ಸ್ವಯಂ ನಿದರ್ಶನವಾಗಿ ನಿಲ್ಲುತ್ತಾನೆ.

'ಬರಕೋ ಪದಾ ಬರಕೋ
ಇದರನ್ವಯ ತಿಳಕೋ
ಸದಮಲ ಜ್ಞಾನದ ಕುದಿ ಉಕ್ಕಿ ಬರುವಾಗ
ನೆದರಿಟ್ಟು ನಿನ್ನೊಳು ಪದಾ ಬರಕೋ'[೩೬]

ಎನ್ನುವ ಕವಿತೆ ಒಳಗಿನ ಕುದಿಯನ್ನು ಸೂಚಿಸುತ್ತದೆ. ಅರಿವನ್ನು ತೆರೆದು ತೋರಿಸುವ ಈ ಪದವನ್ನು ಅರಿವಿನ ಸಾಕಾರ ರೂಪವಾದ ಶಿಶುನಾಳಧೀಶನೇ ನಮ್ಮ ಎದೆಯಲ್ಲಿ ಬಿತ್ತಿದ್ದಾನೆ. ಒಳಗೆ ಸಂಘರ್ಷವೇ ಇಲ್ಲವಾದಾಗ ಅಲ್ಲಿ ಕುದಿಯಾಗಲೀ, ಕಿಡಿಯಾಗಲೀ ಇರುವುದು ಅಸಾಧ್ಯ. ಒಳಗಿನ ಹುಡುಕುವಿಕೆ, ಅರಿಯುವ ತಲ್ಲಣಗಳು ಒಳಗೊಳಗೇ ಕುದಿದು, ಜ್ಞಾನದ ಪಾಕವಾಗಿ ಬರುತ್ತದೆ. ಆಗ ಬೆಂದ ಒಳಗು, ಅನ್ನವಾಗಿರುತ್ತದೆ. ಬೇಯುವ, ಕುದಿಯುವ ನೋವಿನ ಪ್ರಕ್ರಿಯೆಯಿಂದಲೇ ಅನ್ನವಾಗುವ ಸಾರ್ಥಕ್ಯ ಸಾಫಲ್ಯಗಳು ಸಾಧ್ಯ.

'ಸೋರುತಿಹುದು ಮನೆಯ ಮಾಳಿಗಿ
ಅಜ್ಞಾನ ದಿಂದ
ಸೋರುತಿಹುದು ಮನೆಯ ಮಾಳಿಗೆ
ಸೋರುತಿಹುದು ಮನೆಯ ಮಾಳಿಗೆ
ದಾರುಗಟ್ಟಿ ಮಾಳ್ಪರಿಲ್ಲ
ಕಾಳ ಕತ್ತಲೆಯೊಳಗೆ ನಾನು
ಮೇಲಕೇರಿ ಹೋಗಲಾರೆ
ಮುರುಕು ತೊಲೆಯು ಹುಳುಕು ಜಂತಿ
ಕೊರೆದು ಸರಿದು ಕೀಲ ಸಡಲಿ
ಹರಕು ಚಪ್ಪರ ಜೇರು ಗಿಂಡಿ
ಮೇಲಕೇರಿ ಹೋಗಲಾರೆ'[೬೬]

ಇಲ್ಲಿ ವ್ಯಕ್ತಿ ಬಯಸುವ ಆ ಅನುಭಾವದೆತ್ತರವನ್ನು ತಲುಪಲಾಗುತ್ತಿಲ್ಲವಲ್ಲಾ ಎಂಬ ಕಳವಳವಿಲ್ಲಿದೆ. ಎತ್ತರವೇರಲಾರದಂತೆ ಕೆಳಕ್ಕೆ ಜಗ್ಗುವ ಅಜ್ಞಾನ ಹಾಗೂ ಅದರ ಪರಿಣಾಮವಾದ ದುಃಖಗಳೇ, ಮನೆಯನ್ನು ಸೋರದಂತೆ ತಡೆಯಬಲ್ಲ ಚೈತನ್ಯವನ್ನು ಕುಗ್ಗಿಸಿವೆ. ಈ ಶಿಥಿಲತೆ ಲೌಕಿಕ ಬದುಕಿನ ಒಟ್ಟಾರೆ ಸ್ಥಿತಿಯಾಗಿದೆ. ಇಲ್ಲಿ ಮನೆಯೆಂಬುದು ಮನಸ್ಸು. ಇಂದ್ರಿಯಗಳ ಹತೋಟಿಯಿಂದ ಮುಕ್ತವಾಗದ ಮನಸ್ಸು, ಅವುಗಳ ಕುಣಿತಕ್ಕೆ ಸಿಕ್ಕು ಜರ್ಜರಿತವಾಗಿದೆ. ಮೋಹಪಾಶಗಳು ಕವಿಸಿದ ಕತ್ತಲೆಯನ್ನು ದಾಟಿ, ಚೈತನ್ಯದ ಬೆಳಕನ್ನು ಕಾಣಲಾಗದ ಅಸಹಾಯಕತೆ ಬಂದೊದಗಿದೆ. ಮುರುಕು ತೊಲೆ, ಹುಳುಕು ಜಂತಿ, ಹರಕು ಚಪ್ಪರ, ಜೇರುಗಿಂಡಿ ಇವೆಲ್ಲಾ ಮನಸ್ಸಿನ ಅಸ್ಥಿರತೆಯನ್ನು, ಅಭದ್ರತೆಯನ್ನು ಸೂಚಿಸುತ್ತವೆ. ಇಂಥ ಅಭದ್ರ ಬದುಕಿನಲ್ಲಿ ದುಃಖದ ಮಳೆಯೇ ಸುರಿದಿದೆ. ಆದರೆ, ಆ ದುಃಖದಿಂದ ತಪ್ಪಿಸಿಕೊಂಡು ನಿಜಸುಖವನ್ನು ತಲುಪಲು ಮೊದಲು, ಮನಸ್ಸಿನ ಮಿತಿಗಳನ್ನು ಮೀರುವುದು ಅತ್ಯಗತ್ಯ. ಅನುಭಾವಿಗೆ ಸಾಧನಾ ಪಥದಲ್ಲಿ ಇಂಥ ಕಳವಳಗಳನ್ನು ಹಾಯುವುದು ಅನಿವಾರ್ಯ. ಆತ ಅನುಭವಿಸುವ ಯಾತನೆಯ ತೀವ್ರತೆಯೇ ಅವನನ್ನು, ಅವನ ಆನಂದವನ್ನು ಮತ್ತಷ್ಟು ಉತ್ಕಟವಾಗಿ ಬಯಸುವಂತೆ ಮಾಡುತ್ತದೆ. ಆ ಆನಂದದ ಭಾವದಲ್ಲಿ ಮಳೆಯೆಂದರೆ ಭಯವಿಲ್ಲ. ಮನೆ–ಬಯಲುಗಳು ಒಂದಾಗಿರುವುದರಿಂದ ಸೋರುವ ಆಂತಕವೂ ಇಲ್ಲ. ಕತ್ತಲು ಕವಿದು ಭಯ ಹುಟ್ಟಿಸಿದ್ದ ಬದುಕು, ದೈವದ ಕರುಣೆಯಲ್ಲಿ ಭರವಸೆಯ ಬೆಳಕಾಗಿದೆ.

'ಚೇಳು ಕಚ್ಚತವ್ವ
ಯಾರಿಗೆ ಹೇಳಲವ್ವ
ಅದು ಎಂಥ ಚೇಳು
ಅದಕೆ ಸಾವಿರ ಮಣಿಗಳು

ಕಚ್ಚಿತು ಕಿರಿ ಬೆರಳಿಗೆ
ತುಂಬಲು ಹೋಗಿದ್ದೆ ಕುಳ್ಳು[೩೮]

'ಚೋಳ ಕಡಿತ ನನಗೊಂದು ಚೋಳ ಕಡಿತ
ಕಳಕತ್ತಲದೊಳಗ ಕಾದಿತ್ತ ನನಕಂಡು ಬಂತ ॥ಪ॥
ಎಷ್ಟು ದಿನಕ ಇದ್ದು ಇದ್ದಿತ್ತ ದೀರಿಸಿಬಿದ್ದಿತ್ತ
ಯಾರ ಹೇಳಿದರೇನು ಆದಿತ್ತ
ಹುಟ್ಟಿದ ಮಗಳು ಕಂಡಿದ್ದಿಲ್ಲ
ಇದರ ಇಷ್ಟ ಶಿವನೇ ಬಲ್ಲ
ಗಟ್ಟಿಯಾಗಿ ಮುಳ್ಳು ಚುಚ್ಚಿತ್ತ
ಮಯವಾಗಿಹೋಯ್ತು
ಮೂರು ದೇಹದೊಳಗೆ ತಾನಿತ್ತು -ಪರಮಾತ್ಮ
ನಾದದೊಳಗೆ ತಾನು ಬೆಳದಿತ್ತು
ಸಾರಿಬಂದು ಎನ್ನ ನೋಡುತ
ಮೂರುಲೋಕ ಬೆಳಗುವಂತೆ
ಮೀರಿದುನ್ಮನಿ ಹಾರಿ ನಿಂತಿತ್ತು-ಎಚ್ಚರವ ಚುಚ್ಚಿತು
ಗುರು ತಾಕಿ ಮಾತಾ'[೩೯]

ಅನೇಕ ತತ್ವಪದಗಳಲ್ಲಿ 'ಹಾವು ಕಡಿತ', 'ಚೇಳು ಕಚ್ಚಿತ', 'ದೆವ್ವ ಬಡಿತ' ಎಂಬ ರೂಪಕಗಳು ಬಂದಿವೆ. ಇಲ್ಲಿ ಚೇಳು ಅರಿವಿನ, ಎಚ್ಚರದ ಸಂಕೇತವಾಗಿ ಬರುತ್ತದೆ. ಮತ್ತು ಇಲ್ಲಿ ಯೋಗ ಸಾಧನೆಯ ಪರಿಭಾಷೆಯಿದೆ. ಈ ಎಚ್ಚರ, ಜಾಗೃತಸ್ಥಿತಿ ದೇಹದೊಳಗೆ ಮೊದಲೇ ಇತ್ತು. ಇದು ಅರಿವಿನ ಸಹಜ ಸ್ಥಿತಿಯ ಸೂಚನೆ. ಅರಿವೆಂಬುದು ಸತ್ಯವಾದದ್ದು. ಅದು ಬೆಳಗಲು ಇಂಥ ಮಿಂಚು ಬೇಕು. ಮನೆಯ ಮೂಲೆಯಲ್ಲಿ ಸುಪ್ತವಾಗಿದ್ದ ಅರಿವೆಂಬ ಚೇಳು, ಎಚ್ಚರವಿಲ್ಲದ ಜಡಸ್ಥಿತಿಯಲ್ಲಿದೆ. ಇಂತಹ ಸ್ಥೂಲದೇಹದಲ್ಲಿಯೇ ಅರಿವು ಅಡಗಿದೆ. ಆ ಅರಿವು ಎಚ್ಚೆತ್ತಾಗ ಸ್ಥೂಲದೇಹ, ಸೂಕ್ಷ್ಮವಾಗಿ ಬಿಡುತ್ತದೆ. ಹಾಗೆ ಎಚ್ಚರವಾಗುವಂತೆ ಕಚ್ಚಿದ್ದು ಈ ಚೇಳು, ಆ ಕ್ಷಣದಲ್ಲಿ ಎಚ್ಚೆತ್ತುಕೊಂಡ ಜೀವ, ಲೌಕಿಕದ ಎಲ್ಲಾ ನೀತಿ-ನಿಯಮಗಳನ್ನು ಮೀರಿ, ಉನ್ಮತ್ತ ಸ್ಥಿತಿಗೆ ಹೊರಳಿತು. ಲೌಕಿಕದ ಎಲ್ಲಾ ಗುರುತುಗಳನ್ನು, ಚೌಕಟ್ಟುಗಳನ್ನು ಮೀರುವುದೇ, ಅಲೌಕಿಕತೆಯ ಉದ್ದೇಶವಾಗಿದೆ. ತನ್ನನ್ನು 'ಮುಗಿಸೆಬಿಟ್ಟಿತು' ಎನ್ನುವಲ್ಲಿ ಮುಗಿದು ಹೋದದ್ದು ಜಡತೆ, ಸ್ಥೂಲತೆ, ಮರೆವು. ಜಾಗೃತಗೊಂಡಿದ್ದು ಅರಿವು, ಚೈತನ್ಯಗಳು. ಎಚ್ಚರದ ಚುಚ್ಚುವಿಕೆಯಿಂದ ಅರಿವಿನ ಬೆಳಕಿನಲ್ಲಿ ಇದುವರೆಗೂ ಅಗೋಚರವಾಗಿದ್ದ ಮೂರು ಲೋಕಗಳು ಚೈತನ್ಯಮಯವಾಗಿವೆ.

'ತೋಟವ ನೋಡಿರಯ್ಯ ಸದ್ಗುರುವಿನ
ಆಟವ ನೋಡಿರಯ್ಯ
ನೋಟ ಹೂಡಿ ನಿಜ ಬ್ರಹ್ಮಜ್ಞಾನದಿ
ಕೋಟಿ ಕರ್ಮ ಸಂಹರಿಸಿದ ಧರ್ಮದ
ಬಯಲೊಳು ಬಯಲಾಗಿ ಕವಲುಗಳಿಲ್ಲದ
ಬರಿಯ ಮೂಲವಾಗಿ
ಜೋಲುವ ಫಲಗಳು ಗಾಳಿಗೆ ಒಲೆಯಲು
ಸಾಲು ಸಾಲಿಗು ಮೇಲೆನಿಸುವ ಧರ್ಮದ'[೪೦]

ತನ್ನ ಇಂದ್ರಿಯ ಸಂವೇದನೆಗಳಿಗಿರುವ ಪರಿಮಿತಿಯ ಆಚೆಗಿನ ಅಪಾರ ಸಾಧ್ಯತೆಯ ಅರಿವನ್ನು ಪಡೆಯುವುದು ಜ್ಞಾನ. ಆದರೆ ಆ ಜ್ಞಾನದಿಂದಲೇ ಆನಂದ ದೊರೆಯಲಾರದು. ಅದನ್ನು ತನ್ನದಾಗಿಸಿಕೊಳ್ಳುವ ದಾರಿಯನ್ನು ಹುಡುಕಬೇಕು. ಜ್ಞಾನದಲ್ಲಿ ಅರಿದೆನೆಂಬ ಅಹಂ ಭಾವವಿದ್ದರೆ, ಭಕ್ತಿ ಮತ್ತು ಪ್ರೇಮಗಳಲ್ಲಿ ಅಹಂ ನಿರಸನದ ಭಾವವಿರುತ್ತದೆ. ಅಂಥ ಶುದ್ಧತೆಯಲ್ಲಿ ಅರಿವು ಮೂಡಬೇಕು. ಈ ಅರಿವಿನ ಸ್ವರೂಪ 'ಬಯಲ' ರೂಪವೇ ಆಗಿದೆ. ಆದರೆ ಈ ಬಯಲು 'ಶೂನ್ಯ'ವಲ್ಲ. ಚೈತನ್ಯವನ್ನೊಳಗೊಂಡ ಬಯಲು.

'ಕಾಕು ಪೋಕುವಿದ್ಯೆಗಳ ನೇಕವಿರ್ದರೇನು ಜನ್ಮ
ಶೋಕವನು ನೀಗಿ ಮೋಕ್ಷದೇಕಾನಂದವೀಯವಿಂತಿ
ವೇದಾಗಮ ಪೌರಾಣಾದಿ ಗಾದೆ ಶಬ್ದ ಶಾಸ್ತ್ರ ಮಂತ್ರ
ಭೇದ ಕಾವ್ಯ ತರ್ಕ ಮೀಮಾಂಸಾದಿಡಂಭವಿದ್ಯವ
ಹಾದಿಹೋಕರಲ್ಲಿಯಿಲ್ಲಿ ಓದಿ ದೈನ್ಯದೋರಿ ತಮ್ಮ
ಕಾದ ಹೊಟ್ಟೆಗನ್ನವ ಸಂಪಾದಿಸವರಲ್ಲದಿಂತೀ
ಜ್ಯೋತಿಷ್ಯ ಛಂದಸ್ಸು ಶಿಲ್ಪ ವಾಸ್ತು ವೈದ್ಯ ಗಾರುಡ ಸಂ
ಗೀತ ನಾಟ್ಯ ಸಾಮುದ್ರಿಕ ಭೂತಾದ್ಯಲ್ಪವಿದ್ಯೆಯ
ನೋತು ಕಲ್ತರೆಲ್ ತೂತು ಮಾತ್ರ ಮುಂದು ಮಾಡಿ ದೃಶ್ಯ
ಜಾತವನ್ನೇ ಹೇಳಿ ಮಾಯಾ ದೂರತಪ್ಪರಲ್ಲದಿಂತೀ
ವೇದಾಗಮ ಜ್ಯೋತಿಷ್ ಛಂದೋವಾದವಶ್ಯ ಬಂಧ ಲಕ್ಷ
ವಾದಿಯಾದ ವಿದ್ಯೆಯಲ್ಲಿ ಭೇದಮಾರ್ಗವೆನ್ನುತ
ನಾದಿ ಗುರುಸಿದ್ಧನನ್ನೆ ಬೋಧಿಸುತ್ತ ದ್ವೈತರೂಪ
ವಾದ ಮುಕ್ತಿ ಸೌಖ್ಯವೀದ ವೇದಾಂವೊಂದಲ್ಲದಿಂತೀ'[೪೧]

ಪಾರಮಾರ್ಥಿಕ ವಿಷಯವನ್ನು ಬೋಧನೆಯ ರೂಪದಲ್ಲಿ ಸರ್ಪಭೂಷಣ ಶಿವಯೋಗಿಗಳು ಹೇಳಿದ್ದಾರೆ. ತೋರಿಕೆಯ ವಿದ್ಯೆಗಳು ವಿಜೃಂಭಿಸುತ್ತಿರುವುದನ್ನು ತಮ್ಮ ಲೋಕಾನುಭವದಿಂದ

ಕಂಡುಕೊಂಡಿರುವ ಇವರು 'ಅರಿವು' ಪಡೆದವರೆಂಬ ಸೋಗಲಾಡಿಗಳನ್ನು ಭಂಜಿಸುವ ಉದ್ದೇಶದಿಂದ ಈ ಹಾಡನ್ನು ಕಟ್ಟಿದ್ದಾರೆ.

ಜನರ ದೃಷ್ಟಿಯಲ್ಲಿ ಸಾಮಾನ್ಯ ಅಥವಾ ಅಲ್ಪವಾದ ವಿದ್ಯೆಯೇ ಜ್ಞಾನ. ಬದುಕಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮಾತ್ರ ಲೌಕಿಕ ಜ್ಞಾನ ಮಾದರಿಗಳು ನೆರವಾಗಬಲ್ಲವು. ಆದರೆ ವೇದಾಂತ ಜ್ಞಾನ ಬದುಕಿಗಂಟಿಕೊಂಡೇ ಬಂದ ದುಃಖ, ನಿರಾಸೆ ಮೊದಲದುವನ್ನು ಹೋಗಲಾಡಿಸಿ, ಅವುಗಳಿಂದ ಮುಕ್ತಿ ಪಡೆದು ನೆಮ್ಮದಿಯ ಬದುಕನ್ನು ನಡೆಸಲು ವೇದಾಂತಜ್ಞಾನ ನೆರವಾಗುತ್ತದೆ ಎಂದು ಜ್ಞಾನದ ತಿಳಿವಳಿಕೆ ನೀಡಿದ್ದಾರೆ. ಆದರೆ ಬೌದ್ಧಿಕ ವಿದ್ಯೆಗಳಿಂದ ಸಂಪಾದಿಸಿದ ಜ್ಞಾನವನ್ನು ತೋರಿಕೆಯ ವಿದ್ಯೆ ಎಂದು ಜರೆಯುತ್ತಾರೆ. ವೇದ, ಆಗಮ, ಪುರಾಣ, ಗಾದೆ, ಶಬ್ದ, ಶಾಸ್ತ್ರ, ಮಂತ್ರ, ಭೇದ, ಕಾವ್ಯ, ತರ್ಕ, ಮೀಮಾಂಸೆ ಮೊದಲಾದ ವಿದ್ಯೆಗಳು ಬೂಟಾಟಿಕೆಯ ವಿದ್ಯೆಗಳೆಂಬುದನ್ನು ಗುರುತಿಸಿದ್ದಾರೆ, ನಿಜಜ್ಞಾನವಿಲ್ಲದ ಹಾದಿಹೋಕರು ಇಂತಹ ವಿದ್ಯೆಗಳನ್ನು ಓದಿಕೊಂಡು, ಅದರ ಮೂಲಕ ತಮ್ಮ ಹೊಟ್ಟೆಯ ಹಸಿವನ್ನು ನೀಗಿಸಿಕೊಳ್ಳುತ್ತಾರೆ. ಜ್ಞಾನವೆಂಬುದು ಕೇವಲ ಉದರ ಪೋಷಣೆಗೆ ಸಾಧನವಲ್ಲ. ಅದು ಬದುಕಿನೊಂದಿಗೆ ಬೆರೆತು ಸಾಗಬೇಕು. ಹಿಂದಿನ ಜ್ಞಾನ, ಇಂದಿನ ಹೊಸ ತಿಳಿವಳಿಕೆಯನ್ನು ನೀಡುವ ನಿರೀಕ್ಷೆಗಳೊಡನೆ ಸಾಗಬೇಕಾಗಿದೆ.

ಯೋಗಿಗಳೆನಿಸಿದವರೂ ಇಂತಹವರಿಗಿಂತ ಭಿನ್ನರಲ್ಲವೆಂದು ಹೇಳಿದ್ದಾರೆ. ಕುರುಡು ವಿದ್ಯಾವಂತರು ಭೂತ, ವರ್ತಮಾನಗಳನ್ನು ಅರಿತವರಂತೆ ನಟಿಸಿ, ಭ್ರಮೆಗೊಳಗಾಗಿ ಇದನ್ನೇ ಬಂಡವಾಳವನ್ನಾಗಿಸಿ ಕೊಂಡು ಬದುಕುತ್ತಿದ್ದಾರೆ. ಯೋಗಿಗಳು ಕೂಡ ಬದುಕಿನ ಸುಲಭ ಮಾರ್ಗಕ್ಕೆ ಆಕರ್ಷಿತರಾದವರೇ ಆಗಿದ್ದಾರೆ. ವೇದ, ಆಗಮ, ಛಂದಸ್ಸುಗಳಂತಹ ವಿದ್ಯೆಗಳು ಕೇವಲ ವಾದ, ತರ್ಕಕ್ಕೆ ಸೀಮಿತ ವಾದಂತಹವುಗಳಾಗಿವೆ. ಪರಸ್ಪರಲ್ಲಿ ಬೇಧಗಳನ್ನು ಹುಟ್ಟಿಸುತ್ತವೆ. ಆದ್ದರಿಂದ ಇವುಗಳಿಗಿಂತ ಭಿನ್ನವಾದ, ಮುಕ್ತಿಕೊಡುವ ವೇದಾಂತ ಜ್ಞಾನವಷ್ಟೇ ನಿಜವಿದ್ಯೆ ಎಂದಿದ್ದಾರೆ. ಅನುಭವ, ಅರಿವುಗಳ ಭೇದವನ್ನು ಸುಲಭವಾಗಿ ಅರ್ಥೈಸಲು ಪ್ರಯತ್ನಿಸಿದ್ದಾರೆ. ಲೌಕಿಕ ವಿದ್ಯೆಯಷ್ಟೆ ಜ್ಞಾನವೆಂದು ಬೀಗುವ ಸಾಮಾನ್ಯರ ಮೀತಿಯನ್ನು ಸ್ಪಷ್ಟಪಡಿಸಿದ್ದಾರೆ. ತಿಳಿದಿದ್ದಷ್ಟೇ ಜ್ಞಾನವಲ್ಲ. ಎಲ್ಲವನ್ನೂ ಒಳಗೊಂಡ ಹಾಗೂ ನಿಯಂತ್ರಿಸಬಲ್ಲ ಜ್ಞಾನಮೂಲವನ್ನು ಗ್ರಹಿಸುವತ್ತ ಮಾನವ ಪ್ರಯತ್ನಿಸುವುದು ಅಗತ್ಯವಾಗಿದೆ. ತತ್ವಪದಕಾರರ ಈ ವೈಚಾರಿಕ ನಿಲುವು ಮಾನವನಲ್ಲಿಯ ಭ್ರಮೆಯನ್ನು ನಿವಾರಿಸುವುದೇ ಆಗಿದೆ.

'ಜ್ಞಾನಹೀನನೊಳು ಧ್ಯಾನಯೋಗ ವೃದ್ಧಿಯಾಗಬಲ್ಲದೆ.
ಮಾನಹೀನನೊಳು ಮಹನೀಯ ಜಪ ಸಿದ್ಧಿಯಾಬಲ್ಲದೆ
ಮತಿಹೀನನಿಗೆ ನೀತಿಮಾರ್ಗವು ತಿಳಿಯಬಲ್ಲದೆ.
ಇತರರ ಬೇಡೆ ಉಂಬವಗೆ ಪರಮಾನ್ನ ಹಿಡಿಸುವದೆ
ಕಲುಷಿತನಿಗೆ ವಿದ್ಯೆ ಕಲಿಸಿದರೆ ಅದು ಬೆಳೆಯಬಲ್ಲದೆ
ಕೊಲುವ ಕರ್ಮಿಗೆ ದೀಕ್ಷೆ ಕೊಟ್ಟರೆ ಉಳಿಯಬಲ್ಲದೆ

ಕಣ್ಣೊಳಿರ್ದ ಬೊಂಬಿ ಕರೆದರೆ ತಾ ಮಾತಡಬಲ್ಲದೆ
ಎಣ್ಣೆಯೊಳಗೆ ನೀರೆರೆದು ಕಲಸಿದರೆ ಕೂಡಬಲ್ಲದೆ
ಬೆಣ್ಣೆ ಮುದ್ದಿಯ ಮೇಲೆ ಬಿಸಿ ನೀರು ಹೊಯ್ದರೆ ಬಲಿಯುವದೆ
ಸುಣ್ಣದೆಲೆಯ ಮೆದ್ದ ಸುಖಿಯ ಐಶ್ವರ್ಯವು ನಲಿಯಬಲ್ಲದೆ
ಕನ್ನಡಿಯೊಳು ದ್ರವ್ಯ ಕಂಡರೇನು ಕೈಗೆ ಸೇರಬಲ್ಲದೆ
ಮುನ್ನೀರ ಗುರಳಿಯ ಮುಟ್ಟಿದರೆ ಮತ್ತೆ ತೋರಬಲ್ಲದೆ
ಉಣ್ಣೆ ಕೆಚ್ಚಲೊಳಗಿರ್ದರೆ ಹಾಲುಂಡು ಸೊಕ್ಕಬಲ್ಲದೆ.
ಕುನ್ನಿ ತುಪ್ಪವನೆ ಕುಡಿದರೆ ಸವಿಯಾಗಿ ನೆಕ್ಕಬಲ್ಲದೆ.[೨]

ಅವಿವೇಕದಿಂದ ಮಾಡುವ ಕೆಲಸಗಳೆಲ್ಲವೂ ವ್ಯರ್ಥಪ್ರಯತ್ನದಂತೆ ಎಂಬುದನ್ನು ಐನೂಲಿ ಕರಿಬಸವಾರ್ಯರು ಹೇಳಿದ್ದಾರೆ. ಜ್ಞಾನವೆಂದರೆ ಜನರ ಅಥವಾ ಸಮುದಾಯದ ಒಟ್ಟು ತಿಳುವಳಿಕೆ. ಜ್ಞಾನವು ನಿರ್ಗುಣ, ಅದನ್ನು ಇತರರಿಂದ ಪಡೆಯಲೇ ಬೇಕು. ಆದರೆ ಓದು, ಬರಹಗಳು ಜ್ಞಾನಾರ್ಜನೆಯ ಉತ್ಕೃಷ್ಟ ಸಾಧನಗಳೆಂಬುದಾಗಿ ಎಲ್ಲಿಯೂ ಹೇಳಿಲ್ಲ. 'ಅಕ್ಕರವು ಲೇಖಕ್ಕೆ, ತರ್ಕತಾ ವಾದಕ್ಕೆ, ಮಿಕ್ಕ ಓದುಗಳು ತಿರುಪೆಗೆ' ಎಂದ ಸರ್ವಜ್ಞ ಪ್ರಸ್ತಕದ ಹುಳುಗಳಾಗುತ್ತಿರುವ ಯುವ ಜನತೆಯನ್ನು ಕುರಿತು ಹೇಳಿದಂತಿದೆ. ಅದಕ್ಕಾಗಿ ಸಹಜವಾಗಿರುವ ಸತ್ಯದ ಜ್ಞಾನವನ್ನು ಗ್ರಹಿಸಬೇಕಾಗಿದೆ. ಮುಖ್ಯವಾಗಿ ನಮ್ಮ ಮನಸ್ಸಿನ ಕ್ರಿಯೆಯಲ್ಲಿ ಒಂದು ಪರಿವರ್ತನೆಯಾಗಬೇಕಾಗುತ್ತದೆ. ಆ ಪರಿವರ್ತನೆಯಾದಾಗ ನಮ್ಮ ನಿಜಸ್ಥಿತಿಯನ್ನು ಅರಿಯುವುದು ಸಾಧ್ಯವಾಗುತ್ತದೆ. ಇಂದಿನವರು ಪಾಶ್ಚಾತ್ಯ ಜ್ಞಾನವನ್ನು ಅನುಸರಿಸುತ್ತಿರುವುದರಿಂದ ನಮ್ಮ ಸಂಸ್ಕೃತಿ, ನೈತಿಕ ಮೌಲ್ಯಗಳು ಕುಸಿತ ಕಂಡಿದೆ. ಒಂದು ರಾಷ್ಟ್ರದ ಉನ್ನತಿಗೆ ಜ್ಞಾನ ಮತ್ತು ಸಂಸ್ಕೃತಿ ಇವೆರಡರ ಅಭಿವೃದ್ಧಿಯೂ ಅಗತ್ಯವಾಗಿದೆ. ಸಂಸ್ಕಾರವಿಲ್ಲದೆ, ಸಂಸ್ಕೃತಿಯಿಲ್ಲದೆ ಬರೀ ಜ್ಞಾನಾಭಿವೃದ್ಧಿಯ ಬಲದಿಂದ ಮೇಲೆರಿದರೂ, ಅದು ಚಿರಕಾಲ ಉಳಿಯುವುದಿಲ್ಲ,

'ಜ್ಯೋತಿ ಬೆಳಗುತಿದೆ, ವಿಮಲ ಪರಂಜ್ಯೋತಿ ಬೆಳಗುತಿದೆ
ಮಾತು ಮನಂಗಳಿಂದತ್ತತ್ತ ಮೀರಿದ
ಸಾತಿಶಯದ ನಿರುಪಾಧಿಕ ನಿರ್ಮಲ
ಶಿವಧರ್ಮವಾಳವೆಂತೆಂಬ ಕಂಬದ ಮೇಲೆ
ಸುವಿವೇಕ ಹೃದಯಾಜ್ಞ ಪಣತೆಯೊಳು ಸವೆಯದ ಸದ್ಭಕ್ತಿ ರಸತೈಲ ತ್ರೀ ವಿದ
ಪ್ರವಿಮಲ ಕಳೆಯೆಂಬ ವತ್ತಿವಿಡಿದು ದಿವ್ಯ
ಮುಸುಕಿದ ವಿಷಯ ಪತಂಗ ಬಿದ್ದುರುಳೆ, ತಾ
ಮಸಬುದ್ಧಿಯೆಂಬ ಕತ್ತಲೆಯಳಿಯೆ
ಮಸಗಿ ಸುಜ್ಞಾನವೆಂತೆಂಬ ಮಹಾಪ್ರಭೆ

ಪಸರಿಸಿ ಮಾಯ ಕಾಳಿಕ ಪೊರ್ದುದನುಪಮ
ಪ್ರಣವಾಕಾರದ ಗುಣ ಮೂರು ಮುಟ್ಟದ
ಗಣನೆಗತೀತಾರ್ಥವನೆ ತೋರುವ
ಅಣುಮಾತ್ರ ಚಲನೆಯಿಲ್ಲದ ಮೋಕ್ಷ ಚಿಂತಾ
ಮಣಿಯೆನಿಸುವ ಶಂಭುಲಿಂಗವೆ ತಾನಾದ'[೪೩]

ಜ್ಞಾನ ಎನ್ನುವುದು ಅರಿವು, ತಿಳುವಳಿಕೆ, ಕ್ರಿಯಾಶೀಲತೆಯನ್ನು ಸೂಚಿಸಿದರೆ, ತಾಮಸ ಬುದ್ಧಿ ಎಂಬುದು ಜಡವಾದ, ಆಲಸ್ಯ, ಅಜ್ಞಾನದ ಪ್ರತೀಕವಾಗಿ ನಿಲ್ಲುತ್ತದೆ. ಇಲ್ಲಿ ಜ್ಯೋತಿ ಅಜ್ಞಾನವೆಂಬ ಕತ್ತಲನ್ನು ಅಳಿಸಿ ಹಾಕಿದೆ. ಲೋಕದ ಬದುಕಿಗೆ ಬೇಕಾದ ಎಚ್ಚರ ಮತ್ತು ನೈತಿಕ ಸಮಾಜದ ನಿರ್ಮಾಣದ ಮೂಲಕ, ವ್ಯಕ್ತಿಯ ವ್ಯಕ್ತಿತ್ವಕ್ಕೆ ಅನ್ವಯಿಸುವ ಈ ಗೀತೆ ಮನುಕುಲಕ್ಕೆ ಮುಸುಕಿದ ವಿಷಯಗಳನ್ನು ಮೀರಿ ಬೆಳೆಯಲು ಮಾರ್ಗದರ್ಶನ ಮಾಡುತ್ತದೆ.

'ಹುಶಾರಿ ಹೇಳತಾನ ಎನ ಗುರು ಎನಗೊಂದು ಹುಶಾರಿ ಹೇಳತನ
ತನುವಿನೊಳಗಿನ ಕಣಗಿಲ ಕರಕಿ ಬೇರುಗಳಾವಂತಾನಾ
ಬುದ್ಧಿಯೆಂಬುವ ಗುದ್ಧಲಿ ಹಚ್ಚಿ ಅಗದು ನೋಂತಾನ
ಕಾಯಯೆಂಬೊ ಕರಿ ಹೊಲದ ಕಂಡಿಯ ಕಡಿಯಂತಾನ
ಅಲ್ಲಿ ಗಂಟಾದ ತಗಿಯಂತಾನಾ'[೪೪]

ಗುರುವಿನ ಎಚ್ಚರಿಕೆಯೊಂದಿಗೆ ಸಾಗುವ ಈ ಪದ ತನು-ಮನ ಹಾಗೂ ಬುದ್ಧಿ ಭಾವಗಳ ಸಮ್ಮಿಲಗೊಳಿಸುವಿಕೆಯನ್ನು ಹೇಳಿದ್ದಾರೆ. ಜ್ಞಾನವೆಂಬ ಗಂಟನ್ನು ಬಿಡಿಸಬೇಕೆಂದರೆ ಅದನ್ನು ಬುದ್ಧಿಯೆಂಬ ಗುದ್ದಲಿಯಿಂದ, ಕಾಯವೆಂಬ ಕರಿಯ ಹೊಲವನ್ನು ಹಸನು ಮಾಡುವುದೆಂದರೆ, ಗುರುವಿನೊಂದಿಗೆ ಸಂವಾದ, ಚರ್ಚೆಗಳ ಮೂಲಕ ತನ್ನ ಅಜ್ಞಾನವನ್ನು ಕಳೆದುಕೊಳ್ಳಬೇಕಾಗಿದೆ. ಗುರು ಶಿಷ್ಯನಲ್ಲಿ ಚಿತ್ತಶುದ್ಧಿ, ಏಕಾಗ್ರತೆಯನ್ನು ನೆಲೆಗೊಳಿಸುತ್ತಾನೆ. ಲೌಕಿಕ ಬದುಕಿನ ಕ್ಷಣಿಕತೆಯನ್ನು ಅರಿಯುವಂತೆ, ಪಾರಮಾರ್ಥದ ಕಡೆಗೆ ಸಾಗುವಂತೆ ದಾರಿ ತೋರುತ್ತಾನೆ. 'ಹುಶಾರಿ ಹೇಳುತಾನ' ಎನ್ನುವುದು ಯಾವಾಗಲೂ ಶಿಷ್ಯ, ಎಚ್ಚರದ ಸ್ಥಿತಿಯಲ್ಲಿರಬೇಕಾದುದು ಅಗತ್ಯ ಎಂಬುದನ್ನು ತಿಳಿಸುತ್ತದೆ.

'ಪ್ರಪಂಚ ದೂರ ಖಾದರಿ
ಪದವಿದಾನು ಸದವಿದಾನು
ಪದವಿ ದೂರ ಖಾದರಿ
ಆದಿನಾದ ಮೋದನಾದ
ಹಮ್ಮನಳಿದ ಖಾದರಿ'[೪೫]

ಖಾದರಲಿಂಗ ಅವರ ಈ ಪದ, ಕನ್ನಡದ ಬದುಕು ಆಧುನಿಕತೆಗೆ ಹೊರಳಿಕೊಳ್ಳುತ್ತಿದ್ದ ಸಂದರ್ಭದಲ್ಲಿ, ತೀವ್ರ ಬಡತನ, ಕಷ್ಟ-ಕಾರ್ಪಣ್ಯಗಳಲ್ಲಿ ಬದುಕುತ್ತಿದ್ದ, ಪಾಶ್ಚಾತ್ಯ ಶಿಕ್ಷಣವನ್ನು ಪಡೆಯದಿದ್ದ, ಜನಸಮುದಾಯದ ಸ್ಥಿತಿಯ ಬಗ್ಗೆ ಹೇಳುತ್ತದೆ. ಆಧುನೀಕರಣ ಸಂದರ್ಭದಲ್ಲಿ ಜನರು ಪದವಿಯಾಧಾರಿತ

ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟು, ಕುಟುಂಬದಿಂದ, ಸಮಾಜದಿಂದ, ಸಮುದಾಯದಿಂದ ದೂರ ಉಳಿಯುತ್ತಿದ್ದಾರೆ. ಆತ್ಮಮುಖಿ ಜ್ಞಾನದಿಂದ ವಂಚಿತರಾಗುತ್ತಾ ಸಾಗುತ್ತಿದ್ದಾರೆ ಎಂಬುದನ್ನು ಹೇಳುತ್ತಾರೆ.

ಸಾಮಾನ್ಯವಾಗಿ ಎಲ್ಲಾ ತತ್ವಪದಕಾರರು ಮೌಢ್ಯ ಆಚರಣೆಗಳನ್ನು, ಅರ್ಥವಿಲ್ಲದ ಧಾರ್ಮಿಕಾಚರಣೆಗಳನ್ನು ತಿರಸ್ಕರಿಸಿ, ಪರಿಶುದ್ಧ ಆಧ್ಯಾತ್ಮಿಕತೆಯನ್ನು ಪ್ರತಿಪಾದಿಸುತ್ತಾರೆ. ಆಧುನಿಕತೆಯ ಪ್ರಭಾವದಿಂದ ಕಣ್ಮರೆಯಾಗುತ್ತಿರುವ ಭಾಷೆ, ಸಂಸ್ಕೃತಿ ಮತ್ತು ಆಧುನಿಕ ಶಿಕ್ಷಿತರಿಗೆ ಅಪರಿಚಿತವಾಗಿದ್ದ ಜ್ಞಾನಮೂಲಗಳ ತಿಳುವಳಿಕೆ ಪಡೆಯಲು ಈ ತತ್ವಪದಗಳು ನೆರವಾಗುತ್ತವೆ. ತತ್ವಪದಗಳು ತಮ್ಮ ಬದುಕಿನ ವಿವರಗಳ ಮೂಲಕ ಬೇರೊಂದು ಬೆಳಕನ್ನು ಕಾಣುವ, ಬೇರೊಂದು ಬೆಳಕಿನ ಮೂಲಕ ತಮ್ಮ ದೈನಂದಿನ ವಿವರಗಳನ್ನು ನೋಡುವ, ಇಹಪರದ ದ್ವಂದ್ವಗಳನ್ನು ದಾಟುವ ಅವಕಾಶವನ್ನು ಒದಗಿಸಿಕೊಡುತ್ತವೆ. ಇಲ್ಲಿ ಎಲ್ಲಾ ಧರ್ಮಗಳೂ, ಎಲ್ಲಾ ಧರ್ಮದವರೂ ಒಂದೇ ಎನ್ನುವ ಸಮನ್ವಯ ಭಾವನೆ ಕಾಣುತ್ತದೆ. ಇವರು ಜ್ಞಾನವನ್ನು ಮಾತ್ರವೇ ನಂಬಬೇಕೆಂದು ಹೇಳುತ್ತಾ, ದ್ವೈತಭಾವ ಅಳಿಯಬೇಕೆಂದಿದ್ದಾರೆ. ಅಂತರಂಗದ ಅನುಭಾವದ ಏಕತೆಯನ್ನು ಸಾಧಿಸಬೇಕೆಂದಿದ್ದಾರೆ. ಆಧ್ಯಾತ್ಮಿಕ ಚಿಂತನೆಗೆ ಆದ್ಯತೆ ನೀಡುವುದರ ಜೊತೆಗೆ, ಲೋಕಜೀವನವನ್ನು ಉತ್ತಮಗೊಳಿಸಿಕೊಳ್ಳಬೇಕೆಂಬ ಆಶಯವನ್ನು ತತ್ವಪದಗಳಲ್ಲಿ ಕಾಣುತ್ತೇವೆ.

**ಅಡಿಟಿಪ್ಪಣಿ**

೧. ಅಂತರಂಗದ ರತ್ನ; ಪುಟ-೩೦೬
೨. ತತ್ವಪದಕಾರಲ್ಲಿ ವಿದ್ಯೆಯ ಸಂಕಥನ; ಪುಟ-೧
೩. ನುಡಿವ ಬೆಡಗು; ಪುಟ-೫೩
೪. ಹೈದರಾಬಾದ್ ಕರ್ನಾಟಕದ ತತ್ವಪದಗಳು; ಪುಟ-೧೫
೫. ಅದೇ; ಪುಟ-೧೮
೬. ಅದೇ; ಪುಟ-೯೩
೭. ನುಡಿವ ಬೆಡಗು; ಪುಟ-೫೮
೮. ಮೋಟ್ನಳ್ಳಿ ಹಸನಸಾಹೇಬ; ಪುಟ-೩೦
೯. ನುಡಿವ ಬೆಡಗು; ಪುಟ-೩೮
೧೦. ತತ್ವಪದಗಳು; ಪುಟ-೩೨; ಪದ-೪೩
೧೧. ಹೈದರಾಬಾದ್ ಕರ್ನಾಟಕದ ತತ್ವಪದಗಳು; ಪುಟ-೫೨
೧೨. ತತ್ವಪದಗಳು; ಪುಟ-೮, ೯; ಪದ-೧೧
೧೩. ಹೈದರಾಬಾದ್ ಕರ್ನಾಟಕದ ತತ್ವಪದಗಳು; ಪುಟ-೧೬
೧೪. ತತ್ವಪದಗಳು; ಪುಟ-೧೮೧; ಪದ-೨೪೨
೧೫. ತತ್ವಪದ ಸಾಹಿತ್ಯ ಅಧ್ಯಯನ; ಪುಟ-೭೫

೧೬. ತತ್ವಪದಗಳು; ಪುಟ–೧೧೨
೧೭. ಹೈದರಾಬಾದ್ ಕರ್ನಾಟಕದ ತತ್ವಪದಗಳು; ಪುಟ–೨೨೫
೧೮. ಅದೇ; ಪುಟ–೨೨೩
೧೯. ಶರಣ ಶಿಶುನಾಳರ ಪದಗಳು; ಪುಟ–೨೬; ಪದ–೪೩
೨೦. ತತ್ವಪದಗಳು; ಪುಟ–೩೨; ಪದ–೪೩
೨೧. ನುಡಿವ ಬೆಡಗು; ಪುಟ–೫೪
೨೨. ಹೈದರಾಬಾದ್ ಕರ್ನಾಟಕದ ತತ್ವಪದಗಳು; ಪುಟ–೫
೨೩. ನುಡಿವ ಬೆಡಗು; ಪುಟ–೫೪
೨೪. ಅದೇ;
೨೫. ಹೈದರಾಬಾದ್ ಕರ್ನಾಟಕದ ತತ್ವಪದಗಳು; ಪುಟ–೬೬
೨೬. ಶರಣ ಶಿಶುನಾಳರ ಪದಗಳು; ಪುಟ–೧೭; ಪದ–೨೭
೨೭. ಶರಣ ಶಿಶುನಾಳರ ಪದಗಳು; ಪುಟ–೭
೨೮. ಶಿಶುನಾಳರ ಗೀತೆಗಳು; ಪುಟ–೩೩
೨೯. ಅದೇ; ಪುಟ–೧೧
೩೦. ಕಡಕೋಳ ಮಡಿವಾಳಪ್ಪನವರ ತತ್ವಜ್ಞಾನ ಪದಗಳು; ಪುಟ–೨೬
೩೧. ಅದೇ; ಪುಟ–೩೨
೩೨. ತತ್ವಪದಗಳು; ಪುಟ–೧೦೦
೩೩. ಹೈದರಾಬಾದ್ ಕರ್ನಾಟಕದ ತತ್ವಪದಗಳು; ಪುಟ–೩೦
೩೪. ಕಡಕೋಳ ಮಡಿವಾಳಪ್ಪನವರ ತತ್ವಜ್ಞಾನ ಪದಗಳು; ಪುಟ–೧೪
೩೫. ಶಿಶುನಾಳರ ಗೀತೆಗಳು; ಪುಟ–೧
೩೬. ಬೆಳಕಿನ ಬೀಜ; ಪುಟ–೨೯
೩೭. ತತ್ವಪದಗಳು; ಪುಟ–೫೫೪
೩೮. ಕೂಡಲೂರು ಬಸವಲಿಂಗ ಶರಣರು ಮತ್ತು ಇತರರ ತತ್ವಪದಗಳು; ಪುಟ–೪೬
೩೯. ಶಿಶುನಾಳರ ತತ್ವಪದಗಳು; ಪುಟ–೪೦
೪೦. ಅದೇ; ಪುಟ–೪೫
೪೧. ಹಲವು ತೋಟದ ಹೂಗಳು; ಪುಟ–೮೯
೪೨. ಹೈದರಾಬಾದ್ ಕರ್ನಾಟಕದ ತತ್ವಪದಗಳು; ಪುಟ–೭
೪೩. ನಿಜಗುಣ ಶಿವಯೋಗಿಯ ತತ್ತ್ವದರ್ಶನ; ಪುಟ–೩೦೫
೪೪. ಶರಣ ಶಿಶುನಾಳರ ಪದಗಳು; ಪುಟ–೪
೪೫. ಭಕ್ತಿ ಸಾಹಿತ್ಯ ಪುಟ–೧೭೭

ಅಧ್ಯಾಯ ಏಳು

# ಆಧುನಿಕ ಸಂದರ್ಭದಲ್ಲಿ ಜ್ಞಾನದ ಪರಿಕಲ್ಪನೆ

ಪ್ರಪಂಚದ ಅತೀ ಬುದ್ಧಿವಂತ ಪ್ರಾಣಿ ಎಂದರೆ ಮನುಷ್ಯ. ಮಾನವನಿಗೆ ಜಗತ್ತಿನಲ್ಲಿ ಅಸಾಧ್ಯವೆಂಬುದು ಯಾವುದು ಇಲ್ಲ. ಮನುಷ್ಯ ಈ ಮಟ್ಟಕ್ಕೆ ಏರಲು ಕಾರಣವಾದ ಅಂಶವೆಂದರೆ ಶಿಕ್ಷಣ. ಇದು ಮಾನವನ ಜೀವನ ಕ್ರಮವನ್ನು ಉನ್ನತಗೊಳಿಸಲು ಶ್ರಮಿಸುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜೀವಿತದಲ್ಲಿ ತನ್ನ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಂಡು ವಿಚಾರಶಕ್ತಿಯಿಂದ ವಿವಿಧ ಅನುಭವಗಳೊಂದಿಗೆ, ಪ್ರಯೋಗಗಳೊಂದಿಗೆ ತನ್ನ ಜೀವನವನ್ನು ಮತ್ತು ತನ್ಮೂಲಕ ಸಮಾಜವನ್ನು ಉನ್ನತ ಮಟ್ಟಕ್ಕೆ ಒಯ್ದು, ಸುಖಮಯ ಜೀವನ ರೂಪಿಸಿಕೊಳ್ಳಲು ಪಡೆಯುವ ಅನುಭವಗಳೇ ಶಿಕ್ಷಣ ಅಥವಾ ಜ್ಞಾನ ಎನಿಸಿಕೊಳ್ಳುತ್ತದೆ.

ಪ್ರಾಚೀನ ಭಾರತೀಯ ಶಿಕ್ಷಣ ಪದ್ಧತಿ ಮತ್ತು ಗುರುಕುಲ ಪರಂಪರೆಯ ಮಹತ್ವವನ್ನು ನಾವಿಂದು ಮರೆಯುತ್ತಿದ್ದೇವೆ. ಗುರುಕುಲ ಪದ್ಧತಿಯ ಶಿಕ್ಷಣ ಸ್ವಲ್ಪ ಮಟ್ಟಿಗೆ ಸ್ವಾವಲಂಬನೆ, ಪರಿಸರದೊಂದಿಗಿನ ಒಡನಾಟ, ಸಹಕಾರದಂತಹ ಗುಣಗಳನ್ನು ಕಲಿಸುತ್ತಿತ್ತು. ಪಠ್ಯಜ್ಞಾನದ ಜೊತೆಗೆ ಪಶುಸಂಗೋಪನೆ, ಬೇಸಾಯ, ತೋಟಗಾರಿಕೆ , ಹೈನುಗಾರಿಕೆ ಮುಂತಾದವುಗಳನ್ನು ಅಭ್ಯಸಿಸುತ್ತದೆ. ತನ್ನ ಊಟಕ್ಕಾಗಿ ಭಿಕ್ಷಾಟನೆ ಮಾಡಿ ತನ್ನಲ್ಲಿದ್ದ ಅಹಂಕಾರವನ್ನು ಕಳೆದುಕೊಂಡು ವಿನಯವಂತನಾಗುತ್ತಿದ್ದ. ಜ್ಞಾನಾರ್ಜನೆಯ ಜೊತೆ ಬದುಕುವ ಬಗೆಯನ್ನು ಕಲಿಸಲಾಗುತ್ತಿತ್ತು. ಬ್ರಿಟೀಷರು ಬಂದ ನಂತರ ಶಿಕ್ಷಣ ಸ್ವಾರ್ಥಮುಖಿಯಾಗಿ, ಅನುಕೂಲಕ್ಕಾಗಿ ಶಿಕ್ಷಣ ಎಂಬ ಧೋರಣೆ ಉಂಟಾಯಿತು. ಮನುಷ್ಯರ ಮಧ್ಯೆ ಪರಸ್ಪರ ತಿಳುವಳಿಕೆ, ಪ್ರೀತಿ, ವಿಶ್ವಾಸ, ಅನ್ಯೋನ್ಯತೆಗಳು ಮೂಡುವಂತಾಗಲು ಶಿಕ್ಷಣ ಅವಶ್ಯಕ. ಶಿಕ್ಷಣದ ಉನ್ನತ ಸ್ಥಿತಿಯೇ ವಿದ್ಯೆ. 'ವಿದ್ಯೆ' ಎಂಬ ಶಬ್ದ ಅಕ್ಷರಾಧ್ಯಯನ, ಓದು, ಬರಹ ಇತ್ಯಾದಿ ಪ್ರಕ್ರಿಯೆಗಳನ್ನೊಳಗೊಂಡ ಒಂದು ಪರಿಪೂರ್ಣ ಸ್ಥಿತಿಯನ್ನು ಧ್ವನಿಸುತ್ತದೆ. ಶಿಕ್ಷಣ ಪಡೆದುಕೊಂಡ ವ್ಯಕ್ತಿಗೆ ಲೋಕಜ್ಞಾನ ಮತ್ತು ಸ್ವಯಂ ಜ್ಞಾನಗಳಿಂದ ಬದುಕನ್ನು ಹಸನುಗೊಳಿಸುವುದಕ್ಕೆ ಸಹಕರಿಸುವಂತಿರಬೇಕು. ಇಂತಹ ಶಿಕ್ಷಣ ಹುಟ್ಟಿನಿಂದ, ವಂಶಪಾರಂಪರ್ಯವಾಗಿ ಬರುವಂತದ್ದಲ್ಲ. ಸತತ ಅಭ್ಯಾಸ, ನಿರಂತರ ಅನುಸಂಧಾನ, ಅವಿರತ ಶ್ರಮ ಮತ್ತು ಇಚ್ಛಾಶಕ್ತಿಯ ಮೂಲಕ ದೊರೆಯುತ್ತದೆ. ಅದಕ್ಕೆ ೧೨ನೇ ಶತಮಾನದ ಸೊನ್ನಲಿಗೆಯ ಸಿದ್ಧರಾಮ 'ವಿದ್ಯೆಯೆಂಬುದು ಅಭ್ಯಾಸಿಗನ ಕೈವಶ' ಎಂದಿದ್ದಾನೆ.

ಆಧುನಿಕ ಶಿಕ್ಷಣ ಕೇವಲ ಮಕ್ಕಳ ಮೆದುಳಿಗೆ ಮಾಹಿತಿಯನ್ನು ತುಂಬುತ್ತಿದಿಯೇ ವಿನಹ ಅವರೊಳಗಿರುವ ಆಸಕ್ತಿ, ಅಭಿರುಚಿ, ಯೋಗ್ಯತೆ, ಸಾಮರ್ಥ್ಯಗಳನ್ನು ಗುರುತಿಸಿ, ಪ್ರೋತ್ಸಾಹಿಸುವ ಕೆಲಸ ಮಾಡಲಿಲ್ಲ. ತ್ಯಾಗಕ್ಕಿಂತ ಭೋಗ ಸಂಸ್ಕೃತಿಯೇ ಬದುಕು ಎನ್ನುವುದನ್ನು ಕಲಿಸುತ್ತದೆ. ಪ್ರಾಚೀನ ಕಾಲದಲ್ಲಿ ಮಾನವನ ಅವಶ್ಯತೆಗಳು ಆಹಾರ, ರಕ್ಷಣೆ ಮತ್ತು ಉಡುಪುಗಳಿಗೆ ಮಾತ್ರ ಸೀಮಿತವಾಗಿದ್ದವು. ಸಮಾಜ ಅಭಿವೃದ್ಧಿಯಾದಂತೆಲ್ಲಾ ಮಾನವನ ಅವಶ್ಯಕತೆಗಳು ಹೆಚ್ಚಾದವು. ಅದಕ್ಕೆ ಹೊಂದಿಕೊಂಡಂತೆ ಚಲನಶೀಲತೆಯುಳ್ಳ ಶಿಕ್ಷಣ ಕ್ರಮ ಆಧುನಿಕ ಕಾಲದ ಆಯಾ ಕಾಲಘಟ್ಟದ ಅಗತ್ಯಗಳನ್ನು ಪೂರೈಸಲು ಪ್ರವಾಹದೋಪಾದಿಯಲ್ಲಿ ಸಾಗುತ್ತಿದೆ. ಇದು ಕೇವಲ ಸಂಪ್ರದಾಯಿಕ ಹಾಗೂ ಯಾಂತ್ರಿಕವಾದ ಬೋಧನಾ ಕಲಿಕಾ ಶೈಲಿಯಿಂದ ಸಮಾಜದಲ್ಲಿ ಜಡ ಸಂಸ್ಕೃತಿಯನ್ನು ಬೆಳೆಸಿತು. ಅಲ್ಲದೇ ಬರೀ ವ್ಯವಹಾರಿಕ ಶಿಕ್ಷಣ ಆಯಿತೇ ಹೊರೆತು, ಜೀವನ ಶಿಕ್ಷಣ ಆಗಲಿಲ್ಲ. ಶಿಕ್ಷಣವೆಂದರೆ ಕುಳಿತು ಕಲಿಯುವುದಲ್ಲ. ಚಟುವಟಿಕೆಯಿಂದ ಹೊಸ-ಹೊಸ ಅನುಭವ ಗಳಿಸುವುದೇ ನಿಜವಾದ ಶಿಕ್ಷಣ. ಅಂತಹ ಜ್ಞಾನ ಮಾತ್ರ ಬದುಕಲು ಕಲಿಸುತ್ತದೆ.

ಆದರೆ ಅಕ್ಷರಸ್ಥ ಜನರು ಶಿಕ್ಷಣದ ಲಾಭವನ್ನು ಪಡೆಯುತ್ತಾ ಸುಲಭವಾಗಿ ಹಣ ಮಾಡುವ ಮಾರ್ಗಕ್ಕೆ ಮುಂದಾಗಿ, ಬೆವರು ಸಂಸ್ಕೃತಿಯನ್ನೇ ಮರೆತರು. ಕೆಲಸ ಮಾಡದೆ ಬದುಕುವುದೇ ಒಂದು ಫ್ಯಾಷನ್ ಆಯಿತು. ಆದರೆ ಅನಕ್ಷರಸ್ಥರು ಸಮಾಜವನ್ನು ವಂಚಿಸದೆ ಪ್ರೀತಿಸುತ್ತಾ, ಕಾಯಕ ಸಂಸ್ಕೃತಿಯನ್ನು ಅಳವಡಿಸಿಕೊಂಡು ತಮಗೆ ತಮ್ಮ ಕುಟುಂಬ ವರ್ಗಕ್ಕೆ ಅನ್ನ ಸಂಪಾದಿಸುವುದು ಮಾತ್ರವಲ್ಲದೆ, ದೇಶಕ್ಕೆ ಅನ್ನ ನೀಡುತ್ತಾ ಬಂದಿದ್ದಾರೆ. ಇವರ ಚಿಂತನೆಗಳು ಯಾವಾಗಲೂ ಸಮಷ್ಠಿ ಬದುಕಿನತ್ತ ಇರುತ್ತದೆ. ಅಕ್ಷರ ಸಂಸ್ಕೃತಿಯಂತೆ ವೈಯಕ್ತಿಕ ಜವಾಬ್ದಾರಿಯಿಂದ ಕಳಚಿಕೊಳ್ಳುವ ಮತ್ತು ಜೀವನೋತ್ಸಾಹವಿಲ್ಲದ, ಮಾನವೀಯತೆ ಇಲ್ಲದ ಯಾಂತ್ರಿಕ ವಸ್ತುಗಳಂತೆ ಬೆಳೆಸುವುದಿಲ್ಲ. ಇದು ನಮ್ಮ ಇಂದಿನ ಶಿಕ್ಷಣದ ಗುಣಮಟ್ಟವನ್ನು ಸೂಚಿಸುತ್ತದೆ.

**೭.೧. ಶೈಕ್ಷಣಿಕ ಚಿಂತಕರ ದೃಷ್ಟಿಯಲ್ಲಿ ಶಿಕ್ಷಣ**

ಪ್ರಾಚೀನ ಭಾರತೀಯ ಶಿಕ್ಷಣ ಪರಂಪರೆ ಆದರ್ಶಗಳ ಬಗ್ಗೆ ಅಸಂಖ್ಯಾತ ಉಲ್ಲೇಖಗಳು ದೊರೆಯುತ್ತವೆ. ನಮ್ಮ ಪ್ರಾಚೀನರು ಶಬ್ದಶಾಸ್ತ್ರ ಪರಿಣತರೂ, ಪಂಡಿತರೂ, ವಿಷಯವನ್ನು ಸೈದ್ಧಾಂತಿಕವಾಗಿ 'ಇದಮಿತ್ಥಂ' ಎಂದು ಸ್ಪಷ್ಟಪಡಿಸುವ ಶಕ್ತಿಯುಳ್ಳವರೂ ಆಗಿದ್ದರು. ಅವರು ಪಾಶ್ಚಿಮಾತ್ಯ ವಿದ್ವಾಂಸರಿಗಿಂತ ಯಾವುದರಲ್ಲೂ ಕಡಿಮೆಯಾಗಿರಲಿಲ್ಲ. 'ಹಿತ್ತಲ ಗಿಡ ಮದ್ದಲ್ಲ' ಎಂಬಂತೆ ಅವರ ಶಕ್ತಿ ಸಾಮರ್ಥ್ಯಗಳನ್ನು ಅರ್ಥ ಮಾಡಿಕೊಳ್ಳದಿರುವುದು, ಗುರುತಿಸದಿರುವುದು ಶೋಚನೀಯ ಸಂಗತಿಯಾಗಿದೆ.

ವಿದ್ಯೆಯ ಮಹತ್ವವನ್ನು ಸಂಸ್ಕೃತ ಕವಿ ಭರ್ತೃಹರಿ 'ವಿದ್ಯಾದದಾತಿ ವಿನಯಂ, ವಿನಯಾದ್ಯಾತಿ ಪಾತ್ರತಾಂ', ವಿದ್ಯಾ ರಾಜಸು ಪೂಜ್ಯತೆ ನಹಿ ಧನಂ ವಿದ್ಯಾವಿಹೀನ; ಪಶುಹ ಎಂದು ಹೇಳಿದ್ದಾನೆ. ವಿದ್ಯೆಯಿಂದ ವಿನಯವೂ, ವಿನಯದಿಂದ ವ್ಯಕ್ತಿತ್ವವೂ, ಉತ್ತಮ ವ್ಯಕ್ತಿತ್ವದಿಂದ ಧರ್ಮಶ್ರದ್ಧೆ ಮತ್ತು ಸೌಖ್ಯವೂ ಮಾನವನಿಗೆ ಉಂಟಾಗುತ್ತದೆ. ಇಲ್ಲದಿದ್ದರೆ ವಿದ್ಯೆಯಿಲ್ಲದವನು ಪಶುವಿಗೆ ಸಮಾನವೆಂದು ಸ್ಪಷ್ಟವಾಗಿ ಹೇಳಿದ್ದಾನೆ.

ಶಿಕ್ಷಣ ಪದ ಭಾರತದಲ್ಲಿ ಯಾಜ್ಞವಲ್ಕ್ಯ, ಪಾಣಿನಿಯಿಂದ ಹಿಡಿದು ಗಾಂಧೀಜಿಯವರೆಗೆ, ಪಾಶ್ಚಿಮಾತ್ಯ ದೇಶಗಳಲ್ಲಿ ಸಾಕ್ರಟೀಸ್‌ನಿಂದ, ಜಾನ್‌ಡ್ಯೂಯಿವರೆಗೆ ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಲ್ಪಟ್ಟಿದೆ. ವೇದ ಕಾಲದ ಋಷಿಮುನಿಗಳು ಮಗುವು ತನ್ನ ಭಾವೀ ಜೀವನವನ್ನು ರೂಪಿಸಿಕೊಂಡು ಮುಕ್ತಿಯನ್ನು ಪಡೆಯುವುದೇ ಶಿಕ್ಷಣವೆಂದರೆ, ಜ್ಞಾನಕ್ಕೆ ಸಮಾನವಾದುದು, ಪವಿತ್ರವಾದುದು ಯಾವುದು ಇಲ್ಲ ಎಂದು ಭಗವದ್ಗೀತೆ ಹೇಳುತ್ತದೆ. ನಂತರದ ಯುಗದಲ್ಲಿ ಕೇವಲ ಮುಕ್ತಿ ಸಾಧನೆ, ಹೊಣೆಗಾರಿಕೆ, ಸಮಾಜ ಸುಧಾರಣೆ, ಪರಂಪರೆಯ ಮುಂದುವರಿಕೆ, ಸನಾತನ ಧರ್ಮ ಪಾಲನೆಯೇ ಶಿಕ್ಷಣ ಎಂದು ಅರ್ಥೈಸಲಾಯಿತು. ಮುಂದಿನ ಕಾಲಗಳಲ್ಲಿ ವಿವಿಧ ರೀತಿಯ ಕಸುಬುಗಳನ್ನು ಆಧರಿಸಿದ ಶಿಕ್ಷಣವನ್ನು ಮೊರೆ ಹೊಕ್ಕು ತನ್ನ ಜೀವನ ಶಿಕ್ಷಣ ಕ್ರಮವನ್ನು ಆರಂಭಿಸಿದನು, ಹೀಗೆ ಶಿಕ್ಷಣಕ್ಷೇತ್ರಕ್ಕೆ ಸಂಬಂಧಿಸಿದವರೆಲ್ಲರೂ ಶಿಕ್ಷಣಕ್ಕಾಗಿ ತಮಗಿರುವ ಆಸಕ್ತಿ, ನಿರೀಕ್ಷಣೆ ಮತ್ತು ಜೀವನದಲ್ಲಿ ತಾವು ಗಳಿಸಿದ ಅನುಭವಗಳ ಆಧಾರದ ಮೇಲೆ ಶಿಕ್ಷಣದ ಅರ್ಥವನ್ನು ವಿವರಿಸಲು ಪ್ರಯತ್ನಿಸಿದ್ದಾರೆ. ವ್ಯವಸಾಯ, ಕೈಗಾರಿಕೆ, ವಾಣಿಜ್ಯ, ವಿಜ್ಞಾನ ಹಾಗೂ ತಂತ್ರಜ್ಞಾನಕ್ಕೆ ಅವಶ್ಯಕವಾದ ಮಾನವ ಶಕ್ತಿಯನ್ನೊದಗಿಸುವುದು ಅರ್ಥಶಾಸ್ತ್ರಜ್ಞರ ಪ್ರಕಾರ ಶಿಕ್ಷಣವಾದರೆ, ವಿಶ್ವಶಾಂತಿ, ವಿಶ್ವಪ್ರೇಮ ಮತ್ತು ಪರಸ್ಪರರಲ್ಲಿ ಸೋದರ ಭಾವ, ಆತ್ಮೀಯತೆಯನ್ನು ಉಂಟುಮಾಡುವುದೇ ಶಿಕ್ಷಣವೆಂದು ತತ್ತ್ವಜ್ಞಾನಿಗಳು ಹೇಳುತ್ತಾರೆ. ಮಾನವನಿಗೆ ಸರಿಯಾದ ತಿಳುವಳಿಕೆ, ಅಭಿವ್ಯಕ್ತಿಗಳು ಮೂಡಿ ಸರಿಯಾದ ಸಮಯದಲ್ಲಿ, ಸರಿಯಾದ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸುವಂತೆ ಮಾಡುವುದೇ ಶಿಕ್ಷಣ ಎಂದು ಮನೋವಿಜ್ಞಾನಿಗಳು ಹೇಳುತ್ತಾರೆ. ಶಿಕ್ಷಣವು ಸಮಾಜದಲ್ಲಿ ರಚನಾತ್ಮಕತೆಯನ್ನು ಉಂಟುಮಾಡಿ, ವ್ಯಕ್ತಿಯ ಸರ್ವತೋಮುಖ ವಾದ ಬೆಳವಣಿಗೆಯನ್ನು ಉಂಟುಮಾಡುವಂತದ್ದಾಗಿದೆ ಎಂದರೆ ತಪ್ಪಾಗಲಾರದು.

ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಕೇವಲ ಅಕ್ಷರ ಜ್ಞಾನದಿಂದ ಮಾತ್ರ ವ್ಯಕ್ತಿಯ ಜೀವನ ಪರಿಪೂರ್ಣವಾಗಲಾರದು. ಅವನು ದೈಹಿಕ, ಮಾನಸಿಕ, ಸಾಮಾಜಿಕ, ನೈತಿಕ, ಮತ್ತು ಭಾವನಾತ್ಮಕ ಗುಣಧರ್ಮಗಳನ್ನೆಲ್ಲಾ ಹೊಂದಿ ಸಮನ್ವಯ ವ್ಯಕ್ತಿತ್ವ ಗಳಿಸಬೇಕು. ಶಿಕ್ಷಣವೆಂದರೆ ಕೇವಲ ಅಕ್ಷರ ಕಲಿಕೆಯಲ್ಲ. ಶಿಕ್ಷಣವು ಜೀವನದೊಂದಿಗೆ ವ್ಯಾಪಕತೆಯನ್ನು ಪಡೆದಿದೆ. ಜೀವನದಲ್ಲಿ ಅನುಭವಗಳು ಸಣ್ಣದಿರಲಿ, ದೊಡ್ಡದಿರಲಿ ಅವುಗಳಿಂದ ದೊರೆಯುವ ತಿಳುವಳಿಕೆ ನಮ್ಮ ವ್ಯಕ್ತಿತ್ವದ ಮೇಲೆ, ನಡತೆಯ ಮೇಲೆ ಪ್ರಭಾವ ಬೀರುತ್ತದೆ. ಅದಕ್ಕೆ ಶಿಕ್ಷಣಕ್ಕೂ, ಸಂಸ್ಕೃತಿಗೂ, ಬದುಕಿಗೂ ಅವಿನಾಭಾವ ಸಂಬಂಧವಿದೆ. ಭಾರತದಂತಹ ಸಾಂಸ್ಕೃತಿಕ ಜಗತ್ತಿನ ಅನೇಕ ಕಡೆಗಳಲ್ಲಿ ಅಕ್ಷರ ಕಲಿಸುವ ಶಿಕ್ಷಣ ಇರಲಿಕ್ಕಿಲ್ಲ. ಆದರೆ ಬದುಕನ್ನು ರೂಪಿಸಿಕೊಳ್ಳುವ ಶಿಕ್ಷಣವಿದೆ. ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಶಿಕ್ಷಣವಿದೆ. ಅಂತಹವರನ್ನು ಅನಕ್ಷರಸ್ಥರೆನ್ನಬಹುದೇ ಹೊರೆತು, ಅಶಿಕ್ಷಿತರೆಂದು, ಅಸಂಸ್ಕೃತರೆಂದು ಕರೆಯಲಾಗದು.

ಗಾಂಧೀಜಿ ಒಬ್ಬ ಶ್ರೇಷ್ಠ ಶಿಕ್ಷಣ ತಜ್ಞ, ಸ್ವಾತಂತ್ರ್ಯ ಪೂರ್ವದಲ್ಲಿಯೇ ನಮ್ಮ ದೇಶದಲ್ಲಿ ವ್ಯಕ್ತಿ, ಸಮಾಜ ಮತ್ತು ರಾಷ್ಟ್ರದ ಸಮಸ್ಯೆಗಳಿಗೆ ಸ್ಪಂದಿಸುವ ರಾಷ್ಟ್ರೀಯ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದರು. ಇವರ ಪ್ರಕಾರ ಶಿಕ್ಷಣವೆಂದರೆ 'ಮಗುವಿನಲ್ಲಿ ಗುಪ್ತವಾಗಿ ಅಡಕವಾಗಿರುವ ದೈಹಿಕ,

ಬೌದ್ಧಿಕ, ಮಾನಸಿಕ, ಸಾಮಾಜಿಕ, ಆಧ್ಯಾತ್ಮಿಕ ಉತ್ತಮಾಂಶಗಳನ್ನು ವಿಕಾಸ ಮಾಡುವುದಾಗಿದೆ.'[೧] ಇವರು ಬಸವಣ್ಣನವರ ಕಾಯಕ ಶಿಕ್ಷಣ ತತ್ವವನ್ನು ಹೋಲುವ ಮೂಲಭೂತ ಅಗತ್ಯತೆಗಳನ್ನು, ಸ್ವಾವಲಂಬಿಯಾಗಿ ಪಡೆಯುವ ಮೂಲ ಶಿಕ್ಷಣವನ್ನು ಪ್ರತಿಪಾದಿಸಿದ್ದಾರೆ.

ಗಾಂಧೀಜಿಯ ಮೂಲಶಿಕ್ಷಣದ ಉದ್ದೇಶ ಉತ್ತಮ ವ್ಯಕ್ತಿಗಳನ್ನು ಸೃಷ್ಟಿಸುವುದು ಮಾತ್ರವಲ್ಲ. ಸಮಾಜದಲ್ಲಿ ತಮ್ಮ ಸ್ಥಾನಗಳನ್ನು ಅರಿತು ಕರ್ತವ್ಯ, ಹೊಣೆಗಳನ್ನು ನಿರ್ವಹಿಸುವಂತಹ, ಸಮಾಜದ ಪ್ರಗತಿಯಲ್ಲಿ ಆಸಕ್ತಿ ಇರುವ, ಸಮಾಜೀಕೃತ ವ್ಯಕ್ತಿಗಳನ್ನಾಗಿ ಪರಿವರ್ತಿಸುವುದಾಗಿದೆ. ಶಿಕ್ಷಣವನ್ನು ನಾಲ್ಕು ಗೋಡೆಗಳ ಮಧ್ಯೆ, ಮಕ್ಕಳನ್ನು ಬಲವಂತವಾಗಿ ಸೆರೆಹಿಡಿದು, ಶಬ್ದಗಳ ಮೂಲಕ ಒದಗಿಸದೆ, ಕಾರ್ಯತಃ ಮನನಮಾಡಿಕೊಳ್ಳುವ, ಭಾಗವಹಿಸುವ, ಪ್ರಶ್ನೆ–ಉಪಪ್ರಶ್ನೆಗಳ ಮೂಲಕ ಬೋಧಿಸುವ, ಗೋಡೆಗಳ ಹೊರಗಡೆಯೇ ಒದಗಿಸಲಾಗುತ್ತದೆ. ಈ ಶಿಕ್ಷಣ ಮಕ್ಕಳಲ್ಲಿ ಸಾಮೂಹಿಕ ಶಕ್ತಿಯನ್ನು, ಐಕ್ಯತೆಯನ್ನು, ಶಿಸ್ತನ್ನೂ ಮೊಳೆಯುವಂತೆ ಮಾಡುತ್ತದೆ. ಹೀಗೆ ದೈಹಿಕವಾಗಿ, ಮಾನಸಿಕವಾಗಿ ಭಾಗವಹಿಸುವಿಕೆ ನಮ್ಮ ಇಂದಿನ ಶಿಕ್ಷಣದಲ್ಲಿ ಕಾಣುವುದಿಲ್ಲ. ಶಿಕ್ಷಣದ ಮೂಲಗುರಿಯೇ ಮನುಷ್ಯನ ಅಂತಸ್ಸತ್ವಗಳನ್ನು ಚೇತನಾತ್ಮಕಗೊಳಿಸುವುದಾಗಿದೆ. ಮೂಲಶಿಕ್ಷಣವು ಈ ಉದ್ದೇಶವನ್ನು ಸಾಧಿಸಲು ಕೈಕಸುಬಿನ ಸಹಾಯ ಪಡೆಯುತ್ತದೆ. ಕೈಕಸುಬುಗಳ ಜ್ಞಾನ ಕೇವಲ ತಾತ್ವಿಕ ರೂಪದ್ದಾಗಿರದೆ, ಆಚರಣಾ ರೂಪದ್ದಾಗಿರಬೇಕು. ಸಂಗ್ರಹಿಸಿದ ಜ್ಞಾನವನ್ನು ಸಮರ್ಪಕವಾಗಿ ಆಚರಣೆಗೆ ತರುವುದೇ ಕ್ರಿಯಾತ್ಮಕ ಶಿಕ್ಷಣದ ಉದ್ದೇಶವಾಗಿದೆ. ವಿದ್ಯಾರ್ಥಿ ನಿಪುಣತೆಯಿಂದ ತಯಾರಿಸುವ ವಸ್ತುಗಳು ಆರ್ಥಿಕ ಮೌಲ್ಯವನ್ನು ಹೊಂದಿರಬೇಕು. ಸ್ವಾವಲಂಬನಾ ಶಿಕ್ಷಣವು ವಿದ್ಯಾರ್ಥಿಗೆ ತನ್ನಲ್ಲಿನ ಶಕ್ತಿಗಳ ಪೂರ್ಣ ಪ್ರಯೋಜನ ಪಡೆಯಲು ತರಬೇತಿಯನ್ನು ಕೊಡಬೇಕು. ಇಷ್ಟಿದ್ದರೂ, ಈ ಶಿಕ್ಷಣದ ಬಗ್ಗೆ ಜನತೆಗೆ ವಿಶ್ವಾಸ ಮೂಡಿದಂತೆ ಕಂಡುಬರುವುದಿಲ್ಲ. ಬ್ರಿಟೀಷ್ ಸರ್ಕಾರ ಮೂಲಶಿಕ್ಷಣಕ್ಕೆ ತಗಲುವ ವೆಚ್ಚವನ್ನು ಭರಿಸಲು ಸಿದ್ಧವಿರಲಿಲ್ಲ. ದೇಶಿ ಸರ್ಕಾರಗಳು ಸ್ಥಾಪಿತವಾದ ಮೇಲೂ ಈ ಸ್ವಾವಲಂಬನಾ ಮೂಲಶಿಕ್ಷಣ ಯಶಸ್ವಿಯಾಗಿಲ್ಲ. ದೇಶಿ ವಿವೇಕ ಚಿಂತನೆಯು ಶಿಕ್ಷಣದ ದಾರಿಗೆ ಹೊರಳಿಕೊಳ್ಳಲೇ ಇಲ್ಲ. ಹೀಗಾಗಿ ವಿವೇಕವನ್ನು ನೀಡಬೇಕಾಗಿದ್ದ ಶಿಕ್ಷಣ, ಅಕ್ಷರ ಕಲಿಕೆಗೆ ಸೀಮಿತವಾಗಿ, ಕಲಿತ ಅಕ್ಷರಗಳಿಂದ ಮಾಹಿತಿಗಳನ್ನು ಸಂಗ್ರಹಿಸಲು ಸೀಮಿತಗೊಂಡು ಕುಬ್ಜವಾಯಿತು.

ವ್ಯಕ್ತಿಯ ಸರ್ವತೋಮುಖ ಬೆಳವಣಿಗೆ ಎಂದರೆ, ದೈಹಿಕ, ಮಾನಸಿಕ ಮತ್ತು ನೈತಿಕ ಬೆಳವಣಿಗೆ ಎಂದರ್ಥ. ಪ್ರಾಚೀನ ಕಾಲದ ಶಿಕ್ಷಣದಲ್ಲಿ ಬ್ರಹ್ಮಚರ್ಯಕ್ಕೆ ಪ್ರಾಮುಖ್ಯತೆ ನೀಡುತ್ತಿದ್ದುದನ್ನು ಈ ಹಿಂದೆ ನೋಡಿದ್ದೇವೆ. ಜೀವನದಲ್ಲಿ ಉತ್ತಮವಾದ ಆರೋಗ್ಯ ಕೂಡ ಅತಿ ಮುಖ್ಯ. ಅದಕ್ಕೆ ಬೌದ್ಧಿಕ ಮತ್ತು ದೈಹಿಕ ಶಿಕ್ಷಣಗಳು ಒಂದಕ್ಕೊಂದು ಅವಲಂಬಿತವಾಗಿವೆ. ಆದ್ದರಿಂದ ದೈಹಿಕ ಬೆಳವಣಿಗೆಯ ಜೊತೆಗೆ ಬೌದ್ಧಿಕ ಬೆಳವಣಿಗೆ ಉಂಟಾಗಿರುವುದನ್ನು ಕಾಣುತ್ತೇವೆ. ಗ್ರೀಸ್‌ನ ತತ್ತ್ವಜ್ಞಾನಿಗಳಾದ ಪ್ಲೇಟೋ, ಅರಿಸ್ಟಾಟಲ್ ಕೂಡ ಮಗುವಿನ ಕಲಿಕೆಯ ಪ್ರಾರಂಭದಿಂದಲೇ ದೈಹಿಕ ಶಿಕ್ಷಣ ಇರಬೇಕೆಂದಿದ್ದಾರೆ. 'ಅರಿಸ್ಟಾಟಲ್' ಪ್ರಕಾರ ಶಿಕ್ಷಣವೆಂದರೆ, 'ಆರೋಗ್ಯಕರ ದೇಹದಲ್ಲಿ, ಆರೋಗ್ಯಕರವಾದ ಮನಸ್ಸನ್ನು ಸೃಷ್ಟಿಸುವುದಾಗಿದೆ.'[೨] ಇಲ್ಲಿ ದೈಹಿಕ ಆರೋಗ್ಯಕ್ಕೆ ಪ್ರಾಮುಖ್ಯತೆ ನೀಡಿದಂತೆ, ಮಾನಸಿಕ ಆರೋಗ್ಯಕ್ಕೂ

ಪ್ರಾಮುಖ್ಯತೆ ನೀಡಿದೆ. ಹೊರಗಿನ ಬಲವಾದ ಒತ್ತಡಗಳಿಂದ ಶಿಕ್ಷಣವನ್ನು ಹೇರುವ ಬದಲು ವ್ಯಕ್ತಿಯ ವ್ಯಕ್ತಿತ್ವವು ಆಂತರ್ಯದಿಂದಲೇ ವಿಕಾಸಗೊಳ್ಳುವಂತಾಗಬೇಕು. ಸಾಮಾಜಿಕ ಹಿತದೃಷ್ಟಿಯಿಂದ ಮಗುವು ಸಹಜ ಹುಟ್ಟಿನಿಂದಲೇ ಪಡೆದ ಶಕ್ತಿ ಸಾಮರ್ಥ್ಯ ಹಾಗೂ ಯೋಗ್ಯತೆಗಳನ್ನು ವಾಸ್ತವಿಕ ರೀತಿಯಲ್ಲಿ ಬೆಳೆಸಲು ಶಿಕ್ಷಣವು ಸಹಾಯ ಮಾಡುತ್ತದೆ. ಇಂತಹ ಅರಿವು ಜೀವನದ ಎಲ್ಲಾ ಕ್ಷೇತ್ರಗಳಿಗೆ ಅನ್ವಯಿಸಿ ನಿರ್ದಿಷ್ಟ ರೂಪದ ಮಾರ್ಗದರ್ಶನ ನೀಡುತ್ತದೆ.

ಜ್ಞಾನಕ್ಕೆ ಪವಿತ್ರಗೊಳಿಸುವ ಶಕ್ತಿಯಿದೆ ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಜ್ಞಾನದ ಕಡೆ ತೀವ್ರ ಒಲವಿದ್ದರೆ ಮನಸ್ಸು, ಕೀಳು ವಿಚಾರಗಳ ಕಡೆ ಹರಿಯುವುದಿಲ್ಲ. ಇದು ಉತ್ತಮ, ಪವಿತ್ರ ಜೀವನ ನಡೆಸಲು ಸಹಾಯಕವಾಗುತ್ತದೆ. ವಿವೇಕಾನಂದರ ಶಿಕ್ಷಣದ ಉದ್ದೇಶ, ಅದರ ಪ್ರಕ್ರಿಯೆ, ಅದು ಉಂಟು ಮಾಡಬೇಕಾಗಿರುವ ಪರಿಣಾಮಗಳ ಬಗ್ಗೆ ನಡೆಸಿದ ಚಿಂತನೆಗಳು ಆ ಕಾಲಕ್ಕೆ ಮಾತ್ರವಲ್ಲ, ಇಂದಿಗೂ ಮುಖ್ಯವಾಗುತ್ತವೆ. 'ವಿದ್ಯಾಭ್ಯಾಸವೆಂದರೆ ತಲೆಯಲ್ಲಿ ತುಂಬಿಕೊಂಡ ವಿಷಯಗಳ ಮೊತ್ತವಲ್ಲ. ಅದು ಅಲ್ಲಿ ಒಂದಿನಿತೂ ಜೀರ್ಣವಾಗದೇ ದಿಕ್ಕುಗೆಟ್ಟು ಓಡುತ್ತಿರುವುದು. ಜೀವನವನ್ನು ಕಟ್ಟುವಂತಹ, ಪುರುಷಸಿಂಹರನ್ನು ಸೃಷ್ಟಿಸುವಂತಹ, ಶೀಲ ಸಂಪತ್ತನ್ನು ನಿರ್ಮಾಣ ಮಾಡುವಂತಹ ವಿಚಾರಗಳನ್ನು ಗ್ರಹಿಸುವಂತಹ ವಿದ್ಯಾಭ್ಯಾಸ ನಮಗೆ ಬೇಕು'[೩] ಎನ್ನುತ್ತಾರೆ. ಆದರೆ ಕೇವಲ ಮಾಹಿತಿ ಸಂಗ್ರಹಿಸಿ, ಅದನ್ನು ಮೆದುಳಿಗೆ ತುಂಬುವುದು ನಮ್ಮ ಇಂದಿನ ಶಿಕ್ಷಣದ ಆದ್ಯತೆಯಾಗಿದೆ. ಒತ್ತಡದಿಂದ ತುಂಬಿಕೊಂಡ ಮಾಹಿತಿಗಳು ವ್ಯಕ್ತಿಯ ಕಲಿಕೆಯಲ್ಲಿ ನಿರುತ್ಸಾಹವನ್ನು ಮೂಡಿಸುತ್ತಿದೆ. ಯಾವ ಶಿಕ್ಷಣವನ್ನು ಪಡೆಯುವುದರಿಂದ ವ್ಯಕ್ತಿ ತನ್ನ ಜೀವನವನ್ನು ತಾನೇ ಕಟ್ಟಿಕೊಳ್ಳಬಹುದೊ, ಸಾಧನೆಯ ಪಥದಲ್ಲಿ ಸಾಹಸಿಕರನ್ನಾಗಿಸಬಹುದಿತ್ತೋ ಅಂತಹ ಶಿಕ್ಷಣ ಇಂದು ಕೇವಲ ಪ್ರಮಾಣ ಪತ್ರಗಳನ್ನು ಹೊಂದಿರುವ, ನಿರುಪಯುಕ್ತ, ವಿವೇಚನಾ ರಹಿತ ಪದವಿಧರರನ್ನು ತಯಾರಿಸುತ್ತಲೇ ಇದೆ. ಅಲ್ಲದೆ ಸಣ್ಣ ಪುಟ್ಟ ಸಮಸ್ಯೆಗಳನ್ನು ಎದುರಿಸಲಾರದಷ್ಟು ಅಶಕ್ತರಾದ, ಆತ್ಮವಿಶ್ವಾಸವನ್ನು ಕಳೆದುಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ನಿದರ್ಶನಗಳು ನಮ್ಮ ಕಣ್ಣು ಮುಂದಿವೆ. ಇನ್ನೊಂದೆಡೆ 'ವಿದ್ಯಾಭ್ಯಾಸವೆಂದರೆ ಮಾನವನಲ್ಲಿ ಈಗಾಗಲೇ ಸುಪ್ತವಾಗಿರುವ ಪರಿಪೂರ್ಣತೆಯನ್ನು ಪ್ರಕಾಶಪಡಿಸುವುದು' ಎಂದಿದೆ. ಪರಿಪೂರ್ಣತೆಯ ಸ್ವರೂಪದ ಜ್ಞಾನ ಈಗಾಗಲೇ ವ್ಯಕ್ತಿಯಲ್ಲಿ ಅಡಕವಾಗಿದೆ. ಈ ಜ್ಞಾನವು ವ್ಯಕ್ತಿಯಲ್ಲಿ ಅನುಭವವಾಗಿ ಪ್ರಕಟಗೊಳ್ಳುವಂತೆ ಮಾಡಬೇಕಾದದ್ದು ಶಿಕ್ಷಣ. ಕಲಿಕೆ ನಡೆಯುವುದೇ ಸುಪ್ತವಾಗಿರುವ ಸಾಮರ್ಥ್ಯದ ಅಭಿವ್ಯಕ್ತಿಗಾಗಿ. ನಿಜವಾದ ಕಲಿಕೆ ಎಂದರೆ ತನ್ನನ್ನು ತಾನು ಕಂಡುಕೊಳ್ಳುವುದು. ನಮ್ಮ ಅರಿವಿಗೆ ಮುಸುಕಿರುವ ತೆರೆಯನ್ನು ಕಳಚುವುದಾಗಿದೆ. ಹೀಗೆ ಪ್ರಕಟಗೊಳ್ಳುವ ಜ್ಞಾನಕ್ಕೆ ಯಾವುದೇ ತಡೆಗಳಿರುವುದಿಲ್ಲ. ಎಲ್ಲವನ್ನು ಮೀರುವ ಸಾಮರ್ಥ್ಯ ಈ ಶಿಕ್ಷಣಕ್ಕಿರುತ್ತದೆ.

ಶಿಕ್ಷಣ ಪ್ರಕ್ರಿಯೆಯೊಳಗೆ ಒಳಪಟ್ಟ ವ್ಯಕ್ತಿಗಳು ವಿವೇಕಿಗಳಾಗಿ, ಚಾರಿತ್ರ್ಯವಂತರಾಗಿ ಹೊರ ಬರಬೇಕಾಗಿತ್ತು. ಆದರೆ ಆ ವ್ಯಕ್ತಿ ಕನಿಷ್ಠ ಸಜ್ಜನಿಕೆ, ಜೀವನ ಮೌಲ್ಯಗಳನ್ನು ಹೊಂದಿಲ್ಲವೆಂದಾದರೆ, ಜವಾಬ್ದಾರಿಯುತ ಪ್ರಜೆಗಳಾಗಿ ರೂಪುಗೊಳ್ಳುತ್ತಿಲ್ಲವಾದರೆ ಇದು ನಮ್ಮ ಶಿಕ್ಷಣ ವ್ಯವಸ್ಥೆಯ ದೋಷವೇ

ಸರಿ. ಕೇವಲ ಬಾಹ್ಯ ನೋಟವನ್ನು ಉತ್ತಮಗೊಳಿಸುವುದಷ್ಟೇ ಶಿಕ್ಷಣದ ಗುಣಮಟ್ಟವಲ್ಲ. ಶಿಕ್ಷಿತ ಜನರನ್ನು ಶೀಲವಂತರನ್ನಾಗಿ, ಚಾರಿತ್ರ್ಯವಂತರನ್ನಾಗಿ ರೂಪಿಸಬೇಕೆಂಬ ವೇದಾಂತದ ಆಶಯವೇ, ವಿವೇಕಾನಂದರ ಅಭಿಪ್ರಾಯವಾಗಿದೆ.

ಡಾ. ಸರ್ವಪಲ್ಲಿ ರಾಧಾಕೃಷ್ಣನ್ನರು ಶಿಕ್ಷಣದ ಕುರಿತು 'ಅಕ್ಷರ ಜ್ಞಾನವಷ್ಟೇ ಶಿಕ್ಷಣವಲ್ಲ. ಆದರೆ ಜಾಣ್ಮೆಯ ಬೆಳವಣಿಗೆಗೆ ಇನ್ನಿತರ ವಸ್ತು ವಿಷಯಗಳನ್ನು ಕರುಣೆ, ಅನುಕಂಪಪೂರ್ಣವಾಗಿ ನೋಡುವುದನ್ನು ಕಲಿಯಬೇಕು. ಅದು ತುಂಬಾ ಅವಶ್ಯವಾದುದು'[೪] ಎಂದು ಹೇಳಿದ್ದಾರೆ. ವ್ಯಕ್ತಿಯನ್ನು ಮನುಷ್ಯನನ್ನಾಗಿಸುವ, ಸಮಾಜ ಜೀವಿಯನ್ನಾಗಿಸುವ, ಸ್ವಂತಿಕೆಯನ್ನು ಪಡೆದು ಸ್ವಾವಲಂಬಿಯನ್ನಾಗಿಸುವ ಶಿಕ್ಷಣದ ಅವಶ್ಯಕತೆಯಿದೆ. ಯಾವ ಶಿಕ್ಷಣದ ಮೂಲಕ ಇಚ್ಛಾಶಕ್ತಿಯ ವೇಗ, ಸ್ಫೂರ್ತಿಗಳು ಆತ್ಮಕ್ಕೆ ಅಧೀನವಾಗಿ ಫಲಿಸುತ್ತದೆಯೋ ಅದೇ ಶಿಕ್ಷಣ ಎನಿಸುತ್ತದೆ. ಈ ಹಿನ್ನಲೆಯಲ್ಲಿ ಮನುಷ್ಯನನ್ನು ಯಂತ್ರವಾಗಿಸುವ ಶಿಕ್ಷಣದ ಅವಶ್ಯಕತೆ ಇಲ್ಲ. ಇವತ್ತು ನಮ್ಮ ಶಿಕ್ಷಣ ಸಮಾಜ ವಿಮುಖವಾಗಿದೆ. ಜೀವನದಿಂದ ದೂರವಾಗಿದೆ. ನಾಲ್ಕು ಗೋಡೆಯೊಳಗೆ ಔಪಚಾರಿಕ ವಾತಾವರಣದಲ್ಲಿ, ಗುರುಗಳಿಂದ ಕಲಿತದ್ದಷ್ಟೇ ಶಿಕ್ಷಣವೆಂದೆನಿಸಿದೆ. ವ್ಯಕ್ತಿಯ ಮೆದುಳಿಗೆ ಸ್ಮರಣಶಕ್ತಿ ಬಿಟ್ಟರೆ ಬೇರೆ ಕ್ರಿಯಾವ್ಯಾಪಾರಗಳೇ ಇಲ್ಲ ಎಂಬುದು ನಮ್ಮ ತಿಳುವಳಿಕೆಯಾಗಿದೆ. ಶಿಕ್ಷಕ ಬೋಧಿಸಿದ್ದನ್ನು ಹೆಚ್ಚು ಹೆಚ್ಚಾಗಿ ನೆನಪಿಟ್ಟುಕೊಂಡು ವರ್ಷಾಂತ್ಯದಲ್ಲಿ ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ಪಡೆದ ವಿದ್ಯಾರ್ಥಿಯನ್ನು ಮೇಧಾವಿ ಎಂಬುದು ನಮ್ಮ ಶಿಕ್ಷಣ ತತ್ತ್ವವಾಗಿದೆ. ಕಲಿತ ಸಿದ್ಧಾಂತವನ್ನು ಬೇರೊಂದು ಸನ್ನಿವೇಶಕ್ಕೆ ಅನ್ವಯಿಸುವ ಸಾಮರ್ಥ್ಯ, ಹೋಲಿಕೆ ವ್ಯತ್ಯಾಸಗಳ ಪರಿಕಲ್ಪನೆ, ಸ್ವತಂತ್ರ ತೀರ್ಮಾನಕ್ಕೆ ಬರುವ ಸ್ವೋಪಜ್ಞತೆ, ಸೃಜನಶೀಲತೆ, ಮೌಲ್ಯನಿಷ್ಕರ್ಷ, ಸಮಾಜನಿಷ್ಠೆ ಇತ್ಯಾದಿ ಇದ್ಯಾವುದಕ್ಕೂ ಇಲ್ಲಿ ಆಸ್ಪದವಿಲ್ಲ. ಬದ್ಧತೆಯುಳ್ಳ ವ್ಯಕ್ತಿಗಳನ್ನು ಸೃಷ್ಟಿಸಲಾಗುತ್ತಿಲ್ಲ ಎಂಬುದು, ಶಿಕ್ಷಿತರನ್ನು ಆತ್ಮವಿಮರ್ಶೆಗೆ ಹಚ್ಚುತ್ತದೆ.

ರವೀಂದ್ರನಾಥ ಠಾಗೋರ್ 'ಆತ್ಮಪ್ರಕಾಶ ಮತ್ತು ಅಂತಃಕರಣಗಳೆಂಬ ಸ್ಥಿರ ಸಂಪತ್ತನ್ನು ತಂದುಕೊಡುವ ಮೂಲಭೂತ ಸತ್ಯವನ್ನು ಕಂಡು ಹಿಡಿಯಲು ಮನಸ್ಸನ್ನು ತರಬೇತಿಗೊಳಿಸುವುದೇ ಶಿಕ್ಷಣ'[೫] ಎನ್ನುತ್ತಾರೆ. ಅಲ್ಲದೆ ಅವರು ವಸಾಹತುಶಾಹಿ ಇಂಗ್ಲೀಷ್ ಶಿಕ್ಷಣ ಭಾರತೀಯರನ್ನು ಪರಕೀಯಗೊಳಿಸಿದ್ದಲ್ಲದೆ, ಕಲಿತವರು ಮತ್ತು ಕಲಿಯದವರು ಎನ್ನುವ ನೂತನ ವರ್ಗ ವ್ಯವಸ್ಥೆಯೊಂದನ್ನು ಹುಟ್ಟಿಸಿದೆ ಎನ್ನುತ್ತಾರೆ. ಇದು ಒಂದು ಬಗೆಯ ನಿರ್ದಿಷ್ಟ ಶಿಕ್ಷಣ. ಈ ಶಿಕ್ಷಣಕ್ಕೆ ಒಂದು ಹುದ್ದೆ. ಇಂತಹ ಸರಳ ಚಿಂತನೆಗಳನ್ನು ನಿರಾಕರಿಸಿದ್ದಾರೆ. ಭಾರತೀಯರ ಅನೈಕ್ಯತೆಯ(ಒಳಜಗಳ)ನ್ನು ಬಂಡವಾಳವನ್ನಾಗಿ ಮಾಡಿಕೊಂಡ ಪರಕೀಯರು, ತಮ್ಮ ಅನುಕೂಲಕ್ಕಾಗಿ ಭಾರತೀಯರ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅವಕಾಶ ಗಿಟ್ಟಿಸಿಕೊಂಡರು. ಅದಕ್ಕಾಗಿ ಇಂಗ್ಲೀಷ್ ಶಿಕ್ಷಣವನ್ನು ಅಸ್ತ್ರವನ್ನಾಗಿ ಬಳಸಿಕೊಂಡರು. ಇಂಗ್ಲೀಷ್ ಶಿಕ್ಷಣ ಭಾರತೀಯರ ಸೃಜನಾತ್ಮಕ ಕ್ರಿಯೆಗಳನ್ನು ಅಲ್ಲಗಳೆದು, ಅವರನ್ನು ನಿಷ್ಕ್ರೀಯಗೊಳಿಸಿತು. ಭಾರತೀಯರ ಭಾಷೆ, ಸಂಸ್ಕೃತಿಯನ್ನು ನಿರ್ಲಕ್ಷ ಮಾಡಿತ್ತು. ಇಂದಿಗೂ ಇಂಗ್ಲೀಷ್ ಭಾಷೆ ಸಂಪೂರ್ಣವಾಗಿ, ಯಾವೊಂದು ಸಮುದಾಯದ ಭಾಷೆಯಾಗಿ ಸೇರಿಕೊಂಡಿಲ್ಲ. ಆದರೆ ಕೆಲವೊಂದು ಪದಗಳು ನಮ್ಮ ಭಾಷೆಯೊಂದಿಗೆ ಸೇರ್ಪಡೆಗೊಂಡು ಬಳಕೆಗೊಳ್ಳುತ್ತವೆ. ಆದರೆ ಭಾರತದ

ಜನಜೀವನದಲ್ಲಿ ಒಂದು ಸಾಂಸ್ಕೃತಿಕ ವಿದ್ಯಮಾನವಾಗಿ ಬೆರೆತುಕೊಂಡಿಲ್ಲ. ವೈಜ್ಞಾನಿಕವಾಗಿ, ಆಧುನಿಕತೆಯ ಸೂಚಕವಾಗಿ, ಭಾರತವನ್ನು ಪ್ರತಿನಿಧಿಸುವ ಮಾನದಂಡವಾಗಿ ಗುರುತಿಸಿಕೊಂಡಿದೆ. ಒಟ್ಟಿನಲ್ಲಿ ಪರಭಾಷೆ ಮತ್ತು ಅದರ ಪಠ್ಯದಿಂದ ಕಲಿಸಲಾಗುವ ಶಿಕ್ಷಣ ಬಹುಸಂಖ್ಯಾತರ ಶೈಕ್ಷಣಿಕ, ಔದ್ಯೋಗಿಕ ಆಶೋತ್ತರಗಳನ್ನು ನೆರವೇರಿಸಿದರೂ, ಸ್ಥಳೀಯ ಭಾಷೆ, ಪರಿಸರ, ಸಾಹಿತ್ಯ, ಸಂಸ್ಕೃತಿಗೆ ಪರಕೀಯನನ್ನಾಗಿಸುತ್ತಿದೆ.

ಅರವಿಂದ ಘೋಷ್ ರವರು 'ಆತ್ಮವಿಕಾಸಕ್ಕಾಗಿ ಶಿಕ್ಷಣ' ಎಂದು ಹೇಳುತ್ತಾ, ಬ್ರಹ್ಮಚರ್ಯೆ ಅತ್ಯಾವಶ್ಯಕವಾದುದೆಂದು ಹೇಳುತ್ತಾರೆ. ಶರೀರ ಶಕ್ತಿಯನ್ನು ಆಧ್ಯಾತ್ಮಿಕ ಶಕ್ತಿಯಾಗಿ ಪರಿವರ್ತಿಸಲು ಬ್ರಹ್ಮಚರ್ಯವೇ ಸಾಧನವಾಗಿದೆ. ಆಧ್ಯಾತ್ಮಿಕ ವಿಕಾಸವೇ ಜೀವನದ ಉದ್ದೇಶವಾಗಿದೆ. 'ನಿಜವಾದ ಮತ್ತು ಜೀವಂತವಾದ ಶಿಕ್ಷಣವು ಆಧ್ಯಾತ್ಮಿಕ ವಿಕಾಸಕ್ಕೆ ಕಾರಣವಾಗಬೇಕು. ಪ್ರತಿಯೊಬ್ಬ ವ್ಯಕ್ತಿಯು ಆಧ್ಯಾತ್ಮಿಕ ವಿಕಾಸ ಸಾಧಿಸಬಲ್ಲವನಾದರೂ, ಆತನಿಗೆ ತಂದೆ ತಾಯಿಗಳ, ಶಿಕ್ಷಕರ ಮಾರ್ಗದರ್ಶನದ ಅಗತ್ಯವಿದೆ. ಇವರ ಮಾರ್ಗದರ್ಶನ ಅಜ್ಞಾತದಿಂದ, ಜ್ಞಾತದೆಡೆಗೆ ಸಾಗುವಂತಿರಬೇಕು'[೬] ಎಂಬುದನ್ನು ಹೇಳಿದ್ದಾರೆ. ಇದು ಇಂದಿನ ಶಿಕ್ಷಣದ ಬೋಧನಾ ತತ್ತ್ವವಾಗಬೇಕಿದೆ. ಇಲ್ಲದಿದ್ದರೆ ಕನಸುಗಳೇ ಇಲ್ಲದ, ಧ್ಯೇಯವೇ ಇಲ್ಲದ ಶಿಕ್ಷಣ ಹೆಚ್ಚು ಗುಲಾಮಿ ಮನಸ್ಥಿತಿಯನ್ನು ಬೆಳೆಸುವುದರಲ್ಲಿ ತೃಪ್ತಿಹೊಂದುತ್ತದೆ. ಆತ್ಮಜ್ಞಾನದಿಂದ ಅಪರಿಮಿತ ಬಲವನ್ನು ಪಡೆಯಬೇಕಾಗಿದ್ದ ವ್ಯಕ್ತಿ, ಅರಿವಿನ ಕೊರೆತೆಯಿಂದ ಅಜ್ಞಾನಿಯಾಗಿಯೇ ಉಳಿಯುವಂತಾಗಿದೆ. ಇದರ ಜೊತೆಗೆ ಅಕ್ಷರಸ್ಥ ಅಪರಾಧಿಗಳ ಸಂಖ್ಯೆಯೂ ಹೆಚ್ಚುತ್ತಿದೆ. ಸಮಾಜದ ಕಷ್ಟಗಳಿಗೆ ಸ್ಪಂದಿಸಬೇಕಾಗಿದ್ದ ಈ ತಲೆಮಾರು ದೊಂಬಿ, ಗಲಭೆಗಳಲ್ಲಿ ಕ್ರಿಯಾಶೀಲಗೊಂಡು ದೇಶವನ್ನೇ ಒಡೆಯುವ ಮನಸ್ಥಿತಿಯವನಾಗಿದ್ದಾನೆ. ಆದ್ದರಿಂದ ಹೊರಗಿನಿಂದ ನಾವು ಮಾಡುವ ಸುಧಾರಣೆಗಳು, ಬೋಧನೆಗಳು ಫಲ ನೀಡಲಾರವು. ಒಳಗೆ ಏನು ಇಲ್ಲದೆ ಹೊರಗೆ ರೂಪಿಸುವುದು ವ್ಯರ್ಥ ಪ್ರಯತ್ನವಾಗುತ್ತದೆ. ವ್ಯಕ್ತಿಯ ವ್ಯಕ್ತಿತ್ವದ ವಿಕಸನವೇ ಅರಿವಿನ ವಿಕಾಸವೂ ಆಗಬಲ್ಲದು.

ಜಾಕೀರ್ ಹುಸೇನ್ ಮೂಲತಃ ಅರ್ಥಶಾಸ್ತ್ರಜ್ಞನಾಗಿರುವುದರಿಂದ ಶಿಕ್ಷಣಕ್ಕೆ ಒಂದು ರಾಷ್ಟ್ರೀಯ ಉದ್ದೇಶವಿರಬೇಕೆಂದಿದ್ದಾನೆ. ಒಂದು ದೇಶದ ಆರ್ಥಿಕ ಗುಣಮಟ್ಟ ಆ ದೇಶದ ಜೀವನ ಗುಣಮಟ್ಟವನ್ನು ನಿರ್ಧರಿಸುತ್ತದೆ. ಶಿಕ್ಷಣದ ಮೂಲಕ ವ್ಯಕ್ತಿಗಳು ನೈತಿಕ ಹಾಗೂ ಬೌದ್ಧಿಕ ಮೌಲ್ಯಗಳನ್ನು ಆಚರಿಸುವಂತಿರಬೇಕು. ನಮ್ಮ ಪಂಪರೆಯಿಂದ ಅನೇಕ ಸಂಗತಿಗಳನ್ನು ಕಲಿಯಬೇಕು. ಒಳಿತು ಕೆಡುಕುಗಳ ನಡುವೆ ವಿವೇಚನೆ ನೆಡೆಸಿ ಗತಕಾಲದ ಪಾಠ ಕಲಿಯಬೇಕು. ಏಕೆಂದರೆ ಸಂಸ್ಕೃತಿಯ ಗುಣಮಟ್ಟ, ಜ್ಞಾನದ ಗುಣಮಟ್ಟವನ್ನು ನಿರ್ಧರಿಸುತ್ತದೆ. ಇಲ್ಲಿ ಜ್ಞಾನವೆಂದರೆ ಒಂದು ಜನಾಂಗದ ಜನರು ತಿಳಿದಿರುವ ಸಿದ್ಧಾಂತಗಳು, ವಿಜ್ಞಾನದ ಶೋಧಗಳು, ಕಸುಬು ಕೈಗಾರಿಕೆಗಳ ಒಟ್ಟು ತಿಳುವಳಿಕೆಯಾಗಿದೆ. ಅದರೊಟ್ಟಿಗೆ ಸಂಸ್ಕೃತಿಯ ಭಾಗವಾದ ಧರ್ಮ, ಆಧ್ಯಾತ್ಮಿಕ ವಿಚಾರ, ನೀತಿಕಲ್ಪನೆ ಇತ್ಯಾದಿಗಳನ್ನು ಒಳಗೊಂಡಿದೆ. ಒಂದು ರಾಷ್ಟ್ರದ ಉನ್ನತಿಗೆ ಜ್ಞಾನ ಮತ್ತು ಸಂಸ್ಕೃತಿ ಇವೆರಡರ ಅಭಿವೃದ್ಧಿಯೂ ಅಗತ್ಯವಾಗಿದೆ. ಆದರೆ ರಾಷ್ಟ್ರೋನ್ನತಿಯು ಜ್ಞಾನವನ್ನು ಹೊರತುಪಡಿಸಿ, ಸಂಸ್ಕೃತಿಯನ್ನು ಅಷ್ಟು ಅವಲಂಬಿಸಿರುವುದಿಲ್ಲ. ಹೀಗಿರುವುದರಿಂದ ಸಂಸ್ಕೃತಿಯಿಲ್ಲದೆ ಬರಿಯ ಜ್ಞಾನಾಭಿವೃದ್ಧಿಯ

ಬಲದಿಂದಲೇ ಮೇಲೆರುವ ರಾಷ್ಟ್ರಗಳ ಉನ್ನತಿ ಬಹುಕಾಲ ಉಳಿಯುವುದಿಲ್ಲ. ಜ್ಞಾನವು ನಿರ್ಗುಣ. ಅದನ್ನು ಇತರರಿಂದಾಗಲೀ, ಇಲ್ಲವೇ ಯಾವುದೇ ಮೂಲಗಳಿಂದಾಗಲೀ ಸ್ವೀಕರಿಸುವ ಮತ್ತು ಪ್ರಸಾರ ಮಾಡುವಂತಿರಬೇಕು. ಇಂದಿನವರು ಅನುಸರಿಸುತ್ತಿರುವುದು ಪಾಶ್ಚಾತ್ಯ ಜ್ಞಾನವನ್ನು ಮಾತ್ರ. ಆದರೆ ಸಂಸ್ಕೃತಿಯನ್ನಲ್ಲ. ಪ್ರಪಂಚವೇ ಜಾಗತೀಕರಣಕ್ಕೆ ತೆರೆದುಕೊಂಡಿರುವ ಈ ಹೊತ್ತಿನಲ್ಲಿ ಇಂತಹ ಹಲವಾರು ಸ್ಥಿತ್ಯಂತರಗಳು, ಒಂದು ಸಮುದಾಯಕ್ಕೆ ಬಿಡುಗಡೆಯಂತೆ ಕಂಡರೆ, ಇನ್ನೊಂದು ಸಮುದಾಯಕ್ಕೆ ಅಸ್ತಿತ್ವವನ್ನು ನಾಶಗೊಳಿಸುವ ಭಸ್ಮಾಸುರನಂತೆ ಕಾಣಿಸುತ್ತದೆ. ಯಂತ್ರ ನಾಗರಿಕತೆ, ನಿಸರ್ಗವನ್ನು ಮಣಿಸಲು ಹೊರಟಿದೆ. ನಮ್ಮ ದುರಾಸೆಯಿಂದ ಪ್ರಕೃತಿ ನಾಶವಾಗುತ್ತಿದೆ. ಕಾಲಕ್ಕನುಗುಣವಾಗಿ ವೈಜ್ಞಾನಿಕ ಕೃಷಿ ಪದ್ಧತಿ ಕೃಷಿಕನ ಕೈಗೆ ಎಟುಕದೆ ಆತ್ಮಹತ್ಯೆಗೆ ಒಳಗಾಗುತ್ತಿದ್ದಾನೆ. ಇವೆಲ್ಲವನ್ನು ಪರಿಗಣಿಸಿ ಹೇಳುವುದಾದರೆ, ವಿಜ್ಞಾನ ಕಲಿಕೆ ಎಷ್ಟು ಅಗತ್ಯವೊ, ಮಾನವಿಕ ಅಧ್ಯಯನಗಳ ಕಲಿಕೆಯು ಅಷ್ಟೇ ಮುಖ್ಯವಾಗುತ್ತವೆ. ವಿಜ್ಞಾನ ತಂತ್ರಜ್ಞಾನದ ಅಧ್ಯಯನಗಳ ಸಂದರ್ಭದಲ್ಲಿ ಮಾನವೀಯತೆಯನ್ನು ಮರೆಯಬಾರದು. ಸದ್ಯದ ಸ್ಥಿತಿಯಲ್ಲಿ ವಿಜ್ಞಾನ, ತಂತ್ರಜ್ಞಾನಗಳು ಮಾನವನನ್ನು ಎಚ್ಚರದ ಸ್ಥಿತಿಯಲ್ಲಿಡಬೇಕಾಗಿದೆ.

ಭಾರತೀಯ ಪರ್ಯಾಯ ಶಿಕ್ಷಣ ಮಾದರಿಯ ಮೇಲೆ ಜಿಡ್ಡು ಕೃಷ್ಣಮೂರ್ತಿಯವರು ಬೀರಿದ ಪ್ರಭಾವ ಮೌಲಿಕವಾದದ್ದು. 'ಶಿಕ್ಷಣವು ವಿದ್ಯಾರ್ಥಿಗಳನ್ನು ಒಂದು ನಿರ್ದಿಷ್ಟ ಚೌಕಟ್ಟಿಗೆ ಅಂದರೆ, ಪೂರ್ವನಿಶ್ಚಿತ ಹಾದಿಯಲ್ಲಿ ಸಾಗುವಂತೆ ತಯಾರು ಮಾಡುತ್ತದೆ. ಆದರೆ ಆ ವಿದ್ಯಾರ್ಥಿ ಜೀವನಕ್ಕೆ ಮುಖಾಮುಖಿಯಾಗುವಾಗ ಜೀವನದ ಭೌತಿಕ ಏರುಪೇರುಗಳನ್ನು ಮತ್ತು ಮಾನಸಿಕ ಸವಾಲುಗಳನ್ನು ಎದುರಿಸಲು ಬೇಕಾದ ಸಿದ್ಧತೆಯನ್ನು ವಿದ್ಯಾರ್ಥಿಗೆ ಒದಗಿಸುತ್ತಿಲ್ಲ. ಇದು ಶಿಕ್ಷಣದ ಗುರಿಯಲ್ಲ. ಶಿಕ್ಷಣವು ವಿದ್ಯಾರ್ಥಿಗಳ ಧೀಶಕ್ತಿಯನ್ನು ಜಾಗೃತಗೊಳಿಸಬೇಕು'[೬] ಎಂದಿದ್ದಾರೆ. ಶಿಕ್ಷಣವೆಂದರೆ ಕೇವಲ ಪುಸ್ತಕ ಓದಿ ಕಲಿಯುವುದಲ್ಲವೆಂಬುದು ಸರ್ವ ಒಪ್ಪಿತ ಮಾತಾಗಿದೆ. ಶಿಕ್ಷಣ ಇಡೀ ಜೀವನವನ್ನು ಅರಿಯುವಂತಹ ಮತ್ತು ಸಾಮಾಜಿಕ ಜಗತ್ತಿನಲ್ಲಿ ಜೀವನದ ಸವಾಲುಗಳನ್ನು ಎದುರಿಸಲು ಸಜ್ಜುಗೊಳಿಸುವಂತಿರಬೇಕು. ಸಾಮಾಜಿಕ ಸಂರಚನೆ ಸ್ಪರ್ಧೆಯನ್ನು ಅವಲಂಬಿಸಿರುವುದರಿಂದ ಆತ್ಮವಿಶ್ವಾಸ ತುಂಬುವಂತಿರಬೇಕು. ಕೇವಲ ವೈದ್ಯ, ವಿಜ್ಞಾನಿ, ತಂತ್ರಜ್ಞಾನಿಗಳನ್ನು ಸೃಷ್ಟಿಸುವುದು ಸಮರ್ಪಕ ಶಿಕ್ಷಣವಲ್ಲ. ಜೀವಂತವಾಗಿರುವ, ಕೂತುಹಲಿಯಾಗಿರುವ ವ್ಯಕ್ತಿಯನ್ನು ನಿರ್ಮಾಣ ಮಾಡುವುದಾಗಿದೆ. ಆಲೋಚಿಸುವ, ಪರಿಶೀಲಿಸುವ ಸುಶಿಕ್ಷಿತ ಮನಸ್ಸನ್ನು ಸೃಷ್ಟಿಸುವುದಾಗಿದೆ.

ಪ್ರಸಿದ್ಧ ಶಿಕ್ಷಣತಜ್ಞ ನೂರಲ್ ಹಸನ್ ಹೇಳುತ್ತಾರೆ, 'ಮನುಷ್ಯ ತನ್ನ ಸ್ವಾಭಾವಿಕ ಮತ್ತು ಸಾಮಾಜಿಕ ಪರಿಸರದೊಂದಿಗೆ ಸಮರಸಪೂರ್ಣವಾಗಿ ತನ್ನನ್ನು ತಾನು ಶೋಧಿಸುವ ಹಾಗೂ ತನ್ನ ಸತ್ತ್ವಗಳನ್ನು ಬೆಳೆಸಿಕೊಳ್ಳುವ ಸಾಮರ್ಥ್ಯವನ್ನು ಶಿಕ್ಷಣವು ಸೃಷ್ಟಿಸುವ ಉದ್ದೇಶ ಹೊಂದಿದ್ದೇ ಆದರೆ, ಮನುಷ್ಯ ತನ್ನೊಳಗಿನ ನಿರ್ಭೀತ ವಸ್ತುನಿಷ್ಠೆಯನ್ನು ಬೆಳೆಸಿಕೊಳ್ಳುವುದು ಮತ್ತು ಅದರಿಂದ ವೈಜ್ಞಾನಿಕ ವಿಶ್ಲೇಷಣೆಯ ಬಂಡಿಗಲ್ಲಿನ ಮೇಲೆ ಲಾಗಾಯ್ತಿನಿಂದ ಬಂದ ವಿಚಾರಗಳನ್ನೂ, ನಂಬಿಕೆಗಳನ್ನೂ ಪರೀಕ್ಷಿಸಲು ಅವನನ್ನು ಶಕ್ತನನ್ನಾಗಿಸಬೇಕು. ನಾವು ಸಮಾಜವಾದ, ಜ್ಯಾತ್ಯಾತೀತತೆ, ಪ್ರಜಾಪ್ರಭುತ್ವದ

ಗುರಿಗಳನ್ನು ಸಾಧಿಸುವುದಾದರೆ ಮತ್ತು ಸಂಪೂರ್ಣ ಸಮಾನಾವಕಾಶವನ್ನು ಪೂರೈಸುವುದಾದರೆ, ಅಕುಶಲಿ ಕಾರ್ಮಿಕನೂ ಆಡಳಿತ ಮತ್ತು ಕೌಶಲಗಳ ಅತ್ಯಂತ ಉನ್ನತ ಮಟ್ಟಗಳನ್ನು ತಲುಪುವಂತೆ ನಮ್ಮ ಆರ್ಥಿಕ ಔದ್ಯಮಿಕ ವ್ಯವಸ್ಥೆಯಲ್ಲಿ ಸಮತಲದ ಹಾಗೂ ಲಂಬಾತ್ಮಕ ಚಲನೆಯ ಅವಕಾಶವನ್ನು ನೀಡುವುದು ಅಗತ್ಯ. ನಮ್ಮ ಶಾಲೆ ಕಾಲೇಜುಗಳು ಈ ನಿಟ್ಟಿನಲ್ಲಿ ಶ್ರಮಿಸಬೇಕು. ವಿದ್ಯಾರ್ಥಿಯನ್ನು ವಿಜ್ಞಾನ ಗಣಿತದಂಥ ಅತ್ಯಾವಶ್ಯಕ ಶಿಸ್ತುಗಳ ಸಂಪೂರ್ಣ ಅರಿವನ್ನು ನೀಡಿ ಸಜ್ಜುಗೊಳಿಸಬೇಕು."[೪]

ಇವರುಗಳಂತೆಯೇ ಸಾಕ್ರಟೀಸನು ಕೂಡ ವಿಚಾರ ಶಕ್ತಿಯನ್ನು ಕುಂದಿಸುವ ಯಾವುದೇ ಪ್ರಯತ್ನವಿದ್ದರೂ ಅದನ್ನು ಪ್ರಬಲವಾಗಿ ವಿರೋಧಿಸುತ್ತಾನೆ. ಇವನ ತತ್ತ್ವಚಿಂತನೆಗಳೆಲ್ಲವೂ 'ನಿನ್ನ ನೀನು ತಿಳಿ'(know thyself) ಎಂಬ ನೆಲೆಯದ್ದಾಗಿದೆ. ಇವನ ಪ್ರಕಾರ ಜ್ಞಾನವೆಂದರೆ ಬರೀ ಮಾತಲ್ಲ. ಬುದ್ಧಿವಂತಿಕೆಯಲ್ಲ. ಶಬ್ದಾರ್ಥದ ತಿಳುವಳಿಕೆಯಲ್ಲ. ಅದೊಂದು ಅದಮ್ಯ ಶಕ್ತಿ, ಚೇತನ. ತಾನು ಅಜ್ಞಾನಿ, ತಿಳಿಯಬೇಕಾದುದು ಬಹಳ ಇದೆ ಎಂಬ ಸದ್ಗುಣವೇ ಜ್ಞಾನವೆಂದಿದ್ದಾನೆ. ಇದಲ್ಲದೆ ಇಂದ್ರಿಯ ಸಂವೇದನೆಯೇ ಜ್ಞಾನ ಎಂದ ಪೈತಾಗೊರಸ್‌ನ ವಾದವನ್ನು ಅಲ್ಲಗಳೆಯುತ್ತಾನೆ. ವಿವೇಕವೇ ಜೀವನದ ಸುಖಕ್ಕೆ ದಾರಿ ಎಂದಿದ್ದಾನೆ. ನೈತಿಕತೆ, ಜ್ಞಾನದಿಂದಲೇ ಉದಯಿಸುತ್ತದೆ. ಆದ್ದರಿಂದ ಸರ್ವರ ಹಿತವನ್ನು ಸಾಧಿಸುವುದು ಜ್ಞಾನದ ಗುರಿಯಾಗಬೇಕು. ಸಮಷ್ಟಿ ಬದುಕಿನತ್ತ ನಮ್ಮ ತಿಳುವಳಿಕೆ, ಶಿಕ್ಷಣ, ಬೋಧನೆ ಸಾಗಬೇಕಾಗಿದೆ.

ಗೊತ್ತಿದ್ದು ಉದ್ದೇಶಪೂರ್ವಕವಾಗಿ ಯಾರು ಕೆಡುಕನ್ನು ಮಾಡಲಾರರು ಎಂಬ ಸಾಕ್ರಟೀಸ್‌ನ ವಾದವನ್ನು ಅರಿಸ್ಟಾಟಲ್ ನಿರಾಕರಿಸುತ್ತಾನೆ. ಮಾನವನ ಕಾರ್ಯಪ್ರವೃತ್ತಿಗೆ ಅವನ ಜ್ಞಾನವಷ್ಟೇ ಅಲ್ಲದೆ ಎಷ್ಟೋ ಸಾರಿ ಅವನಲ್ಲಿರುವ ಇಂದ್ರಿಯ ಸಂವೇದನೆಗಳಾದ ಕಾಮ, ಕ್ರೋಧದಂತಹ ಮುಂತಾದ ಅಸುರಿ ಪ್ರವೃತ್ತಿಗಳೂ ಕಾರಣ ಎಂಬುವುದನ್ನು ಅರಿಯಬೇಕಾಗುತ್ತದೆ. ತಿಳುವಳಿಕೆಯ ಜೊತೆಗೆ ಚಿತ್ತಶುದ್ಧಿಯೂ ಬೇಕು. ಇದಲ್ಲದೆ ವಿವೇಕಕ್ಕೆ ವಿರೋಧಿಯಾಗಿ ವರ್ತಿಸುವ ಸ್ವಭಾವ ವ್ಯಕ್ತಿಯಲ್ಲಿ ಇದ್ದೇ ಇರುತ್ತದೆ. ಇದನ್ನು ನಿಯಂತ್ರಿಸುವ ಸಮಭಾವನೆಯ ದೃಷ್ಟಿಯೇ ಜ್ಞಾನವಾಗಿದೆ. ಯಾವುದರ ಬಲದಿಂದ ಮಾನವ ಇತರ ಪ್ರಾಣಿಗಳಿಗಿಂತ ಶ್ರೇಷ್ಠನಾಗಿದ್ದಾನೋ, ಇಂದು ಅಂತಹ ಜ್ಞಾನ ಮನುಷ್ಯನನ್ನು ಶೀಲ, ಚಾರಿತ್ರ್ಯವಿಲ್ಲದ ಕ್ರೂರಿಗಳನ್ನಾಗಿಸಿತ್ತಿದೆ. ಸದ್ಗುಣಗಳು ಮನುಷ್ಯನ ಅನುವಂಶೀಯತೆಯಿಂದಾಗಲೀ, ಹುಟ್ಟು ಸ್ವಭಾವದಿಂದಾಗಿ ರೂಪಿತವಾದವುಗಳಲ್ಲ. ಅದು ಆಚರಣೆಯ ಮೂಲಕ, ಜ್ಞಾನ ಸಂಪಾದನೆಯಿಂದ ಸಾಧಿಸಬೇಕಾದದ್ದಾಗಿದೆ. ಬೌದ್ಧಿಕ ಸದ್ಗುಣದ ಬಗ್ಗೆ ಹೇಳುವ ಅರಿಸ್ಟಾಟಲ್ 'ಅನುಭವ'ಸಹಿತವಾದ ಜ್ಞಾನವನ್ನು ಶಿಫಾರಸ್ಸು ಮಾಡಿದ್ದಾನೆ. 'ಟೆಕ್ನೆ' (ಕಲಾಕೌಶಲ್ಯ) ಮತ್ತು 'ಎಪಿಸ್ಟಮ್' ಎಂಬ ಪರಿಕಲ್ಪನೆ ಹುಟ್ಟುಹಾಕಿ, ಕೌಶಲ ಮತ್ತು ಜ್ಞಾನದ ಮಧ್ಯೆ ಇರುವ ವ್ಯತ್ಯಾಸ ವಿವರಿಸುತ್ತಾ, ಬೌದ್ಧಿಕ ಸದ್ಗುಣವೆಂದರೆ ಜ್ಞಾನಾರ್ಜನೆ. ಅದು ಅರಿಯುವ ಮತ್ತು ಅನುಭವ ಸಹಿತವಾಗಿ ಅರ್ಥಮಾಡಿಕೊಳ್ಳುವ ಹಂಬಲ ಎನ್ನುತ್ತಾನೆ. 'knowledge is virtue and virtue is knowledge' ಆಗಿದೆ. ಜ್ಞಾನ ಮತ್ತು ಸದ್ಗುಣಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ.

ಪ್ಲೇಟೋನು ಕೂಡ ಇಂದ್ರಿಯ ಸಂವೇದನೆ ಜ್ಞಾನವಲ್ಲ ಎಂದಿದ್ದಾನೆ. ಇಂದ್ರಿಯ ಸಂವೇದನೆ ಕೇವಲ ಅನಿಸಿಕೆಯೇ ಹೊರೆತು, ಸಮರ್ಪಕ ಜ್ಞಾನವಲ್ಲ. ಏಕೆಂದರೆ ಎಲ್ಲರಿಗೂ ಸಮಾನವಾದ ಮತ್ತು ಸಾರ್ವತ್ರಿಕವಾದ ಜ್ಞಾನ ಎಂಬುದಿಲ್ಲ. 'ಎಲ್ಲಾ ಜ್ಞಾನವೂ, ಪರಿಕಲ್ಪನೆಗಳ ಮೂಲಕ ಬಂದ ಜ್ಞಾನ' ಎಂಬ ಸಾಕ್ರಟೀಸ್‌ನ ಹೇಳಿಕೆಯನ್ನು ಪುಷ್ಠಿಕರಿಸುತ್ತಾನೆ. ಜ್ಞಾನ ಕೇವಲ ಬುದ್ಧಿಯಿಂದ ಮಾತ್ರ ಸಾಧ್ಯ. ಅದನ್ನು ಬದಲಾಯಿಸಲು ಸಾಧ್ಯವಿಲ್ಲ. ಅದು ನಿಶ್ಚಿತವೂ, ಸ್ಥಿರವೂ ಆಗಿದೆ. ಅಲ್ಲದೆ ಸಂಸ್ಕಾರಕ್ಕೊಳಪಟ್ಟ ನೈತಿಕ ಜ್ಞಾನವನ್ನು ಮೀರಿದ ಮತ್ತೊಂದು ವಿದ್ಯೆಯಿಲ್ಲ. ಗುರುಕುಲ ಶಿಕ್ಷಣ ಕ್ರಮದಂತೆ ನೀತಿಗೆ, ಸದ್ಗುಣಕ್ಕೆ ಪ್ರಾಶಸ್ತ್ಯ ಕೊಡಲಾಗಿದೆ. ಪ್ಲೇಟೋ 'knowledge is not opinion' ಎಂದು ಹೇಳುತ್ತಾನೆ. ಇಂದ್ರಿಯ ಅನುಭವಗಳಾಗಲೀ, ಅಭಿಪ್ರಾಯಗಳಾಗಲೀ ಜ್ಞಾನ ಎನ್ನಿಸಿಕೊಳ್ಳುವುದಿಲ್ಲ. ಶಿಕ್ಷಣವೆಂದರೆ, ಹೊಸದಾಗಿ ಸಂಪಾದಿಸುವುದಲ್ಲ, ನಮ್ಮಲ್ಲಿರುವ ಜ್ಞಾನವನ್ನು ನೆನಪಿಸಿಕೊಳ್ಳುವುದು, ಜಾಗೃತಗೊಳಿಸುವುದಾಗಿದೆ.

ತತ್ತ್ವಚಿಂತಕರೆಲ್ಲರೂ ಚಿತ್ತಸ್ವಾಸ್ಥ್ಯ, ನೀತಿಪ್ರಧಾನ ವಿಚಾರಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಾರೆ. ಅದರ ಮೂಲಕ ಮನಸ್ಸಿನ ಸಂಯಮವನ್ನು ಕಾಯ್ದುಕೊಳ್ಳಬೇಕು. ಜಡತ್ವ ನಿವಾರಣೆಯಾದಾಗ ಚೇತನ ಕಾರ್ಯಪ್ರವೃತ್ತಗೊಳ್ಳುತ್ತದೆ. ವ್ಯಕ್ತಿಯ ಜೀವನದಲ್ಲಿ ನೆಡೆಯುವ ಘಟನೆಗಳು, ದೊರೆಯುವ ಅನುಭವಗಳ ವಿವೇಚನೆಯೇ ಜ್ಞಾನವಾಗಿದೆ.

ರುಸೋ 'ಪೂರ್ಣ ಸ್ವಾತಂತ್ರ್ಯ ಜೀವನ ನೆಡೆಸಲು ಕಲಿಸಿ ವ್ಯಕ್ತಿತ್ವದ ವಿಕಾಸವನ್ನುಂಟು ಮಾಡುವುದೇ ಶಿಕ್ಷಣ'[೬] ಎಂದಿದ್ದಾನೆ. ಅಂದರೆ ಶಿಕ್ಷಣ ಸಹಜ ಪ್ರಕ್ರಿಯೆಯೇ ಹೊರತು, ಕೃತಕವಲ್ಲ ಎನ್ನುವುದು ಅವನ ವಾದ. ಮನುಷ್ಯನು ತನ್ನ ಮೂಲ ಪ್ರಕೃತಿಯಿಂದ ದೂರ ಸರಿದು ನಾಗರಿಕನಾಗುವುದೇ ಆತನ ಎಲ್ಲಾ ದುರಂತಗಳಿಗೆ ಕಾರಣ ಎನ್ನುವುದು ಅವನ ತರ್ಕ. ಏಕೆಂದರೆ ಇಂದಿನ ಶಿಕ್ಷಣದಲ್ಲಿ ಬದುಕಿಗೂ ಜ್ಞಾನಕ್ಕೂ ಸಂಬಂಧವೇರ್ಪಡಿಸುವ ಪ್ರಯತ್ನಗಳಿಲ್ಲ. ಪುಸ್ತಕದ ಓದಿನ ಮೂಲಕ ಜ್ಞಾನ ಸಂಪಾದನೆ ಮಾಡುವುದಕ್ಕೆ ಮಹತ್ವ ನೀಡುತ್ತದೆಯೇ ಹೊರೆತು, ಪಂಚೇಂದ್ರಿಯಗಳ ಮೂಲಕ ಜ್ಞಾನಾನುಭವಗಳ ಸಂಪಾದನೆಗೆ ಅವಕಾಶ ನೀಡುವುದಿಲ್ಲ. ಪುಸ್ತಕದ ಓದು ಸ್ಥಳೀಯ ಭಾಷೆ ಮತ್ತು ಸಂಸ್ಕೃತಿಯನ್ನು ಅಳಿಸಿ ಹಾಕಿ, ವಸಾಹತುಶಾಹಿ ಹುಟ್ಟು ಹಾಕಿದ ಭಾಷೆಯಲ್ಲಿ ಕೇವಲ ಶಬ್ದಗಳನ್ನು ಹೇಳಲು ಕಲಿಸುತ್ತದೆಯೇ ವಿನಹ ಚಿಂತನೆ ನೆಡೆಸುವುದಿಲ್ಲ. ಇಲ್ಲಿ ಪ್ರಕೃತಿಯೇ ಜೀವನದ ಮಹಾನ್ ಗ್ರಂಥವಾಗಿರುವುದರಿಂದ, ಪ್ರತಿಯೊಂದು ವಿಷಯವನ್ನು ಪ್ರಕೃತಿಯ ಒಡಲಲ್ಲಿದ್ದುಕೊಂಡೆ ಕಲಿಯಬಹುದು. ಇವನ ಈ ವಿಚಾರಗಳು ಅನೇಕ ಶಿಕ್ಷಣ ತಜ್ಞರ ಮತ್ತು ಭಾರತದ ಶಿಕ್ಷಣ ತಜ್ಞರ ಮೇಲೂ ಪ್ರಭಾವ ಬೀರಿದೆ.

ಜೀವನವೇ ಒಂದು ಪುಸ್ತಕ. ಈ ಪುಸ್ತಕದಲ್ಲಿ ಉತ್ತರ ಎಲ್ಲಿ ಅಡಕವಾಗಿದೆ ಎಂಬುದನ್ನು ಅರಿಯುವ ಜ್ಞಾನವೂ ಮುಖ್ಯವಾಗುತ್ತದೆ. ಇದನ್ನೇ ಸ್ಪೆನ್ಸರ್ 'ಸಂಪೂರ್ಣ ಜೀವನಕ್ಕಾಗಿ ಶಿಕ್ಷಣ' ಎಂದಿದ್ದಾನೆ. ಇಲ್ಲಿ ಶಿಕ್ಷಣವೆಂದರೆ, ಕೌಶಲ್ಯಗಳನ್ನೊಳಗೊಂಡ ಜ್ಞಾನವಾಗಿದೆ. ಜ್ಞಾನ ಮತ್ತು ಕೌಶಲವನ್ನು

ಪ್ರತ್ಯೇಕಿಸಿ ನೋಡುವುದು ಕಲಿಕೆಯಲ್ಲಿ ಅಸ್ಥಿರತೆಯನ್ನುಂಟು ಮಾಡುತ್ತದೆ. ಈ ಕಾರಣದಿಂದಲೇ, ನಮ್ಮ ಇಂದಿನ ಶಿಕ್ಷಣ ನಮ್ಮನ್ನು ಅಂಧ ವಿಶ್ವಾಸಿಗಳನ್ನಾಗಿ ಮಾಡಿದೆ. ನಿರ್ವೀರ್ಯರನ್ನಾಗಿ ಮಾಡಿದೆ. ಜ್ಞಾನವನ್ನೇ ಕೌಶಲ್ಯವನ್ನಾಗಿ, ಇಲ್ಲವೇ ಕೌಶಲ್ಯವನ್ನೇ ಜ್ಞಾನವನ್ನಾಗಿಸಿ ಬದುಕಿಗೆ ಆಧಾರವನ್ನು ಒದಗಿಸುವ ಶಿಕ್ಷಣದ ಅವಶ್ಯಕತೆ ಇದೆ. ಇದನ್ನೇ 'ವಿಟ್‌ಗೈನ್‌ಸ್ಟೀನ್' ಎಂಬ ತತ್ವಚಿಂತಕ 'ಕ್ರಿಯಾಜ್ಞಾನ' ಎಂದು ಕರೆದಿದ್ದಾನೆ. ಈ ವಿಚಾರ ಜ್ಞಾನದ ಅರ್ಜನೆ ಪ್ರಾಯೋಗಿಕವಾಗಿರಬೇಕು ಎನ್ನುವುದಾಗಿದೆ.

ಜಾನ್‌ಡ್ಯೂಯಿ ಕೂಡ ವಿದ್ಯಾರ್ಥಿ, ಅನುಭವದ ಕೇಂದ್ರವಾಗಬೇಕೆಂದಿದ್ದಾನೆ. ಅವನ ಆಸಕ್ತಿಗೆ ಅನುಗುಣವಾಗಿ ಚಟುವಟಿಕೆಗೆ ತೊಡಗಿ, ತನ್ನ ಆಲೋಚನೆಗಳು ಉಪಯುಕ್ತವೋ? ಅಲ್ಲವೋ? ಎಂದು ಪ್ರಾಯೋಗಿಕವಾಗಿ ತಾನೇ ಕಂಡುಕೊಳ್ಳಬೇಕೆಂದಿದ್ದಾನೆ. 'ಅನುಭವದಿಂದ, ಅನುಭವಕ್ಕಾಗಿ ಅನುಭವದ ಶಿಕ್ಷಣ'[೧೦] ನೀಡುವುದು ಇವರ ಗುರಿಯಾಗಿದೆ. ಆದರ್ಶ ಶಾಲೆ ಒಂದು ಮನೆ ಇದ್ದಂತೆ. ಈ ಸಂಘಟನೆ ಮೂಲಕ ಮಗು ಸಾಮಾಜಿಕ ಪ್ರಬುದ್ಧತೆ ಗಳಿಸಬೇಕು. ಸಾಮಾಜಿಕ ಬದುಕಿನ ರೀತಿ-ನೀತಿಗಳನ್ನು, ವ್ಯವಹಾರಗಳನ್ನು, ಅನುಭವಗಳನ್ನು ಶಾಲೆಗಳಲ್ಲಿ ಒದಗಿಸಬೇಕು. ಇಂದಿನ ಮಗುವಿಗೆ ಸಾಮಾಜಿಕ ಬದುಕಿನ ಕಲ್ಪನೆಯಿಲ್ಲ. ಭಿನ್ನಮತವನ್ನು ಸಹಿಸುವ ಗುಣವಿಲ್ಲ. ಈ ಸಮಸ್ಯೆಗೆ ಶಿಕ್ಷಣ ವ್ಯವಸ್ಥೆಗಿಂತ ಹೆಚ್ಚಾಗಿ ನಮ್ಮ ಸಮಾಜ ವ್ಯವಸ್ಥೆಯೇ ಕಾರಣವೆನ್ನುವುದು ಹೆಚ್ಚು ಸಮರ್ಪಕವಾಗಿತ್ತದೆ. ಭಿನ್ನಮತಗಳನ್ನು ವಾದ-ಪ್ರತಿವಾದಗಳ ಮೂಲಕ ನಿರ್ಣಯಿಸಿ ತೀರ್ಮಾನಕ್ಕೆ ಬರುವ ಮುಕ್ತತೆಯಿಲ್ಲ. ವೈಚಾರಿಕತೆ ಎಂಬುದು ಸಾರ್ವಜನಿಕ ಜೀವನಕ್ಕೆ ಮಾತ್ರ ಎಂಬಂತಾಗಿದೆ. ಆತ್ಮಬಲವಿಲ್ಲದ, ಸೈದ್ಧಾಂತಿಕ ಬಲವಿಲ್ಲದ, ಸ್ವಾರ್ಥವೇ ಪರಮಾರ್ಥವಾಗಿರುವಾಗ, ಹುಂಬತನವನ್ನೇ ಸಂಸ್ಕೃತಿಯನ್ನಾಗಿಸಿಕೊಂಡ ಇಂದಿನ ಶಿಕ್ಷಕ ವರ್ಗ, ಪುಸ್ತಕ ವಿಮುಖಿಗಳಾದ, ಜ್ಞಾನ ಶತ್ರುಗಳಾದ, ಪ್ರಯೋಗಹೀನರಾದ ವಿದ್ಯಾರ್ಥಿಗಳನ್ನು ತಯಾರು ಮಾಡುತ್ತಿದೆ. ಬುದ್ಧಿವಂತರೆನಿಸಿಕೊಂಡ ವಿದ್ಯಾರ್ಥಿಗಳನ್ನು ಇನ್ನಷ್ಟು ಬುದ್ಧಿವಂತರನ್ನಾಗಿಸುವುದು ಮುಖ್ಯವಲ್ಲ. ಕೇವಲ 'ಅರ್ಹತೆ' ಪಡೆಯುವುದೇ ಜ್ಞಾನವಲ್ಲ. ವಿದ್ಯಾರ್ಹತೆ ಪಡೆದವ ಜ್ಞಾನಿಯಲ್ಲ. ಒಬ್ಬ ದಡ್ಡ ವಿದ್ಯಾರ್ಥಿ, ಕಲಿಯಲು ಯಾಕೆ ಹಿಂದುಳಿಯುತ್ತಿದ್ದಾನೆ? ಅವನ ಸಾಮಾಜಿಕ ಹಿನ್ನಲೆ ಏನು? ಅಂತವರನ್ನು ಶಿಕ್ಷಣದ ಕಲಿಕೆಯ ಪ್ರಕ್ರಿಯೆಯಲ್ಲಿ ಅರ್ಥಪೂರ್ಣವಾಗಿ ತೊಡಗಿಸುವುದು ಹೇಗೆ? ಎಂಬುದು ಇಂದಿನ ಶಿಕ್ಷಣದ ಚಿಂತನೆಯಾಗಬೇಕು. ಭ್ರಷ್ಟಾಚಾರವೆಂಬುದು ರಾಜಕೀಯ ಕ್ಷೇತ್ರಕ್ಕಷ್ಟೇ ಸೀಮಿತವಲ್ಲ, ಶಿಕ್ಷಣ ಕ್ಷೇತ್ರದಲ್ಲೂ ಸಾಕಷ್ಟು ಚಾಲ್ತಿಯಲ್ಲಿದೆ. ಇಡೀ ಸಮಾಜ ಬದಲಾವಣೆ, ಪ್ರಗತಿ, ಕಲ್ಯಾಣ, ಉತ್ಕರ್ಷೆಯ ಪ್ರಕ್ರಿಯೆಯಲ್ಲಿ ಸಮಾನ ಅವಕಾಶ ಪಡೆಯುವಂತೆ ಶ್ರಮಿಸುವುದು ಮತ್ತು ಸಾಮಾಜಿಕ ಜೀವನದ ಸಮಸ್ಯೆಗಳಿಗೆ ಮುಖಾಮುಖಿಯಾಗಿ, ಅವುಗಳಿಗೆ ಸಮರ್ಥವಾಗಿ ಪರಿಹಾರ ಕಂಡುಕೊಳ್ಳುವಂತೆ ಪ್ರೇರೇಪಿಸುವುದು ಇಂದಿನ, ಮುಂದಿನ ಶಿಕ್ಷಣದ ಗುರಿಯಾಗಬೇಕಾಗಿದೆ. ಶಿಕ್ಷಣ ಕೇವಲ ಜೀವನದ ಸಿದ್ಧತೆಗಾಗಿ ಇರುವಂತಹದ್ದಲ್ಲ. ಶಿಕ್ಷಣವೇ ಜೀವನವಾಗಬೇಕು. ತತ್ತ್ವಪ್ರಯೋಗಗಳ ಸಮ್ಮಿಲನವಾಗಬೇಕು. ಮಗುವಿನ ವ್ಯಕ್ತಿತ್ವ ರೂಪಿಸುವ ಮತ್ತು ಆತನ ವೈಯಕ್ತಿಕತೆಯನ್ನು ಪೋಷಿಸುವಂತಹ ಶಿಕ್ಷಣದ ಅವಶ್ಯತೆಯ ಕುರಿತು ಹೇಳಿದ್ದಾರೆ.

ಇತ್ತೀಚಿಗೆ ನಮ್ಮ ಶಾಲಾ ಪಠ್ಯಕ್ರಮಗಳಲ್ಲಿ ವಿದ್ಯಾರ್ಥಿಗಳನ್ನು ಜ್ಞಾನದ ಕಡೆಗೆ ಒಯ್ಯಬೇಕೊ? ಕೌಶಲ್ಯದ ಕಡೆಗೆ ಒಯ್ಯಬೇಕೊ? ಎಂಬ ಚರ್ಚೆಗಳಿವೆ. ಮತ್ತು ಇವುಗಳನ್ನು ಬೋಧಿಸುವ, ಸಂವಹನ ಮಾಧ್ಯಮ ಯಾವ ಭಾಷೆಯಲ್ಲಿರಬೇಕು ಎಂಬುದು ಇನ್ನೂ ಚರ್ಚೆಯಾಗಿಯೇ ಉಳಿದಿದೆ. ಕಲಿಕಾ ಮಾಧ್ಯಮದ ವಿಚಾರವಾಗಿ ಇನ್ನೂ ಅಸ್ಥಿರತೆ ಉಳಿದಿದೆ. ಶಿಕ್ಷಣ ತಜ್ಞರಲ್ಲಿ ಜ್ಞಾನವನ್ನು ಅರ್ಥೈಸಿಕೊಳ್ಳುವ, ಕೌಶಲ್ಯವನ್ನು ಬಳಸಿಕೊಳ್ಳುವ ತರಬೇತಿ ದೊರೆತಾಗ ಮಾತ್ರ ಅರಿವಿನ ಸದುಪಯೋಗವಾಗುತ್ತದೆ. ಅದಕ್ಕೆ ಶಿಕ್ಷಣದ ಮೂಲ ಉದ್ದೇಶ ಅಂಕಾಧಾರಿತವಲ್ಲದ, ಜೀವನೋಪಯೋಗಿ ಕೌಶಲ್ಯವನ್ನು ಕಲಿಸುವುದಾಗಿದೆ.

೧೯–೨೦ನೇ ಶತಮಾನದಲ್ಲಿ ಸಮಾಜದ ಪರಿಸ್ಥಿತಿ ಬದಲಾದಂತೆ, ಶಿಕ್ಷಣ ತತ್ತ್ವಗಳು ಬದಲಾದವು. ರಾಷ್ಟ್ರಾದ್ಯಂತ ಪ್ರಚಾರಕ್ಕೆ ಬಂದ ಏಕ ರೀತಿಯ ಶಿಕ್ಷಣ ಕ್ರಮ, ಕಾನೂನು, ನ್ಯಾಯಾಲಯ ವ್ಯವಸ್ಥೆ ಭಾರತೀಯರಲ್ಲಿ ವೈಚಾರಿಕತೆಯನ್ನು ಹೆಚ್ಚಿಸಿತ್ತು. ಬ್ರಾಹ್ಮಣರ ಏಕಸ್ವಾಮ್ಯತೆ, ವೃತ್ತಿನಿರ್ಬಂಧ, ಅಸ್ಪೃಶ್ಯತೆ ಮುಂತಾದ ಜಾತಿ ಸಂಬಂಧಿ ವಿಷಯಗಳು ಸಡಿಲಗೊಂಡವು. ಆದರೂ ಶಿಕ್ಷಣ ಪ್ರಸಾರದಿಂದ ಭಾರತದಲ್ಲಿ ಜಾತಿ ಪದ್ಧತಿ ನಶಿಸಿತೆಂದು ಹೇಳಲಾಗದಿದ್ದರೂ, ವೈಜ್ಞಾನಿಕ ಹಾಗೂ ತಾಂತ್ರಿಕ ಶಿಕ್ಷಣಗಳು ಜಾತಿಪ್ರಭುತ್ವವನ್ನು ಕಡಿಮೆಗೊಳಿಸಿದವು. ಆದರೆ ಇತ್ತೀಚಿನ ದಿನಗಳಲ್ಲಿ ವಿದ್ಯೆ ಹೆಚ್ಚಿದಂತೆ ಜಾತಿಯತೆ ತೊಡೆದು ಹೋಗುವ ಬದಲು ವಿದ್ಯಾವಂತರಲ್ಲೇ ಹೆಚ್ಚುತ್ತಿದೆ.

ಇಂದಿನ ಶಾಲೆಗಳಲ್ಲಿ 'ನೋಡಿ ತಿಳಿ, ಮಾಡಿ ಕಲಿ' 'ನಲಿಕಲಿ' 'ಸಮುದಾಯದತ್ತ ಶಾಲೆ' ಶಿಕ್ಷಣದ ಮುಂತಾದ ಕಾರ್ಯಕ್ರಮಗಳು ಹಿಂದಿನ ಕಾಲದಲ್ಲಿ ಇದ್ದ ಶಿಕ್ಷಣ ಪದ್ಧತಿಯಾಗಿದೆ. ಅಂದು ಮನೆಯೇ ಪಾಠಶಾಲೆಯಾಗಿತ್ತು. ಜೀವನ ಶಿಕ್ಷಣ, ನೈತಿಕಶಿಕ್ಷಣ, ಹಾಗೂ ಸಾಮಾಜಿಕ ಶಿಕ್ಷಣ ಮನೆಯಲ್ಲಿಯೇ ದೊರೆಯುತ್ತಿತ್ತು. ಧಾರ್ಮಿಕ ಶಿಕ್ಷಣವು ಪುರೋಹಿತರು, ಸಾಧುಸಂತರು ನೀಡುತ್ತಿದ್ದರು. ಮನೆಯ ಹಿರಿಯರು ರಾಮಾಯಣ, ಮಹಾಭಾರತದಂತಹ ಮೊದಲಾದ ಕಥೆಗಳ ಮೂಲಕ ನೈತಿಕ ಶಿಕ್ಷಣವನ್ನು ಬೋಧಿಸುತ್ತಿದ್ದರು. ವೃತ್ತಿ ತರಬೇತಿ ವಂಶಪಾರಂಪರವಾಗಿ ಹಿರಿಯ ಪೀಳಿಗೆಯಿಂದ, ಕಿರಿಯ ಪೀಳಿಗೆಗೆ ನೀಡಲಾಗುತ್ತಿತ್ತು. ಅವರಿಗೆ ಶಿಕ್ಷಣ, ಸಂಸ್ಕೃತಿ, ಸಾಹಿತ್ಯ, ಬದುಕಿನೊಂದಿಗೆ ಸಾಗುತ್ತಿತ್ತು. ಕಲಿಕೆ–ಗಳಿಕೆ ಏಕಕಾಲದಲ್ಲಿ ನಡೆಯುತ್ತಿತ್ತು. ಆದರೆ ಬಂಡವಾಳಶಾಹಿ ವ್ಯವಸ್ಥೆಯು ದುಡಿಯುವ ವರ್ಗಕ್ಕೆ ಉತ್ಪಾದನಾ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ಸಾಮರ್ಥ್ಯವನ್ನು ಒದಗಿಸುವ ಹಾಗೂ ಉತ್ಪಾದಕರಾಗಿ ದುಡಿಯುವ ಕುಶಲತೆಯನ್ನು ಅವರಿಗೆ ಒದಗಿಸುವುದು ಅನಿವಾರ್ಯವಾಗಿದ್ದರಿಂದ, ಆಳುವ ವರ್ಗಗಳು ಸೀಮಿತವಾದ ಸಾಕ್ಷರತೆ ಹಾಗೂ ತಾಂತ್ರಿಕ ಕುಶಲತೆಗಳ ಶಿಕ್ಷಣವನ್ನು ದುಡಿಯುವ ವರ್ಗಕ್ಕೆ ತೆರೆದಿಟ್ಟಿತು. ಒಂದು ಅರ್ಥದಲ್ಲಿ ಶಿಕ್ಷಣವು ಆಳುವ ವರ್ಗಗಳ ಸೀಮೆಯನ್ನು ದಾಟಿ, ದುಡಿಯುವ ವರ್ಗದ ಕಕ್ಷೆಗೆ ಬಂದರೂ, ಇದು ಆಳುವ ವರ್ಗದ ಹಿತಾಸಕ್ತಿಯನ್ನು ಕಾಪಾಡುವ ಮತ್ತು ಬಂಡವಾಳಶಾಹಿ ವರ್ಗಗಳ ಬೆಳವಣಿಗೆಗೆಂದೆ ರೂಪಿತವಾದಂತಹ ಉದ್ದೇಶವೆಂಬುದು ಅರ್ಥವಾಗುತ್ತದೆ. ೧೯ನೇ ಶತಮಾನದ ಶಿಕ್ಷಣ ತಜ್ಞರಾದ ರೋಡರಿಕ್ ಹಾಗೂ ಸ್ಟಿಫನ್ಸ್‌ರವರು

ಶಿಕ್ಷಣದ ಗುರಿಯನ್ನು ವಿಶ್ಲೇಷಿಸುವಾಗ 'ಈ ಶತಮಾನದ ತಿರುವಿನಲ್ಲಿ ಈ ದೇಶದಲ್ಲಿ ಶಿಕ್ಷಣವನ್ನು ಕೆಳವರ್ಗಗಳಿಗೆ ವಿಸ್ತರಿಸುವ ಕುರಿತು ಇರುತ್ತದೆ. ಇದರ ಉದ್ದೇಶವು ದುಡಿಯುವ ವರ್ಗವನ್ನು ದೇವರಲ್ಲಿ ಭಯ, ಕಾನೂನಿನಲ್ಲಿ ನಿಷ್ಠೆ ಪಡೆದು ಪ್ರಾಮಾಣಿಕವಾಗಿ ಪರಿಶ್ರಮವನ್ನು ಮಾಡಬಲ್ಲ, ಸುಶಿಕ್ಷಿತ ದುಡಿಯುವ ವರ್ಗವನ್ನು ಕರ್ತವ್ಯನಿಷ್ಠರಾಗಿ ತಯಾರು ಮಾಡುವ ಗುರಿಯನ್ನು ಹೊಂದಿದೆ'[೧೧] ಎಂದು ಹೇಳಿದ್ದಾರೆ. ಇದು ದುಡಿಯುವ ವರ್ಗಕ್ಕೆ ವಿಸ್ತರಿಸಲಾದ ಶಿಕ್ಷಣ, ಉತ್ಪಾದನಾ ಶಕ್ತಿಯನ್ನು ಬೆಳೆಸುವ ಉದ್ದೇಶವನ್ನಷ್ಟೇ ಹೊಂದಿತ್ತು ಎಂದು ತಿಳಿಸುತ್ತದೆ. ಅಲ್ಲದೆ, ಈ ಹಂತದಲ್ಲಿಯೂ ಕೂಡ ಶಿಕ್ಷಣವು ಬಂಡವಾಳಶಾಹಿ ಆಳುವ ವರ್ಗಗಳ ಸಾಮಾಜಿಕ ನಿಯಂತ್ರಣದಲ್ಲಿಯೇ ಉಳಿದಿದೆ.

ಸುಶಿಕ್ಷಿತ ಸಾಮಾಜಿಕ ರಚನೆ ಮತ್ತು ಸಾಮಾಜಿಕ ಪರಿವರ್ತನೆಯು ಒಂದು ಸ್ಥಿತಿಯಾದರೆ, ಮಹಿಳಾ ಶಿಕ್ಷಣದ ಗುರಿ ಇನ್ನೊಂದು ಸ್ಥಿತಿಯಾಗಿದೆ. ಮಹಿಳಾ ಶಿಕ್ಷಣ ಎಂದಾಗ ಅದರಲ್ಲಿ ಮಹಿಳಾ ಸಮಸ್ಯೆಗಳ ವಿಮೋಚನೆಯನ್ನು ಒಳಗೊಂಡಿರುತ್ತದೆ. ಭಾರತದ ಇತಿಹಾಸದುದ್ದಕ್ಕೂ ಮಹಿಳೆ ದಲಿತರೆಂಬ ಹೀನಸ್ಥಿತಿಗೆ ತಳ್ಳಲ್ಪಟ್ಟು, ಅಕ್ಷರ ಲೋಕದಿಂದ ವಂಚಿತರಾದದ್ದು ಸತ್ಯ. ವೇದಕಾಲದ ಮಹಿಳೆಯರಿಗೆ ಪುರುಷರಷ್ಟೇ ಸರಿಸಮಾನ ಅವಕಾಶವಿತ್ತು ಎಂಬುದು ದಡ್ಡತನವೆನಿಸುತ್ತದೆ. ಏಕೆಂದರೆ ಋಷಿಪತ್ನಿಯರಲ್ಲದ, ರಾಜಮನೆತನದವರಲ್ಲದ, ಸಾಮಾನ್ಯ ವರ್ಗದ ಮಹಿಳೆಯರ ಬದುಕು ಇವತ್ತಿಗೂ ಇತಿಹಾಸದ ಪುಟಗಳಲ್ಲಿ ದಾಖಲಾಗಿಯೇ ಇಲ್ಲ. ಇತಿಹಾಸವನ್ನು ಹೇಳುವ ಪಠ್ಯ ಆಕರಗಳು ನಮಗೆ ಸತ್ಯವನ್ನು ಮರೆಮಾಚಿ ಹೇಳಿವೆ. ಮೌಖಿಕ ನೆಲೆಯಿಂದ ಇತಿಹಾಸವನ್ನು ನೋಡಿದಾಗ ಸ್ತ್ರೀಯರು ಮಕ್ಕಳನ್ನು ಹೇರುವ, ಕುಟುಂಬ ನಿಭಾಯಿಸುವ, ಎಲ್ಲಾ ರೀತಿಯ ದುಡಿಮೆಗೆ ವಸ್ತುವಾಗಿ ಮಾತ್ರ ಪರಿಗಣಿತವಾದದ್ದನ್ನು ಕಾಣುತ್ತೇವೆ. ಈ ಕಾರಣದಿಂದಲೇ ಮಹಿಳೆಯರು ಸೀಮಿತ ಲೋಕದಲ್ಲಿ ನಿರ್ಭಂಧಿಸಲ್ಪಟ್ಟಿದ್ದಾಳೆ.

ಬ್ರಿಟೀಷರ ಸಾರ್ವತ್ರಿಕ ಶಿಕ್ಷಣ ಪದ್ಧತಿ ಜಾರಿಗೆ ಬಂದ ವೇಳೆಯಲ್ಲಿ ರಾಜರಾಮ್ ಮೋಹನರಾಯ್, ಜ್ಯೋತಿಬಾ ಫುಲೆ, ಅಹಲ್ಯಬಾಯಿ ರಾಂಗ್ಲೇಕರ್, ಗಾಂಧೀಜಿ ಮುಂತಾದ ಸಮಾಜ ಸುಧಾರಕರ ಪ್ರಯತ್ನದಿಂದಾಗಿ ಸ್ತ್ರೀಯರಿಗೂ ಅಕ್ಷರ ಜ್ಞಾನ ಸ್ವಲ್ಪ ಮಟ್ಟಿಗೆ ದಕ್ಕುವಂತಾಯಿತು. ವಿದ್ಯೆ ಪಡೆದ ಮಹಿಳೆಯರು ಮೊದಲ ಬಾರಿಗೆ ತಮ್ಮ ಸ್ಥಿತಿ-ಗತಿ ಮತ್ತು ಹಕ್ಕುಗಳ ಬಗೆಗೆ ಚಿಂತಿಸುವಂತಾಯಿತು. ಬುದ್ಧನ ಕಾಲದಲ್ಲಿರುವ ಭಿಕ್ಷುಣಿಯರು, ೧೨ನೇ ಶತಮಾನದ ಅಕ್ಕಮಹಾದೇವಿ, ಗೊಗ್ಗವ್ವೆ, ಕಾಳವ್ವೆ ಮೊದಲಾದ ಶರಣೆಯರು ಮಹಿಳಾ ಶೋಷಣೆ ಕುರಿತು ತಮ್ಮ ನೆಲೆಯಲ್ಲಿಯೇ ಪ್ರತಿಭಟನೆ ಮಾಡಿದ್ದಾರೆ. ತಮ್ಮ ಮೂಲಭೂತ ಹಕ್ಕುಗಳಿಗಾಗಿ ಪ್ರಶ್ನೆ ಮಾಡಿದ್ದಾರೆ. ಲಿಂಗತಾರತಮ್ಯ ಬೋಧಿಸುವ ವ್ಯವಸ್ಥೆಯನ್ನೇ ಧಿಕ್ಕರಿಸಿದ್ದಾರೆ. ಆದರೆ ಆಧುನಿಕ ಶಿಕ್ಷಣದ ಮೂಲಕ ಹರಿದು ಬಂದ ಲಿಂಗಸಮಾನತೆಯ ಪರಿಕಲ್ಪನೆ ಜಾಗತಿಕ ಮಟ್ಟದಲ್ಲಿಯೇ ಹೋರಾಟದ ರೂಪುತಳೆದಿದ್ದು ಬಹುಮುಖ್ಯ ಸಂಗತಿಯಾಗಿದೆ.

ಶಿಕ್ಷಣ ಎಲ್ಲಾ ಬಗೆಯ ತಿಳುವಳಿಕೆ ನೀಡುವ ಮಾಧ್ಯಮವಷ್ಟೇ ಅಲ್ಲ. ದಮನಿತರು ತಮ್ಮ ಹಕ್ಕಿನ ಬಗ್ಗೆ ಧ್ವನಿ ಎತ್ತಲು ಬೇಕಾದ ಶಕ್ತಿಯನ್ನು ಕೊಡುವ ಅಸ್ತ್ರವೂ ಆಗಿದೆ. ಆದ್ದರಿಂದಲೇ ಭಾರತದ ಸಂವಿಧಾನ ಶಿಕ್ಷಣ ಪ್ರತಿಯೊಬ್ಬರ ಮೂಲಭೂತ ಹಕ್ಕು ಎಂದು ಹೇಳುತ್ತದೆ. ಪ್ರಜಾಪ್ರಭುತ್ವ

ಮಾದರಿಯನ್ನು ಅನುಸರಿಸುವ ಕಡ್ಡಾಯ ಶಿಕ್ಷಣ ಜಾರಿಗೆ ತಂದರೂ, ಪ್ರಾಯೋಗಿಕವಾಗಿ ಇಂದಿಗೂ ಎಲ್ಲರಿಗೆ ಶಿಕ್ಷಣ ನೀಡಲು ಸಾಧ್ಯವಾಗಿಲ್ಲ. ಬಹುಪಾಲು ಜನತೆ ಕ್ರಮಬದ್ಧ ಶಾಲೆಗಳಿಗೆ ಪ್ರವೇಶವಿಲ್ಲದ ಕಾಲದಲ್ಲಿ ಕೌಟುಂಬಿಕ ಪರಿಸರದಲ್ಲಿಯೇ ಅನೌಪಚಾರಿಕವಾದ ವೃತ್ತಿಶಿಕ್ಷಣ ಪಡೆಯುತ್ತಿದ್ದರು. ಮನೆಯ ಹೆಂಗಸರಿಗೆ ಮತ್ತು ತಾಯಂದಿರಿಗೆ ಕೆಲಸದಲ್ಲಿ ಸಹಾಯಕರಾಗಿ, ಸ್ವತಃ ಕೆಲಸ ಮಾಡಿ, ಮನೆಗೆಲಸ, ಮಕ್ಕಳ ಪೋಷಣೆ ಹಾಗೂ ತಮಗೆ ಬೇಕಾದ ವೃತ್ತಿಕೌಶಲ್ಯವನ್ನು ಕಲಿಯುತ್ತಿದ್ದರು. ಇಂತಹ ಅಪಾರವಾದ ಲೋಕಾನುಭವ ಮತ್ತು ದುಡಿಮೆ ಸಾರ್ವತ್ರಿಕ ಗುಣವುಳ್ಳದ್ದಾದರೂ, ಸರಕು ಸಂಸ್ಕೃತಿ ಹೆಣ್ಣಿನ ಈ ಜ್ಞಾನ ನೆಲೆಗಳನ್ನು ಅಪವಿತ್ರಗೊಳಿಸುತ್ತಿದೆ. ಈ ಜ್ಞಾನದ ಪಡೆಯುವಿಕೆ ಮತ್ತು ಅದರ ವಿನಿಮಯವು ಸಹನೆ ಮತ್ತು ಸಂಯಮಶೀಲತೆಯನ್ನು ಕಲಿಸುವಂತದ್ದು. ಜ್ಞಾನಕ್ಕೆ ಇಂದು ಇಂತಹ ಸಂಯಮಶೀಲತೆ ಇಲ್ಲವಾಗಿದೆ. ಅದು ಅಸಹನೆ ಮತ್ತು ಅಸಹಿಷ್ಣುತೆಗೆ ಪಕ್ಕಾಗಿಬಿಟ್ಟಿದೆ. ಸಹನೆ ಮತ್ತು ಸಂಯಮಶೀಲತೆ ಹೆಣ್ಣಿನ ದೌರ್ಬಲ್ಯವಲ್ಲ. ಬದಲಾಗಿ ಅವಳನ್ನು ಪಕ್ವಗೊಳಿಸಿ, ಸಶಕ್ತ ಗೊಳಿಸುವಂತದ್ದಾಗಿದೆ. ಇಂದು ಇಂತಹ ಅನುಭವ ಹಾಗೂ ದುಡಿಮೆಯ ಸಶಕ್ತತನ, ಆರೋಗ್ಯವಂಥ ಸಮಾಜಕ್ಕಾಗಿ ಹಂಬಲಿಸುವಂತಾಗಿದೆ.

ಭಾರತದಲ್ಲಿನ ಬ್ರಿಟೀಷ್ ಸರ್ಕಾರ ಸ್ತ್ರೀಯರ ಸ್ಥಾನಮಾನಗಳನ್ನು ಅರಿತು ಅನೇಕ ಕಾನೂನುಗಳನ್ನು ರೂಪಿಸಿತು. ಸತೀ ಪದ್ಧತಿ ನಿರ್ಮೂಲನಾ ಕಾಯ್ದೆ(೧೮೨೯), ಹಿಂದೂ ವಿಧವೆಯರ ಪುನರ್ವಿವಾಹ ಕಾಯ್ದೆ(೧೮೫೬), ಸ್ತ್ರೀ ಆಸ್ತಿ ಹಕ್ಕು(೧೯೫೬), ಬಾಲ್ಯ ವಿವಾಹ ತಡೆ(೧೮೬೦), ವರದಕ್ಷಿಣೆ ನಿಯಂತ್ರಣಾ ಕಾಯ್ದೆ(೧೯೬೧), ಶಿಕ್ಷಣ ಕಾಯ್ದೆಗಳು ಇವೆಲ್ಲಾ ಕಾನೂನುಗಳನ್ನು ಸಮಾಜ ಸುಧಾರಕರ ಪ್ರೋತ್ಸಾಹದೊಂದಿಗೆ ಅನುಷ್ಠಾನಕ್ಕೆ ಬಂದವು. ಇಷ್ಟೇಲ್ಲಾ ಸಂವಿಧಾನಬದ್ಧ ರಕ್ಷಣೆ ಇದ್ದರೂ, ಇಂದಿನ ಸ್ತ್ರೀಯರ ಜೀವನ ಅಸ್ಥಿರವಾಗಿದೆ. ಸ್ತ್ರೀ ಸಬಲೀಕರಣ, ಮಹಿಳಾ ಮೀಸಲಾತಿ, ಸ್ತ್ರೀ ಸ್ವಾತಂತ್ರ್ಯ ಚಳುವಳಿಗಳು, ಸ್ತ್ರೀ ಶಿಕ್ಷಣದ ಮುನ್ನಡೆ ದಿನದಿಂದ ದಿನಕ್ಕೆ ಹೊಸ ರೂಪ ಪಡೆಯುತ್ತಲೇ ಇವೆ. ಆದರೆ ಫಲಿತಾಂಶದಲ್ಲಿ ಯಾವುದೇ ಬದಲಾವಣೆ ಆಗಿಲ್ಲ. ಪ್ರಾಚೀನ ಸ್ತ್ರೀಯರ ಶಿಕ್ಷಣ ಕ್ರಮ ಹಾಗೂ ಅವರಲ್ಲಿ ಅಳವಡಿಸುತ್ತಿದ್ಧ ಮೌಲ್ಯಗಳು ಮತ್ತು ಇಂದಿನ ಸ್ತ್ರೀ ಶಿಕ್ಷಣ ಮತ್ತು ಅದರಲ್ಲಿ ಅಳವಡಿಕೆಯಾಗುತ್ತಿರುವ ಮೌಲ್ಯಗಳ ವ್ಯತ್ಯಾಸವೇ ಇದಕ್ಕೆ ಕಾರಣವೇನಿಸುತ್ತದೆ. ಅದಕ್ಕೆ ಸ್ತ್ರೀಯರ ಕುರಿತು ಪುರುಷ ಸಮಾಜ ಎಚ್ಚೆತ್ತುಕೊಳ್ಳುವುದಕ್ಕಿಂತ, ಸ್ತ್ರೀಯರೇ ತಮ್ಮ ಕುರಿತು ಎಚ್ಚೆತ್ತುಕೊಳ್ಳಬೇಕಾಗಿದೆ. ಪ್ರಸ್ತುತದಲ್ಲಿ ಮಹಿಳೆಯರಿಗೆ ಸಿಗುತ್ತಿರುವ ಶಿಕ್ಷಣ ಅವಳನ್ನು ಸಬಲಿಕರಣಗೊಳಿಸುತ್ತಿದಿಯೇ ಎಂದು ಕೇಳಿದರೆ ಇಲ್ಲವೆಂದೆ ಹೇಳಲಾಗುತ್ತದೆ. ಇಂದು ನಮಗೆ ದೊರೆಯುತ್ತಿರುವ ಶಿಕ್ಷಣ ಪುರುಷ ಪ್ರಧಾನ ವ್ಯವಸ್ಥೆಯ ಮೌಲ್ಯಗಳು ರೂಢಿಸಿರುವ ಸ್ತ್ರೀ ವಿರೋಧಿ ನೆಲೆಗಳೇ ಆಗಿವೆ. ಪುರುಷ ಸಾಮಾಜಿಕ ವ್ಯವಸ್ಥೆ ಮಹಿಳೆಯನ್ನು ತನ್ನ ಹಿಡಿತದಲ್ಲಿರುವಂತಹ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿದೆ. ಇಂತಹ ಕುಟುಂಬದೊಳಗಡೆ ಇರುವ ಮಹಿಳೆಯರು ವೈಚಾರಿಕವಾಗಿ ಆಲೋಚಿಸಲು ಅಸಾಧ್ಯ. ಇಲ್ಲಿರುವ ಮಹಿಳೆಯರೆಲ್ಲರೂ ಅನಕ್ಷರಸ್ಥರಲ್ಲ. ಅದರಲ್ಲಿ ಕೆಲವರು ಉನ್ನತ ಶಿಕ್ಷಣ ಪಡೆದವರು ಇದ್ದಾರೆ.

ಅಕ್ಷರಸ್ಥರಾದ ಮಾತ್ರಕ್ಕೆ ಮಹಿಳೆಯರಲ್ಲಿ ವೈಜ್ಞಾನಿಕ ಮನೋಭಾವ ಇದೆಯೆಂದು ಭಾವಿಸಲಾಗುವುದಿಲ್ಲ. ಮಹಿಳೆ ಎಷ್ಟೇ ಉನ್ನತ ಶಿಕ್ಷಣ ಪಡೆದರೂ ಒಂದಲ್ಲಾ ಒಂದು ಮೂಢನಂಬಿಕೆಗೆ ಅವಲಂಬಿಯಾಗಿರುವುದು ಸತ್ಯ. ಹೆಣ್ಣುಮಕ್ಕಳು ಯಾವುದನ್ನು ಪ್ರಶ್ನಿಸದೇ, ಎಲ್ಲವನ್ನು ಒಪ್ಪಿಕೊಳ್ಳುವ ಅವಳ ಸ್ವಭಾವವೇ ಅವಳನ್ನು ಮೂಢನಂಬಿಕೆಗೆ ತಳ್ಳಲು ಪೂರಕವಾಗಿ ಕೆಲಸ ಮಾಡುತ್ತಿದೆ. ಶಿಕ್ಷಣವಾಗಲೀ, ಕೌಟುಂಬಿಕ ಪರಿಸರವಾಗಲೀ ಮಹಿಳೆಯನ್ನು ಬೌದ್ಧಿಕವಾಗಿ ಸಬಲಳನ್ನಾಗಿಸದೇ, ಕೇವಲ ಉದ್ಯೋಗದ ದೃಷ್ಠಿಯಿಂದ ಪದವೀಧರೆಯನ್ನಾಗಿ ಮಾಡಲು ರೂಪಿತವಾಗಿದೆ. ಇಂಥ ಪರಿಸರದಲ್ಲಿ ಬೆಳೆಯುವ ಹೆಣ್ಣುಮಕ್ಕಳು ಸ್ವಂತ ವ್ಯಕ್ತಿತ್ವ, ವೈಚಾರಿಕ ಆಲೋಚನೆಗಳನ್ನು ರೂಪಿಸಿಕೊಳ್ಳುವ ಬದಲು ಸಾಮಾಜಿಕ ವ್ಯವಸ್ಥೆಗಳ ಕಟ್ಟುಪಾಡುಗಳಿಗೆ ಅಥವಾ ಪುರುಷ ಪ್ರಧಾನ ವ್ಯವಸ್ಥೆಯ ಮುಂದುವರಿಕೆಯಾಗಿ ಬೆಳೆಯುತ್ತಿದ್ದಾಳೆ. ಆಧುನಿಕ ಸಮಾಜದ ಒಳಗೆ ಮಹಿಳೆಯರು ಹೆಚ್ಚು ಹೆಚ್ಚು ಸರಕಾಗಿ, ವಸ್ತುವಾಗಿ ನೋಡುವ ರಾಜಕೀಯವನ್ನು ಗ್ರಹಿಸುವಲ್ಲಿ ಶಿಕ್ಷಣ ವ್ಯವಸ್ಥೆ ವಿಫಲಗೊಂಡಿದೆ. ಇದಷ್ಟೇ ಅಲ್ಲ, ಗ್ರಾಮೀಣ ಪರಿಸರದಲ್ಲಿ ಇವರಿಗೆ ಸಿಕ್ಕ ರಾಜಕೀಯ ಅವಕಾಶ, ಶಿಕ್ಷಿತ ಮಹಿಳೆಯರ ರಾಜಕೀಯ ಪ್ರತಿನಿಧಿಕರಣ, ಮೇಲ್ವರ್ಗದ ಮಹಿಳೆಯರ ರಾಜಕೀಯ ಅಧಿಕಾರವೆಲ್ಲಾ ಪುರುಷ ನಿರೂಪಿತವೇ ಆಗಿದೆ. ಮಹಿಳೆಯರಿಂದ ಪುರುಷರಿಗಾಗಿ ನೆಡೆಸಲಾಗುತ್ತಿರುವ ಪುರುಷ ರಾಜಕಾರಣವಾಗಿದೆ. ಮಹಿಳಾ ಅಸ್ಮಿತತೆ, ಮಹಿಳಾ ವೈಜ್ಞಾನಿಕ ತಿಳುವಳಿಕೆ ಇಲ್ಲದ ಇವರು ಪುರುಷ ನಿರ್ಮಿಸಿದ ಚೌಕಟ್ಟಿನಲ್ಲಿಯೇ ಇಂದಿಗೂ ಉಳಿದಿದ್ದಾರೆ. ಆದ್ದರಿಂದ ಮಹಿಳೆಯರಿಗೆ ಅಕ್ಷರ ಜ್ಞಾನ ಮತ್ತು ಸ್ತ್ರೀಪರ ವಿಷಯಜ್ಞಾನ ಎರಡೂ ಏಕಕಾಲಕ್ಕೆ ದೊರೆಯುವಂತಾಗಬೇಕು. ಹೊಸ ಬಗೆಯ ಅಧ್ಯಯನ ಕ್ರಮ ಸ್ತ್ರೀ ಅಸ್ಮಿತತೆ ಮೆರೆಯುವ ಶಿಕ್ಷಣವನ್ನು ಜಾರಿಗೆ ತರಬೇಕು. 'ಹೆಣ್ಣಿಗೆ ವಿದ್ಯೆಯನ್ನು ಕೊಡುವುದೆಂದರೆ, ವಿಶ್ವವಿದ್ಯಾಲಯವೊಂದನ್ನು ತೆರೆದಂತೆ' ಎನ್ನುವ ಟ್ಯಾಗೋರರ ಮಾತಿನಿಂದ ಹಿಡಿದು, 'ಶಿಕ್ಷಣವು ಹೆಣ್ಣಿನ ವ್ಯಕ್ತಿತ್ವಕ್ಕೆ ಕೊಡುವ ನೈತಿಕ ಬಲವನ್ನು ಒಪ್ಪಿ ಗೌರವಿಸುವ ಸಂದರ್ಭ ಸೃಷ್ಠಿಯಾದಾಗ ನಾಗರಿಕತೆಯ ದಿಕ್ಕೇ ಬದಲಾಗುತ್ತದೆ' ಎನ್ನುವ ಸಮಾಜವಿಜ್ಞಾನಿಗಳ ಮಾತಿನ ತನಕ ಶಿಕ್ಷಣದ ವ್ಯಾಖ್ಯಾನಗಳನ್ನು ನೋಡಿದರೂ, ಶಿಕ್ಷಣವು ಹೆಣ್ಣಿನ ಮಟ್ಟಿಗೆ ಸ್ಪರ್ಶಮಣಿತೆಯೇ ಎನ್ನುವುದು ಮನದಟ್ಟಾಗುತ್ತದೆ.'[೨] ಆದ್ದರಿಂದ ಪದವಿಯಾಧಾರಿತ ಶಿಕ್ಷಣದ ಬದಲಿಗೆ, ಜ್ಞಾನಾಧಾರಿತ ಶಿಕ್ಷಣ ಬರಬೇಕು. ಪದವಿ–ಹುದ್ದೆ–ಸಂಬಳ ಇಂತಹ ಮೌಲ್ಯಗಳನ್ನು ಅಳಿಸಿ ಕೌಶಲ್ಯ–ಹುದ್ದೆ–ಸ್ವಾವಲಂಬನೆ ಮತ್ತು ಇವತ್ತಿನ ಸಾಮಾಜಿಕ ಸಮಸ್ಯೆಗೆ ಮುಖಾಮುಖಿಯಾಗುವ ಶಿಕ್ಷಣ ಕೊಡಬೇಕು. ಪ್ರಗತಿಗೆ ಅನುಗುಣವಾಗಿ ನಾವು ತಾಂತ್ರಿಕವಾಗಿ ಎಷ್ಟೇ ಮುಂದುವರಿದರೂ ಪ್ರಾಚೀನ ಸಂಸ್ಕೃತಿಯ ಮೌಲ್ಯಗಳಿಗೆ ಬೆಲೆ ಕೊಡದ ಕಾರಣದಿಂದ ನಮಗರಿವಿಲ್ಲದಂತೆ ಅಧೋಗತಿಗೆ ಇಳಿಯುತ್ತಿರುವುದು ಸ್ಪಷ್ಟವಾಗುತ್ತಿದೆ. ಪ್ರಾಚೀನ ಪರಂಪರೆಯ ಮೌಲ್ಯಗಳನ್ನು ಇಂದಿನ ಆಧುನಿಕ ಶಿಕ್ಷಣದಲ್ಲಿ ಅಳವಡಿಸುವುದು ಅತ್ಯಾವಶ್ಯಕವಾಗಿದೆ.

ಆಧುನಿಕ ಶೈಕ್ಷಣಿಕ ಕ್ಷೇತ್ರ ಸಾಕಷ್ಟು ಬದಲಾವಣೆ ಆಗಿದೆ. ಹೊಸ ಹೊಸ ಯೋಜನೆಗಳೊಂದಿಗೆ ಅಭಿವೃದ್ಧಿಯನ್ನು ಸಾಧಿಸುತ್ತಿದೆ. ಆದರೆ ಇಂದು ಕೇವಲ ಉದ್ಯೋಗಕ್ಕಾಗಿ ಶಾಲೆ ಪ್ರವೇಶಿಸುತ್ತಿದ್ದೇವೆಯೇ

ಹೊರೆತು ಜ್ಞಾನವೃದ್ಧಿಗಾಗಿ ಅಲ್ಲ. ಶಿಕ್ಷಣ ಸಂಸ್ಥೆಗಳ ಹಿಂದಿರುವ ಉದ್ದೇಶವೇ ನಾಳಿನ ಬಾವಿ ಪ್ರಜೆಗಳನ್ನು ಜ್ಞಾನ ಸಂಪನ್ನರಾಗಿಸುವುದು ಮತ್ತು ಪ್ರಪಂಚದ ಆಗು-ಹೋಗುಗಳನ್ನು ಚರ್ಚಿಸಿ ನಿರ್ಧರಿಸುವ ಕೌಶಲ್ಯಗಳನ್ನು ಅವರಲ್ಲಿ ತುಂಬುವುದರ ಜೊತೆಗೆ ಸ್ವಾವಲಂಬಿಗಳನ್ನಾಗಿ ಮಾಡುವುದು. ಆದರೆ ಇಂದು ಈ ಎಲ್ಲಾ ಉದ್ದೇಶಗಳು ಹಾದಿ ತಪ್ಪುತ್ತಿವೆ ಎಂಬುದು ಖೇದದ ಸಂಗತಿಯಾಗಿದೆ. ಈ ಉದ್ದೇಶಗಳೆಲ್ಲಾ ಕೇವಲ ಪುಸ್ತಕಕ್ಕೆ ಮಾತ್ರ ಸೀಮಿತವಾಗಿದೆ. ಪ್ರಸ್ತುತ ಶಿಕ್ಷಣ ನಮ್ಮನ್ನು ಅಂಕದ ಹುಳುಗಳನ್ನಾಗಿಸುತ್ತಿದೆ. ವಾಣಿಜ್ಯೀಕರಣದ ಬಿಸಿ ಶಿಕ್ಷಣ ಕ್ಷೇತ್ರಕ್ಕೂ ತಾಗಿ ಇಂದು ಶಿಕ್ಷಣ ಸಂಸ್ಥೆಗಳೂ ಕೂಡ ಬಂಡವಾಳ ಹಾಕುವ, ಅಧಿಕ ಲಾಭ ಗಳಿಸುವ ಕಂಪನಿಗಳಾಗಿ ಬೆಳೆಯುತ್ತಿವೆ. ಶಿಕ್ಷಣದ ಮೂಲಕ ವಿದ್ಯಾರ್ಥಿಗಳ ವ್ಯಕ್ತಿತ್ವ ನಿರ್ಮಾಣವಾಗಬೇಕೆಂದು ಹಾರೈಸುವ ತಂದೆ-ತಾಯಿಗಳು ಕೂಡ ಅವರವರ ಮಕ್ಕಳ ವ್ಯಕ್ತಿತ್ವವನ್ನು ಅಂಕಗಳಲ್ಲಿಯೇ ಅಳೆಯುತ್ತಿರುವುದು ದುರಂತ. ಶಿಕ್ಷಣವಿಲ್ಲದೆ, ಇಂದಿನ ಕಾಲದಲ್ಲಿ ಬದುಕನ್ನು ಕಟ್ಟಿಕೊಳ್ಳುವುದು ಕನಸಿನ ಮಾತೇ ಸರಿ. 'ವಿದ್ಯಾದದಾತಿ ವಿನಯಂ, ವಿನಯಂಯಾತಿ ಪಾತ್ರತಾಂ' ಎಂಬಂತೆ ವಿದ್ಯೆ ನಮಗೆ ವಿನಯವನ್ನು ಕಲಿಸಿದರೆ, ವಿನಯ ನಮಗೆ ಎಲ್ಲವನ್ನು ಪ್ರಾಪ್ತಿ ಮಾಡುತ್ತದೆ. ಆ ವಿನಯವನ್ನು ಕಲಿಸುವಂತದ್ದು ಶಿಕ್ಷಣದ ಜವಾಬ್ದಾರಿಯಾಗಿದೆ. ಇಂದಿನ ವಿದ್ಯಾರ್ಥಿಗಳಲ್ಲಿ ನೈತಿಕ ಶಿಕ್ಷಣದ ಕೊರತೆ ಇದೆ. ವಿದ್ಯಾರ್ಜನೆಗೆ ಬಂದ ನಾವು ಕೇವಲ ಮುಂದಿನ ಉತ್ತಮ ಉದ್ಯೋಗದ ಕನಸುಗಾರರೇ ಹೊರತು, ನಮ್ಮ ವ್ಯಕ್ತಿತ್ವ ನಿರ್ಮಾಣದ ರಚನಕಾರರಲ್ಲ. ಆಕಾರವಿಲ್ಲದ ಕಲ್ಲನ್ನು ಶಿಲ್ಪವನ್ನಾಗಿಸುವ ಕೆಲಸ ಶಿಕ್ಷಣದ್ದು, ಶಿಕ್ಷಕರದ್ದು ಆಗಿದೆ. ಇಂದಿನ ಕಲಿಕೆ ವಾರ್ಷಿಕ ಪರೀಕ್ಷೆ, ಸೆಮಿಸ್ಟರ್ ಪರೀಕ್ಷೆ ಮುಗಿದ ನಂತರ ಬಳಕೆಗೆ ಬರುತ್ತಿಲ್ಲ. ಇದಕ್ಕಾಗಿ ಶಿಕ್ಷಣ ಸಂಸ್ಥೆಗಳು ಉದ್ಯೋಗ ಸೃಷ್ಟಿಸುವ ಕಾರ್ಖಾನೆಗಳು ಎಂದರೆ ತಪ್ಪಿಲ್ಲ. ಇದರ ಬದಲು ಉದ್ಯೋಗ ಸೃಜಿಸುವ, ಅದರಿಂದ ಬದುಕನ್ನು ಕಟ್ಟಿಕೊಳ್ಳುವಂತಹ ನಿಯಮಗಳನ್ನು ರೂಪಿಸಿಕೊಳ್ಳಬೇಕಾಗಿದೆ.

ಶಿಕ್ಷಣವನ್ನು ಸಾರ್ವತ್ರಿಕ ನೆಲೆಗಟ್ಟಿನಲ್ಲಿ ಎಲ್ಲರಿಗೂ ಒದಗಿಸಲು ನಾವು ಕಟ್ಟಿಕೊಳ್ಳುವ ಶಿಕ್ಷಣ ವ್ಯವಸ್ಥೆ ಸಮಾನತೆ ಮತ್ತು ಸಾಮಾಜಿಕ ನ್ಯಾಯದ ನೆಲೆಗಟ್ಟಿನಲ್ಲಿರಬೇಕಾಗಿರುವುದು ನಾವೇ ರೂಪಿಸಿಕೊಂಡ ಸಂವಿಧಾನದ ಆಶಯ ಮತ್ತು ಆದ್ಯತೆಯಾಗಿದೆ. ಆದರೆ ರಾಜ್ಯದಲ್ಲಿ ನಾವು ಕಟ್ಟಿಕೊಂಡಿರುವ ಶಿಕ್ಷಣ ವ್ಯವಸ್ಥೆ ಇದಕ್ಕೆ ಅಪವಾದದ್ದಾಗಿದೆ. ಒಂದೆಡೆ ಅಸಮಾನತೆ ಮತ್ತು ತಾರತಮ್ಯವನ್ನು ತನ್ನ ಒಡಲಿನಲ್ಲಿರಿಸಿಕೊಂಡರೆ, ಮತ್ತೊಂದೆಡೆ ಖಾಸಗೀಕರಣ ಮತ್ತು ವ್ಯಾಪಾರೀಕರಣವನ್ನು ತನ್ನ ಮೂಲಮಂತ್ರವನ್ನಾಗಿಸಿದೆ. ಹಿಂದಿನ ಕಾಲದಲ್ಲಿ 'ಹಿಂದೆ ಗುರು ಇದ್ದ, ಮುಂದೆ ಗುರಿ ಇತ್ತು ಸಾಗುತ್ತಿತ್ತು ಜ್ಞಾನಿಗಳ ಹಿಂಡು, ಇಂದು ಹಿಂದೆ ಗುರು ಇಲ್ಲ, ಮುಂದೆ ಗುರಿ ಇಲ್ಲ ಸಾಗುತ್ತಿದೆ ಹೇಡಿಗಳ ದಂಡು' ಎಂಬ ಮಾತಿನಂತೆ ಒಬ್ಬ ರ್‍ಯಾಕ್ ಪಡೆದ ವಿದ್ಯಾರ್ಥಿ ನಾಲ್ಕು ಜನರೊಂದಿಗೆ ಬೆರೆಯುವ, ಮಾತನಾಡುವ, ಆಲೋಚನೆಗಳನ್ನು ಹಂಚಿಕೊಳ್ಳುವ ಕೌಶಲ್ಯವಿಲ್ಲವೆಂದರೆ, ಇಂದಿನ ನಮ್ಮ ಶಿಕ್ಷಣ ವ್ಯವಸ್ಥೆ ಎಷ್ಟರ ಮಟ್ಟಿಗೆ ಕುಸಿತ ಕಂಡಿದೆ ಎಂಬುದು ಸ್ಪಷ್ಟವಾಗಿದೆ. 'Experience cannot be explained' ಹಾಗಾಗಿ ಅನುಭವವನ್ನು ಅನುಭವಿಸುವ ಕಲೆಯನ್ನು ವಿದ್ಯಾರ್ಥಿಗಳಿಗೆ

ಕಲಿಸಬೇಕಾಗಿದೆ. ಅವರಿಗೆ ಶಿಕ್ಷಣದಲ್ಲಿ ಆಸಕ್ತಿ, ಕುತೂಹಲ ಇರಬೇಕೆ ವಿನಃ ಒತ್ತಡ ಇರಕೂಡದು. ಇದರಿಂದ ಅವರ ಮಾನಸಿಕ ಆರೋಗ್ಯ ಕೆಡುವುದರೊಂದಿಗೆ, ಶೈಕ್ಷಣಿಕವಾಗಿ ಹಿಂದೆ ಬೀಳುವ ಸಾಧ್ಯತೆಯಿದೆ. ಕೇವಲ ನಾಲ್ಕು ಗೋಡೆಗಳ ಮಧ್ಯೆ ನಮ್ಮ ಶಿಕ್ಷಣವನ್ನು ಸೀಮಿತಗೊಳಿಸದೆ ಕಲೆ, ಸಾಹಿತ್ಯ, ಸಂಗೀತ, ಕ್ರೀಡೆಯಂತಹ ಕ್ಷೇತ್ರಗಳತ್ತ ಶಿಕ್ಷಣದ ಪರಿಧಿಯನ್ನು ವಿಸ್ತರಿಸುವ ಜವಾಬ್ದಾರಿ ನಮ್ಮ ಶಿಕ್ಷಣ ವ್ಯವಸ್ಥೆಯದಾಗಿದೆ. ಆಗ ಮಾತ್ರ ನಮ್ಮ ಆ ಶಿಕ್ಷಣ ನೀತಿ ಕೇವಲ ಉದ್ಯೋಗ ಸೃಷ್ಟಿಸುವ ಕಾರ್ಖಾನೆಗಳು ಎಂಬ ಹಣೆಪಟ್ಟಿಯಿಂದ ಮುಕ್ತವಾಗಲು ಸಾಧ್ಯ.

ಇನ್ನು ಉನ್ನತ ಶಿಕ್ಷಣದ ಬಗ್ಗೆ ಹೇಳುವುದಾರೆ, ಗಳಿಸಿದ ಮಾಹಿತಿಯನ್ನು ಮರಳಿ ಮಂಡಿಸುವುದು ಎನ್ನುವಷ್ಟಕ್ಕೆ ಮಾತ್ರ ಸೀಮಿತವಾಗಿದೆ. ಅರ್ಹತಾ ಪರೀಕ್ಷೆಯಲ್ಲಿಯೂ ಮಾಹಿತಿಕೇಂದ್ರಿತ ಪ್ರಶ್ನೆಗಳನ್ನು ಕೇಳುತ್ತಿರುವುದು ಹೊಸ ಸಂಗತಿಯಲ್ಲ. ಇಲ್ಲಿ ಸಾಹಿತ್ಯ ಸಂವೇದನೆ, ಭಾಷಿಕ ಕುಶಲತೆ, ಸಾಮಾಜಿಕ ಅರಿವು ಮುಖ್ಯವಾಗುವುದೇ ಇಲ್ಲ. ಮಾಹಿತಿ ಜ್ಞಾನವಲ್ಲ. ಮಾಹಿತಿಯನ್ನು ವಿಶ್ಲೇಷಿಸಿ ವ್ಯಾಖ್ಯಾನಿಸಿ ಅದರಲ್ಲಿರುವ ಸಾಮಾನ್ಯ ತತ್ವವನ್ನು ಹೊರತೆಗೆಯುವುದೇ ಜ್ಞಾನವಾಗಿದೆ. ಈ ಜ್ಞಾನ ಕೇವಲ ಶೈಕ್ಷಣಿಕವಾಗಿ ಇರುವುದಿಲ್ಲ. ಸಾಮಾಜಿಕವಾಗಿ ಮತ್ತು ತತ್ವಶಾಸ್ತ್ರೀಯವಾಗಿರುತ್ತದೆ. ಮಾಹಿತಿಯಲ್ಲಿ ಜ್ಞಾನ 'ಕ್ಷೀರದೊಳಗಣ ಘೃತದಂತೆ, ಮರದೊಳಗಣ ಕಿಚ್ಚಿನಂತೆ' ಇರುತ್ತದೆ. ಅದನ್ನು ಹೊರ ತೆಗೆಯುವ ಕೆಲಸಕ್ಕೆ ತೊಡಗಿಸಿಕೊಳ್ಳಲಾಗದ ಮಾನಸಿಕ ಸ್ಥಿತಿ, ಮಾಹಿತಿಯೇ ಜ್ಞಾನ ಎಂಬ ಯಾಂತ್ರಿಕ ಕಲಿಕೆಗೆ ಪೂರಕವಾಯಿತು. ವ್ಯಕ್ತಿಯನ್ನು ಸಾಂಸ್ಕೃತಿಕ ಜಗತ್ತಿನಿಂದ ದೂರವಿರಿಸಿದ ಯಾಂತ್ರಿಕ ಮಾಹಿತಿ ಪ್ರಧಾನ ಪಾಠಗಳು, ಪಠ್ಯಗಳು ಸ್ವಂತ ಚಿಂತನೆ ಮತ್ತು ಕ್ರಿಯಾಶೀಲತೆಯನ್ನು ಹಾಳು ಮಾಡುತ್ತಿವೆ. ಜ್ಞಾನ ಮತ್ತು ಸ್ವತಂತ್ರ ಚಿಂತನೆಯನ್ನು ತಳ್ಳಿಹಾಕಿರುವ ಶಿಕ್ಷಣ ಸಂಸ್ಥೆಗಳು ಜ್ಞಾನವನ್ನು ಮತ್ತಷ್ಟು ಹೊಣೆಗೇಡಿಯನ್ನಾಗಿಸಿದೆ.

ಉದಾರೀಕರಣದ ಯುಗದಲ್ಲಿ ಉದ್ಯಮವಾಗಿ ಬೆಳೆದಿರುವ 'ಮಾಹಿತಿ–ತಂತ್ರಜ್ಞಾನ'ವು ಮಾರುಕಟ್ಟೆಯ ನೀತಿಗಳು, ಶಿಕ್ಷಣ ವಲಯವನ್ನು ಪ್ರಭಾವಿಸಿರುವುದಕ್ಕೆ ಮತ್ತು ಭಾರತದ ಜ್ಞಾನ, ಪರಂಪರೆಯಿಂದ ವಿಮುಖವಾಗುವುದಕ್ಕೆ ಇದು ಒಂದು ಕಾರಣವಾಗಿದೆ. ಇದರ ಹೆಸರೇ ಸೂಚಿಸುವಂತೆ ಮಾಹಿತಿ ಜ್ಞಾನದ ಅನ್ವಯವಷ್ಟೆ, ಆದರೆ ಜ್ಞಾನವಲ್ಲ. ಅಮೇರಿಕದ ತತ್ವಶಾಸ್ತ್ರಜ್ಞ ಅಲಾನ್ ಬ್ಲೂಮ್ ತಮ್ಮ 'ದಿ ಕ್ಲೋಸಿಂಗ್ ಆಫ್ ದಿ ಅಮೆರಿಕನ್ ಮೈಂಡ್' ಎಂಬ ಪುಸ್ತಕದಲ್ಲಿ ವಿಶ್ವವಿದ್ಯಾಲಯಗಳ ಜವಾಬ್ದಾರಿಗಳನ್ನು ವಿವರಿಸಿತ್ತಾ, 'ಉದಾರ ಶಿಕ್ಷಣಕ್ಕೆ ಬದ್ಧವಾಗಿರುವ ವಿಶ್ವವಿದ್ಯಾಲಯಗಳು, ತಮ್ಮ ವಿದ್ಯಾರ್ಥಿಗಳ ವ್ಯಕ್ತಿತ್ವ ಸಂಪೂರ್ಣತೆಯನ್ನು ಸಾಧಿಸಲು ನಿರಂತರವಾಗಿ ಶ್ರಮಿಸಬೇಕು. ಉನ್ನತ ಶಿಕ್ಷಣ ಎಂದರೆ ಉನ್ನತ ಕಲಿಕೆ. ಬೇಷರತ್ತಾದ ಉದಾರ ಶಿಕ್ಷಣದ ಪ್ರಸರಣಕ್ಕೆ ವಿಶ್ವವಿದ್ಯಾಲಯಗಳಲ್ಲಿ ಅವಕಾಶವಾಗದಿದ್ದಲ್ಲಿ ವಿದ್ಯಾರ್ಥಿಗಳು ಜ್ಞಾನದ ಅರ್ಜನೆಯಲ್ಲಿ ಅಜಾಗರೂಕರಾಗಿ, ವಿಚಾರಗಳ ಉಪಯುಕ್ತತೆ ಮತ್ತು ಅನುಪಯುಕ್ತತೆಯ ಮಧ್ಯೆ ಇರುವ ಗೆರೆಯನ್ನು ಗುರುತಿಸಲು ಅಸಮರ್ಥರಾಗುತ್ತಾರೆ'[೧೩] ಎಂದಿದ್ದಾರೆ. ಅಂದರೆ, ವಿಶ್ವವಿದ್ಯಾಲಯಗಳಲ್ಲಿ ಬೌದ್ಧಿಕ ಸ್ವಾತಂತ್ರ್ಯ, ಸೈದ್ಧಾಂತಿಕತೆ, ಸಹಿಷ್ಣುತೆ ಇರಬೇಕೆನ್ನುವುದಾಗಿದೆ.

ಇಂದು ಪ್ರಾಚೀನ ಕಾಲದಲ್ಲಿದ್ದಂತೆ ಕಠಿಣ ತಪಸ್ಸಿನಿಂದ ವಿದ್ಯೆಯನ್ನು ಪಡೆಯಬೇಕೆಂಬ ಅನಿವಾರ್ಯತೆ ಇಲ್ಲ. ಮುಂದುವರೆದಿರುವ ತಂತ್ರಜ್ಞಾನ, ನಮ್ಮ ಜ್ಞಾನವೃದ್ಧಿಗಾಗಿ ಅಪರಿಮಿತ ಸೌಲಭ್ಯಗಳನ್ನು ಮುಂದಿರಿಸಿದೆ. ಆದರೆ ಅದನ್ನು ಬಳಸಿಕೊಳ್ಳುವ ರೀತಿಯಲ್ಲಿ ಎಡವುತ್ತಿದ್ದೇವೆ. ಬೇಕಾದ ಕೆಲಸಗಳಿಗಿಂತ ಬೇಡದ ವಿಷಯಗಳೇ ನಮಗೆ ಹಿತವೆನಿಸಿತ್ತವೆ. ಇಂದಿನ ಸಾಮಾಜಿಕ ಅಂತರ್ಜಾಲಗಳು ಮಕ್ಕಳನ್ನು ಶಿಕ್ಷಿತರನ್ನಾಗಿಸುವುದಕ್ಕಿಂತ ಹೆಚ್ಚಾಗಿ ಅವರನ್ನು ಕಂಪ್ಯೂಟರ್‌ನ ಹುಳುಗಳನ್ನಾಗಿಸುತ್ತಿದೆ. ಇತ್ತೀಚಿಗೆ ಶಿಕ್ಷಣ ಕ್ಷೇತ್ರದಲ್ಲಿಯೂ ತಂತ್ರಜ್ಞಾನದ ಬಳಕೆ ಅತಿಯಾಗಿ ಆಗುತ್ತಿದೆ. ಶಿಕ್ಷಣದ ಪ್ರಸಾರ ಕ್ರಮದಲ್ಲಿ ಎಷ್ಟೇ ಬದಲಾವಣೆಗಳಾಗಿದ್ದರೂ, ಮೌಲ್ಯಯುತವಾದ ಶಿಕ್ಷಣ ನೀಡುವುದೇ ನಮ್ಮ ಉದ್ದೇಶವಾಗಿದ್ದರೆ, ನಮ್ಮ ಪೂರ್ವಜರ ಶಿಕ್ಷಣ ನೀತಿಯನ್ನು ಬಳಸುವುದೇ ಉಪಯುಕ್ತವೆನಿಸುತ್ತದೆ. ಕೇವಲ ತರಗತಿಯ ಮಧ್ಯೆ ನಿರ್ಧರಿತ ವಿಷಯಗಳನ್ನಷ್ಟೇ ಕಲಿಯುವ ಬದಲು ಅದನ್ನು ಚಿಂತಿಸಿ ವಿಮರ್ಶಕರಾಗಬೇಕು. ಕಲಿತ ವಿಷಯಗಳನ್ನು ಸುಮ್ಮನೆ ಒಪ್ಪಿಕೊಳ್ಳುವುದಕ್ಕಿಂತ ಅದರ ಆಗು–ಹೋಗುಗಳ ಬಗ್ಗೆ ಚಿಂತಿಸುವಂತಾಗಬೇಕು. ಇದು ಇಂದಿನ ಶಿಕ್ಷಣದ ಅಗತ್ಯವಾಗಿದೆ.

ಪ್ರಂಪಚದ ಎಲ್ಲಾ ಚಿಂತಕರೂ, ಶಿಕ್ಷಣತಜ್ಞರೂ ಶಿಕ್ಷಣದ ಸಾಮಾಜಿಕ ಹೊಣೆಗಾರಿಕೆಯನ್ನು ಒತ್ತಿ ಹೇಳಿದ್ದಾರೆ. ಭಾರತದ ಎಲ್ಲಾ ಶಿಕ್ಷಣ ಆಯೋಗಗಳೂ, ವರದಿಗಳು ಈ ಬಗ್ಗೆ ಚರ್ಚಿಸಿವೆ. ನಮ್ಮ ಸಂವಿಧಾನ ಕೂಡ ನಮ್ಮ ಶಿಕ್ಷಣ, ಸಮಾಜದ ಭವಿಷ್ಯ ಹೇಗಿರಬೇಕೆಂಬ ಬಗ್ಗೆ ಚಿಂತಿಸಿವೆ. ಆ ಭವಿಷ್ಯವನ್ನು ರೂಪಿಸುವಲ್ಲಿ ಶಿಕ್ಷಣ, ಉಳಿದ ಕ್ಷೇತ್ರಗಳಂತೆ ಕೆಲವು ಮೂಲಭೂತ ಆದರ್ಶಗಳನ್ನು ಹಾಕಿಕೊಳ್ಳಬೇಕಾಗಿದೆ. ಆ ಆದರ್ಶಗಳು ಸಮಾಜವಾದ, ಜ್ಯಾತ್ಯಾತೀತತೆ, ಸಾಮಾಜಿಕ ನ್ಯಾಯ, ಆರ್ಥಿಕ ಸಮಾನತೆಗಳೇ ಆಗಿವೆ. ಉಳಿದೆಲ್ಲಾ ಕ್ಷೇತ್ರಗಳಲ್ಲಿನ ಅಭಿವೃದ್ಧಿ ಸಂಕಲ್ಪದಂತೆ, ನಮ್ಮ ಶಿಕ್ಷಣವೂ ಕೂಡ ಈ ಆದರ್ಶ ಸಾಧನೆಗಾಗಿ ದುಡಿಯಬೇಕಾಗಿದೆ.

**೭.೨. ತಂತ್ರಜ್ಞಾನ ಪ್ರಣೀತ ಸಂಗತಿಗಳು**

ಮನುಷ್ಯ ಸಂಘಜೀವಿ, ಸಮಾಜಜೀವಿ, ವಿಚಾರಜೀವಿ. ಸಾಮಾಜಿಕ, ಸಾಂಸ್ಕೃತಿಕ ಆವರಣದಲ್ಲಿ ಬದುಕುವ ಆತ ಪ್ರತ್ಯೇಕವಾಗಿರಲು ಬಯಸುವುದಿಲ್ಲ. ವಿವಿಧ ಜನರ ಜೊತೆ ಸಂಬಂಧ ಸ್ಥಾಪನೆ ಮಾಡಿಕೊಳ್ಳುವ ವೇಳೆಯಲ್ಲಿ ಆತನ ಮನಸ್ಸಿನಲ್ಲಿ ಹಲವಾರು ಭಾವನೆಗಳು, ಕಲ್ಪನೆಗಳು, ವಿಚಾರಗಳು ಬೆಳೆಯುತ್ತವೆ. ಈ ವಿಚಾರವನ್ನು ಇತರರೊಂದಿಗೆ ಹಂಚಿಕೊಳ್ಳಲು ತನ್ನ ಅನುಭವ, ಜ್ಞಾನ ಹಾಗೂ ವಿಚಾರಗಳು ಸಮೂಹದ ಮೂಲಕ ಸಂವಹನಗೊಳ್ಳುತ್ತವೆ. ಅನುಭವಗಳ ಹಂಚಿಕೊಳ್ಳುವಿಕೆಯಲ್ಲಿ, ಜ್ಞಾನ ಪ್ರಸಾರದಲ್ಲಿ ಸಂಕೀರ್ಣವಾದ ಶಾಬ್ದಿಕ ಭಾಷೆ ಪ್ರಧಾನ ಪಾತ್ರ ವಹಿಸುತ್ತದೆ.

ಜ್ಞಾನ ಪ್ರಸಾರ ಮಾಧ್ಯಮವಾದ 'ಶಿಕ್ಷಣ' ಎಂಬ ಶಬ್ದವನ್ನು ವ್ಯಾಖ್ಯಾನಿಸುವುದು ಇಂದು ಕಠಿಣವಾಗಿದೆ. ಏಕೆಂದರೆ ಇಂದು ಶಿಕ್ಷಣದ ಪರಿಕಲ್ಪನೆ ಹೆಚ್ಚು ಸಂಕೀರ್ಣವಾಗತೊಡಗಿದೆ. ಶಿಕ್ಷಣ ಬದುಕಿಗೆ ಒಂದು ಮಾರ್ಗವನ್ನು ಒದಗಿಸುವ ಗುಣ ಹೊಂದಿರಬೇಕು ಎಂದು ಹೇಳುವ ಸಂಪ್ರದಾಯಸ್ಥ ಮನೋಭಾವದವರು ತಮ್ಮ ಕುಟುಂಬದ ಅನುವಂಶಿಕ ವೃತ್ತಿಯನ್ನೇ ಅನೌಪಚಾರಿಕವಾಗಿ ಮುಂಬರುವ ಪೀಳಿಗೆಗೆ ಕಲಿಸುತ್ತಿದ್ದವು. ಆದರೆ ಸನಾತನ ವ್ಯವಸ್ಥೆ ವಿಘಟನೆ ಹೊಂದಿ, ಭಾರತೀಯ ಸಮಾಜ

ಹೊಸ ರೂಪ ಪಡೆಯತೊಡಗಿದೆ. ಈ ಬದಲಾವಣೆ ವಿಜ್ಞಾನ-ತಂತ್ರಜ್ಞಾನ ಮತ್ತು ವ್ಯವಹಾರಿಕ ಜ್ಞಾನದ ಜಗತ್ತಿನತ್ತ ವಾಲುತ್ತಿದೆ. ಬದಲಾಗುತ್ತಿರುವ ಜಗತ್ತಿನಲ್ಲಿ ಶಿಕ್ಷಣ ಮತ್ತು ಜೀವನ ರೀತಿಗಳಲ್ಲಿ ವ್ಯತ್ಯಾಸವಾಗುತ್ತಿರುವಾಗ ಶಿಕ್ಷಣದ ಪರಿಣಾಮ ಕೇವಲ ಜ್ಞಾನಿಕ ಶಿಸ್ತಾಗುತ್ತಿದೆ. ಇದಲ್ಲದೆ ಮೂಲ ಮೌಲ್ಯಗಳೊಂದಿಗೆ ಅನುಸಂಧಾನ ಸಾಧ್ಯವಾಗುತ್ತಿಲ್ಲ. ಆದರೂ ಜಾಗತಿಕ ಬದಲಾವಣೆಯನ್ನು ನಾವು ಶಿಕ್ಷಣದ ಬದಲಾವಣೆಯೆಂದೆ ಅಂದುಕೊಳ್ಳುತ್ತಿದ್ದೇವೆ. ತಂತ್ರಜ್ಞಾನದ ಆವಿಸ್ಕಾರ ಮತ್ತು ವೈವಿಧ್ಯತೆಯನ್ನು ಬದಲಾವಣೆ ಎಂದುಕೊಂಡರೆ ಮೌಲ್ಯದ ಹುಡುಕಾಟ ಹೆಚ್ಚು ಅರ್ಥ ಪಡೆದುಕೊಳ್ಳತ್ತದೆ. ಒಂದು ಕಡೆ ಶಿಕ್ಷಣ ವ್ಯವಹಾರಿಕ ಜ್ಞಾನದ ಮಟ್ಟದಲ್ಲಿ ಭೌತಿಕ ಪ್ರಗತಿ ಕಂಡಿದೆ. ಸಾಂಸ್ಕೃತಿಕ ಲೋಕದೊಂದಿಗಿನ ಸಂಬಂಧವನ್ನು ಆಂತರಿಕವಾಗಿ ಕಳೆದುಕೊಳ್ಳುತ್ತಿದೆ.

ಆಧುನಿಕ ತಂತ್ರಜ್ಞಾನ ಆವಿಸ್ಕಾರವಾಗುವ ತನಕ ಹಲವಾರು ಸಮುದಾಯಗಳಲ್ಲಿ ಮೌಖಿಕ ಪರಂಪರೆಯೇ ಮನುಷ್ಯನ ಅಭಿವ್ಯಕ್ತಿಯ, ಸಂವಹನದ ಮಾಧ್ಯಮವಾಗಿತ್ತು. ಆದರೆ ತ್ವರಿತಗತಿಯಲ್ಲಿ ಬದಲಾಗುತ್ತಿರುವ ಆಧುನಿಕ ಜಗತ್ತಿಗೆ ಮೌಖಿಕ ಪರಂಪರೆ ಸರಿಹೊಂದುವುದಿಲ್ಲ. ಜ್ಞಾನಾನುಭವಗಳ ವಿಸ್ತರಣೆ ಹಾಗೂ ಪ್ರಸರಣದಲ್ಲಿ ನಮ್ಮ ಎದುರಿಗೆ ಇರುವವರನ್ನು ಮಾತ್ರ ಗಮನಿಸದೆ, ಎದುರಿಗೆ ಇಲ್ಲದವರನ್ನು ಗಮನದಲ್ಲಿಟ್ಟುಕೊಳ್ಳಬೇಕಾಗಿದೆ. ಜನ ಸಮೂಹಕ್ಕೆ ಅಗತ್ಯವಾದ ಮಾಹಿತಿ ಕೌಶಲಗಳನ್ನು ತಲುಪಿಸಲು ಸಮೂಹ ಮಾಧ್ಯಮಗಳಾದ ಟಿ.ವಿ. ರೇಡಿಯೋ, ಬಾನುಲಿ, ವಾರ್ತಾಪತ್ರಿಕೆ, ಫ್ಯಾಕ್ಸ್, ಮೊಬೈಲ್, ಟ್ವಿಟರ್, ಫೇಸ್‌ಬುಕ್. ಇ-ಮೇಲ್, ಚಲನಚಿತ್ರದಂತಹ ಮುಂತಾದ ಮಾಧ್ಯಮಗಳನ್ನು ಬಳಸಿಕೊಳ್ಳಲಾಗುತ್ತದೆ. ಇವು ರಾಷ್ಟ್ರೀಯ, ಅಂತರಾಷ್ಟ್ರೀಯ ಸುದ್ಧಿ ವಿಚಾರಗಳನ್ನು, ರಾಷ್ಟ್ರದ ಸಂಸ್ಕೃತಿ, ಸಂಪ್ರದಾಯ, ಸಾಮಾಜಿಕ ಜೀವನ, ರಾಜಕೀಯ ಜೀವನದ ವಿಚಾರ ಮಂಥನಕ್ಕೆ ಅವಕಾಶ ಕಲ್ಪಿಸಿದೆ. 'ಲೇಖನಿ ಖಡ್ಗಕ್ಕಿಂತ ಹರಿತವಾದುದು' ಎನ್ನುವಂತೆ ಸಾಮೂಹಿಕ ಸಂಪರ್ಕ ಸಾಧನವಾಗಿ ಕಾರ್ಯ ನಿರ್ವಹಿಸುತ್ತದೆ. ವೈಜ್ಞಾನಿಕ ಹಾಗೂ ತಾಂತ್ರಿಕ ಪ್ರಗತಿಯಿಂದ ಹುಟ್ಟಿದ ಈ ಸಾಧನಗಳು ಅನೌಪಚಾರಿಕವಾಗಿ ಶೈಕ್ಷಣಿಕ ಮೌಲ್ಯಗಳನ್ನು ಒಳಗೊಂಡಿರುತ್ತವೆ. ದೇಶ ಅಥವಾ ಸಮಾಜದ ಹಾಗೂ ರಾಷ್ಟ್ರದ ಜನತೆಗೆ ತಾನು ಹಾಕಿಕೊಳ್ಳುವ ವಿವಿಧ ಮೌಲ್ಯಗಳನ್ನು ತಿಳಿಸುತ್ತದೆ.

ವರ್ತಮಾನ ಪತ್ರಿಕೆ: ವರ್ತಮಾನ ಪತ್ರಿಕೆಗಳನ್ನು ಅರಿಯುವ ಮೊದಲು, ಶಿಕ್ಷಣ ಕೆಲವರ ಸ್ವತ್ತಾಗಿತ್ತು. ಮುದ್ರಣದಿಂದ ಜ್ಞಾನ ಪ್ರಸಾರ ಒಂದು ಹೊಸ ಯುಗವನ್ನು ಆರಂಭಿಸಿತು. ಇದರಿಂದ ಮಾನವನ ಜ್ಞಾನರಾಶಿ, ಪುಸ್ತಕದ ರೂಪದಲ್ಲಿ ಹರಡಿತು. ದೈನಂದಿನ ಘಟನೆಗಳ ಬಗ್ಗೆ ಶೀಘ್ರವಾಗಿ ಮಾಹಿತಿ ನೀಡುವುದಲ್ಲದೆ, ಜನರಲ್ಲಿ ವಿಮರ್ಶಾತ್ಮಕ ಬುದ್ಧಿಯನ್ನು ಬೆಳೆಸುತ್ತದೆ.

ಬಾನುಲಿ: ಇದು ಭಾರತದ ಅನಕ್ಷರಸ್ಥರಿಗೂ, ಬಡವರಿಗೂ ಶಿಕ್ಷಣ ಕೊಡಬಲ್ಲ ಒಂದು ಮಾಧ್ಯಮ. ವೈವಿಧ್ಯಮಯ ಕಾರ್ಯಕ್ರಮ ಹಾಗೂ ಸಾರ್ವತ್ರಿಕ ಶಿಕ್ಷಣ ನೀಡುವ ವಿಶೇಷ ಸಾಧನವಾಗಿದೆ. ಮಕ್ಕಳಿಗೆ ಶಿಕ್ಷಣದಲ್ಲಿನ ಜ್ಞಾನವನ್ನು ಒದಗಿಸುವಲ್ಲಿ, ಮನೋರಂಜನೆ ನೀಡುವಲ್ಲಿ ಇದರ ಪಾತ್ರ ಹಿರಿದು.

ಚಲನಚಿತ್ರ: ಜನರ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರುತ್ತದೆ. ಇದು ವಿರಾಮ ಕಾಲದ ಶಿಕ್ಷಣ ಸಾಧನ. ಮೊದಲು ಮನರಂಜನಾ ಮಾಧ್ಯಮವಾಗಿ ಬಳಕೆಗೆ ಬಂದರೂ, ನಂತರ ಜನರಿಗೆ ನಮ್ಮ ಸಂಸ್ಕೃತಿಯ ಪರಿಚಯ ಮಾಡಿಕೊಡುತ್ತಾ ಬಂದಿದೆ. ಶೈಕ್ಷಣಿಕ ವಿಷಯವನ್ನು ಆಧರಿಸಿದ ಚಿತ್ರಗಳು ಕಣ್ಣಿನಿಂದ ನೋಡಿ, ಕಿವಿಯಿಂದ ಕೇಳಿದ ಸಂಗತಿಗಳು ಮಕ್ಕಳ ಮನಸ್ಸಿನ ಮೇಲೆ ಪ್ರಭಾವ ಬೀರಿ ಬಹುದಿನಗಳವರೆಗೆ ಉಳಿಯುತ್ತವೆ. ಆದರೆ ಇಂದು ಸಿನಿಮಾ ಮಂದಿರಗಳಲ್ಲಿ ಪ್ರದರ್ಶಿತವಾಗುವ ಚಿತ್ರಗಳಲ್ಲಿ ಶೈಕ್ಷಣಿಕ ಅಂಶಗಳು ಮಾಯವಾಗಿ, ಹಣದ ದಾಹ ಹೆಚ್ಚಾಗಿ ದುರುಪಯೋಗವಾಗುತ್ತಿದೆ.

ದೂರದರ್ಶನ: ಸುದ್ದಿ ಪ್ರಸಾರ ಮಾಡುವ ಸಾಧನವಾಗಿದೆ. ವಿಶ್ವದ ಎಲ್ಲಾ ಘಟನೆಗಳನ್ನು ಚಿತ್ರಸಹಿತ ವಿವರಗಳನ್ನು ಪ್ರಸಾರ ಮಾಡುತ್ತದೆ. ಮಕ್ಕಳಿಗಾಗಿ ವಿಶೇಷ ಪಾಠಗಳು, ವಿಜ್ಞಾನ, ಭಾಷೆ, ಸಮಾಜ ಮುಂತಾದ ವಿಷಯಗಳಿಗೆ ಪೂರಕವಾಗಿ ಪ್ರಸಾರ ಮಾಡುತ್ತದೆ. ಹೊಸ ಹೊಸ ಆವಿಷ್ಕಾರಗಳು, ಸಾಹಸಗಳು, ಸಾಧನೆಗಳ ವಿವರಗಳನ್ನು ನೀಡುತ್ತಾ, ಮಕ್ಕಳ ಸಾಮಾನ್ಯಜ್ಞಾನ ಭಂಡಾರವನ್ನು ಬೆಳೆಸುತ್ತಿದೆ.

ಈ ಎಲ್ಲಾ ಸಮೂಹ ಮಾಧ್ಯಮಗಳು ಶೀಘ್ರವಾಗಿ ಮಾಹಿತಿ ಪ್ರಸಾರ ಮಾಡುತ್ತವೆ ಎನ್ನಲಾಗದು. ಪತ್ರಿಕೆಯಂತಹ ಒಂದು ಮಾಧ್ಯಮ ಎಲ್ಲಾ ಜನರಿಗೂ ತಲುಪುವುದು ಮತ್ತು ಪರಿಣಾಮಕಾರಿಯಾಗುವುದು ಅಕ್ಷರಸ್ಥ ಸಮಾಜದಲ್ಲಿ ಮಾತ್ರ. ಆದರೆ ಅನಕ್ಷರಸ್ಥರು ಪತ್ರಿಕೆಗಳನ್ನು ಓದಲು ಸಾಧ್ಯವಿಲ್ಲದೆ, ಅತ್ಯಾಧುನಿಕ ಹಾಗೂ ತೀರ ಈಚಿನ ಮಾಹಿತಿ, ಜ್ಞಾನ ಹಾಗೂ ಕೌಶಲಗಳಿಂದ ದೂರವಾಗಿದೆ. ಅಕ್ಷರ ಬಲ್ಲವರಲ್ಲೂ ಪತ್ರಿಕೆ ಓದುವವರ ಸಂಖ್ಯೆ ವಿರಳ. ಹೀಗಾಗಿ ಅನಕ್ಷರಸ್ಥರು, ಅರೆಸಾಕ್ಷರರು ಪ್ರಧಾನವಾಗಿ, ಟಿ.ವಿ. ಚಲನಚಿತ್ರ, ರೇಡಿಯೋ, ಬಾನುಲಿಯಂತಹ ಮಾಧ್ಯಮಗಳನ್ನು ಆಶ್ರಯಿಸಿದ್ದಾರೆ. ಇವೆಲ್ಲವೂ ೨೦ನೇ ಶತಮಾನದ ತಾಂತ್ರಿಕ ಕ್ರಾಂತಿಯ ಆವಿಸ್ಕಾರಗಳಾಗಿವೆ. ಅಕ್ಷರದ ಆವಿಷ್ಕಾರದಿಂದ ಮೌಖಿಕ ಶ್ರಾವ್ಯ ಪರಂಪರೆಯು ಕುಸಿತ ಕಂಡಿದೆ. ಅಕ್ಷರಬಲ್ಲ ಜನ ತಮ್ಮ ಜ್ಞಾನಾನುಭವಗಳನ್ನು ಇನ್ನೊಬ್ಬರೊಂದಿಗೆ ಹಂಚಿಕೊಳ್ಳುವ ಬದಲು ಬರೆದಿಡುವ, ಮುದ್ರಿಸುವ ಕೆಲಸ ಆರಂಭವಾಯಿತು. 'ಬರವಣಿಗೆಯಿಂದ ಸಂವಹನದ ದಾಖಲಾತಿ ಸಾಧ್ಯವಾಯಿತು. ಮುದ್ರಣದಿಂದ ಅದರ ತ್ವರಿತಗತಿಯ ಪ್ರಸಾರ, ವಿತರಣೆ ಸಾಧ್ಯವಾಯಿತು'[೧೪] ಎಂದು ರೆಮೆಂಡ್ ವಿಲಿಯಮ್ಸ್ ಹೇಳುತ್ತಾರೆ. ಇದರಿಂದ ಜ್ಞಾನ ಎಲ್ಲರ ಸ್ವತ್ತಾಗುವ ಬದಲು ಅಕ್ಷರ ಬಲ್ಲವರ ಸಾಧನವಾಗತೊಡಗಿತು. ಸ್ವಾರ್ಥಿ ಮಾನವನ ಕೈಯಲ್ಲಿ ಅಕ್ಷರ, ಅರಿವಿನ ಆಗರವಾಗುವ ಬದಲು, ಕೆಲವರ ಸ್ವತ್ತಾಗಿ, ಶೋಷಣೆಯ ಅಸ್ತ್ರವಾಯಿತು.

ಶಿಕ್ಷಣವು ಒಂದು ನಿರ್ದಿಷ್ಟ ಬೋಧನೆಗೆ ಸೀಮಿತವಾದುದಲ್ಲ. ಅದು ಬಹುಮುಖವಾದುದು. ಇಂದು ಸಾಂಪ್ರದಾಯಕ ಪಠ್ಯಕ್ರಮ, ಬೋಧನಾ ವಿಧಾನಗಳೆಲ್ಲವೂ ಅರ್ಥಹೀನವಾಗಿವೆ. ಇಂದಿನ ಮಕ್ಕಳಿಗೆ ಆಧುನಿಕ ವಿಚಾರಧಾರೆ, ನವೀನ ತಂತ್ರಜ್ಞಾನದ ಸೌಲಭ್ಯಗಳು ಹಾಗೂ ಪರಿಕರಗಳ ಅಗತ್ಯವಿದೆ. ಆಧುನಿಕ ಜ್ಞಾನದ ವಾಸ್ತವಿಕ ಪ್ರಪಂಚದ ಅದ್ಭುತ ಬೆಳವಣಿಗೆಯನ್ನು ತೋರಿಸುತ್ತಿವೆ.

ಮೊಬೈಲ್, ಕಂಪ್ಯೂಟರ್, ಲ್ಯಾಪ್‌ಟಾಪ್, ಟ್ವಿಟರ್‌ಗಳಂತಹ ವಸ್ತುಗಳು ಹೊಸ ಜಗತ್ತನ್ನೇ ಸೃಷ್ಟಿಸಿ, ಜನಜೀವನದ ಭಾಗವಾಗಿ ಹೋಗಿವೆ. ಇಂದು ತಾಂತ್ರಿಕ ಜಗತ್ತು ಸಾಂಸ್ಕೃತಿಕ, ಶೈಕ್ಷಣಿಕ ಜಗತ್ತಿನಲ್ಲಿ ಸ್ನಾತಕೋತ್ತರ ಪದವಿಧರನನ್ನು, ಅವನ ವೃತ್ತಿ ಅನುಭವವನ್ನು ಬಡವನನ್ನಾಗಿಸುತ್ತಿವೆ. ಮೊಬೈಲ್ ಬಳಕೆ ಇಂದು ಚಿಕ್ಕ ಬಾಲಕನ ಕೈಯಲ್ಲಿ ಸರಾಗವಾಗಿ ಚಲನೆಗೊಳ್ಳುತ್ತದೆ. ಆದರೆ ಒಬ್ಬ ಪ್ರಾಧ್ಯಾಪಕನಲ್ಲಿ ಇದರ ಕುರಿತು ಅಜ್ಞಾನಕ್ಕೆ ಕಾರಣವಾಗುತ್ತದೆ. ಈ ವಿಷಯದಲ್ಲಿ ದಡ್ಡರೆಂಬಂತೆ ಬಿಂಬಿತವಾಗುತ್ತದೆ. ಇದು ಕೇವಲ ವಿದ್ಯೆ ಮಾತ್ರವಲ್ಲ, ಈ ವಿದ್ಯೆಯಲ್ಲಿ ಹೊಸ ಜಗತ್ತಿನ ಆವಿಷ್ಕಾರ ತುಂಬಿಕೊಂಡಿದೆ. ಜಾಗತಿಕ ಬದಲಾವಣೆಗೂ, ಶಿಕ್ಷಕನ ಮನೋಧರ್ಮಕ್ಕೂ ಸಂಬಂಧ ಕಲ್ಪಿಸಿದಾಗ, ಬದಲಾವಣೆ ಶಿಕ್ಷಕನ ಅಜ್ಞಾನಕ್ಕೆ ಕಾರಣವಾಗುತ್ತದೆ. ಇಷ್ಟೇ ಅಲ್ಲ, ಹೊಸ ಪೀಳಿಗೆಗೆ ಇದೊಂದು ಕಾಣಿಕೆಯಾಗಿದೆ. ಇದು ಕೇವಲ ಒಂದು ಪ್ರದೇಶದ ಜನರಿಗೆ ವಿದ್ಯೆಯಾಗಿ, ಭಾಷೆಯಾಗಿ, ಮಾರಾಟದ ವಸ್ತುವಾಗಿ, ವ್ಯವಹಾರಿಕವಾಗಿ ಮಾತ್ರ ಬೆಳವಣಿಗೆಯಾಗುತ್ತಿಲ್ಲ. ಇದು ಜಾಗತಿಕ ಮಾನವನ ಕುಲಕ್ಕೆ ಔದ್ಯೋಗಿಕ ಸಂಪತ್ತಾಗಿದೆ.

೧೯೨೦ರಿಂದ ರೇಡಿಯೋ, ದೂರದರ್ಶನಗಳ ಮೂಲಕ ಪ್ರಾರಂಭಗೊಂಡ ತರಗತಿಯ ಬೋಧನಾ ಕ್ರಮ, ಪ್ರಸ್ತುತದವರೆಗೂ ಸಾಗಿಕೊಂಡು ಬಂದಿದೆ. ಇಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳು ಸಿದ್ಧಪಾಠಗಳಾಗಿದ್ದು, ಶಿಕ್ಷಕನ ಬದಲಿಗೆ ಕೆಲಸ ಮಾಡುತ್ತವೆ. ಇದು ತರಗತಿಯ ಬೋಧನೆಯ ಮಟ್ಟದಲ್ಲಿ ಸುಧಾರಣೆ ಮತ್ತು ಸಂಪನ್ಮೂಲದ ಕೊರತೆ ಇರುವ, ಸರಿಯಾಗಿ ತರಬೇತಿ ಪಡೆದ ಶಿಕ್ಷಕರಿಲ್ಲದ ಶಾಲೆಗಳಿಗೆ ರಚನಾತ್ಮಕವಾಗಿ ಸಹಾಯವಾಗಿವೆ. ಬಹುಮುಖಿ ಕಲಿಕೆ, ವೆಬ್ ಆಧಾರಿತ ಬೋಧನೆ, ತಂತ್ರಜ್ಞಾನಗಳಲ್ಲಿ ಮತ್ತು ವಿಜ್ಞಾನದ ಪ್ರಾಯೋಗಿಕ ಚಟುವಟಿಕೆಗಳು, ವಯಸ್ಕರ ಸಾಕ್ಷರತೆ, ಮಹಿಳಾ ಶಿಕ್ಷಣ ಮತ್ತು ಕೆಲಸಗಾರರ ಉನ್ನತೀಕರಣ ಮೊದಲಾದ ಶೈಕ್ಷಣಿಕ ರಂಗಗಳಲ್ಲಿ ತಂತ್ರಜ್ಞಾನವನ್ನು ರೂಪಿತ ಉದ್ದೇಶ ಸಾಧನೆಗಳ ಈಡೇರಿಕೆಗಳಿಗಾಗಿ ಬಳಸಲಾಗುತ್ತದೆ.

ಆದರೆ ಈ ಆಧುನೀಕರಣದಿಂದ ಕುಲಕಸುಬುದಾರರಲ್ಲಿರುವ ಕರಕೌಶಲ್ಯ, ಪ್ರತಿಭೆ, ಕಾರ್ಯವಿಧಾನಗಳೆಲ್ಲವೂ ಸೊರಗುತ್ತಿವೆ. ನಶಿಸಿ ಹೋಗುತ್ತಿವೆ. ಪ್ರತಿಭೆ ವಲಸೆಯನ್ನು ತಡೆದು, ಮಾನವ ಸಂಪತ್ತನ್ನು ಉತ್ಪಾದನಾ ನೈಪುಣ್ಯತೆಗೆ ಒಳಪಡಿಸಬೇಕು. ಮಾನವ ಸಂಪತ್ತಿನ ದುರ್ಬಳಕೆ ಕೂಡ ಎಷ್ಟೋ ವೃತ್ತಿ ಸಮುದಾಯಗಳನ್ನು ಅಭಿವೃದ್ಧಿ ರೇಖೆಯಿಂದ ಹೊರಗೆ ನೂಕಿದೆ. ಈ ವೃತ್ತಿ ಸಮುದಾಯಗಳ ಮಾನವ ಸಂಪತ್ತು, ಉತ್ಪಾದನಾ ವಾಹಕಕ್ಕೆ ಇನ್ನೂ ಸೂಕ್ತವಾಗಿ ಬಳಕೆಯಾಗಿಲ್ಲ. ನಮ್ಮ ಕುಲಕಸುಬುಗಳನ್ನು ಉತ್ತಮ ಉತ್ಪಾದನಾ ಘಟಕವಾಗಿ ರೂಪಿಸುವಲ್ಲಿ ವ್ಯವಸ್ಥೆ ಸೋತಿದೆ. ಇಂದು ದೇಶಿ ನೈಪುಣ್ಯತೆ, ತಂತ್ರಜ್ಞಾನಗಳು ಕೂಡ ತಮ್ಮ ಆಕರ್ಷಣೆ ಮತ್ತು ಸಾಮರ್ಥ್ಯವನ್ನು ಕಳೆದುಕೊಂಡಿವೆ. ಇಂದಿನ ಆಧುನಿಕ ತಂತ್ರಜ್ಞಾನ ಬಹಳ ಸೂಕ್ಷ್ಮವಾಗಿ ಉತ್ಪಾದನಾ ವಿಧಾನವನ್ನೇ ಬದಲಿಸಿವೆ. ಅದಕ್ಕಾಗಿಯೇ ಕೈಗಾರಿಕಾ ಕ್ರಾಂತಿಗಳು ಘಟಿಸಿವೆ. ತಂತ್ರಜ್ಞಾನ ಇವತ್ತು ಜಗತ್ತನ್ನು ಆಳುತ್ತಿದೆ. ತಂತ್ರಜ್ಞಾನ ಮತ್ತು ವಿಜ್ಞಾನಗಳಿಂದ ಆರ್ಥಿಕ ಜಗತ್ತು ವಿಶಾಲವಾಗಿದೆ.

ಸರಕು ಸಂಸ್ಕೃತಿ ಜಗತ್ತಿನಾದ್ಯಂತ ವ್ಯಾಪಿಸಿ, ಜಗತ್ತನ್ನು ಒಂದು ದೊಡ್ಡ ಮಾರುಕಟ್ಟೆಯನ್ನಾಗಿಸಿದೆ. ಇದರಿಂದ ನೆಲಮೂಲ ಸಂಸ್ಕೃತಿಯ ಭಿನ್ನ ಮಾದರಿಯ ವಸ್ತುಗಳು ಮೂಲೆಗುಂಪಾಗಿವೆ. ವ್ಯಾಪಾರ ಮತ್ತು ಲಾಭವನ್ನೇ ಮುಖ್ಯ ಉದ್ದೇಶವನ್ನಾಗಿಸಿಕೊಂಡ ಜಾಗತೀಕರಣ, ನಮ್ಮ ಸಂಸ್ಕೃತಿಯ ಮೇಲೂ ಪ್ರಭಾವ ಬೀರಿದೆ. ಅಂದರೆ ಮನುಷ್ಯ, ನಿಸರ್ಗದ ಜೊತೆ ಜೀವನ ನಿರ್ವಹಣೆಗಾಗಿ ನಡೆಸಿದ ಹೋರಾಟ ಮತ್ತು ಹೊಂದಾಣಿಕೆಯಲ್ಲಿ ಸಂಸ್ಕೃತಿ ರೂಪುಗೊಳ್ಳುತ್ತದೆ. ಶ್ರಮದ ದುಡಿಮೆ ಹೆಚ್ಚಿದಷ್ಟು ಸಂಸ್ಕೃತಿಯ ವಿಕಾಸವಾಗುತ್ತದೆ. ವೈಟ್ ಎಂಬ ಚಿಂತಕ ಮನುಷ್ಯನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತದೋ, ಅಷ್ಟಷ್ಟು ಸಂಸ್ಕೃತಿ ವಿಕಾಸವಾಗುತ್ತದೆ ಎಂದಿದ್ದಾನೆ. ಸಂಸ್ಕೃತಿ ಎಂದಾಗ ಅದರಲ್ಲಿ ಜ್ಞಾನ, ವಿಜ್ಞಾನ, ಆಚರಣೆ, ನಂಬಿಕೆ ಎಲ್ಲವೂ ಇದೆ. ವಿಜ್ಞಾನ ಮತ್ತು ತಂತ್ರಜ್ಞಾನ ಸಂಸ್ಕೃತಿಯ ಭಾಗವಲ್ಲ ಎಂದು ಒಡೆದು ನೋಡುವ ಮನೋಭಾವವನ್ನು ಇಂದಿನ ವೈಜ್ಞಾನಿಕ ವಿದ್ಯಾಭ್ಯಾಸ ಕ್ರಮ ಮನದಟ್ಟು ಮಾಡುತ್ತದೆ.

ಇಂದಿನ ವಿದ್ಯೆ ಭಾಷೆ, ಸಾಹಿತ್ಯ, ಸಂಸ್ಕೃತಿ, ಕಲೆಗಳ ಬಗ್ಗೆ ಸಂಬಂಧ ಪಡದವರಂತೆ ಬೆಳೆಸುತ್ತಿದೆ. ಇವರೆಲ್ಲರ ದೃಷ್ಟಿ ಡಾಕ್ಟರ್, ಇಂಜಿನಿಯರ್‌ನಂತಹ ಪ್ರತಿಷ್ಠಿತ ಹುದ್ದೆಗೆ ಏರುವ ಕಡೆಗಿದೆ. ಇಲ್ಲವೇ ಯಾವುದಾದರೊಂದು ಬಹುರಾಷ್ಟ್ರೀಯ ಕಂಪನಿಯಲ್ಲಿ ಉದ್ಯೋಗ ದೊರೆಕಿಸಿಕೊಳ್ಳುವುದಾಗಿದೆ. ಇದು ಬುದ್ಧಿವಂತಿಕೆಯನ್ನು ಅರ್ಥಾತ್ ತಂತ್ರಜ್ಞಾನವನ್ನು ಹಣದ ಆಕರ್ಷಣೆಗೆ ಒಡ್ಡುವಂತದ್ದಾಗಿದೆ. ಇದರಿಂದ ದೇಶೀಯ ತಂತ್ರಜ್ಞಾನ ಹಿಂದೆ ಬಿದ್ದು, ವಿದೇಶಿಯ ತಂತ್ರಜ್ಞಾನಕ್ಕೆ ವಿಧಿಯಿಲ್ಲದೆ ಜೋತು ಬೀಳುವ ಪರಿಸ್ಥಿತಿ ಅನಿವಾರ್ಯವಾಗಿ ಸೃಷ್ಟಿಗೊಳ್ಳುತ್ತದೆ. ಭಾರತದಲ್ಲಿನ ಕುಶಲಕರ್ಮಿಯೊಬ್ಬ ತನ್ನ ಕೌಶಲ್ಯವನ್ನು ಉತ್ಪಾದನೆಯಲ್ಲಿ ಮಾತ್ರ ಪ್ರಕಟಿಸಬಲ್ಲ. ಉತ್ಪಾದನೆಯ ಹೊರತಾಗಿ ಕೌಶಲ್ಯವನ್ನು ಕೇವಲ ಜ್ಞಾನವಾಗಿ ಪರಿವರ್ತಿಸಲು ಆಗುವುದಿಲ್ಲ. ಉದಾ: ಒಬ್ಬ ಬಡಗಿ ಒಂದು ಎತ್ತಿನ ಬಂಡಿಯನ್ನು ತಯಾರಿಸುವಲ್ಲಿ ತನ್ನ ಜ್ಞಾನವನ್ನು ಪ್ರಕಟಿಸಬಲ್ಲ. ಅವನಿಂದ ಅದನ್ನು ಕಲಿಯುವಾತನು ಬಂಡಿ ತಯಾರಿಕೆಯಲ್ಲಿ ಭಾಗವಹಿಸಿಯೇ ಕಲಿಯಬೇಕು. ಇಲ್ಲಿಯ ಕುಶಲಕರ್ಮಿಯ ಉತ್ಪಾದನೆಯ ಪರಿಕರಗಳು, ಮೂಲವಸ್ತುಗಳು ಹಾಗೂ ತಯಾರಾದ ವಸ್ತುಗಳು ಆಯಾ ಪ್ರದೇಶದ ಸಾಧ್ಯತೆ ಅವಶ್ಯಕತೆಗಳನ್ನು ಅವಲಂಬಿಸಿ ರೂಪುಗೊಂಡಿರುತ್ತದೆ. ಆದರೆ ಇದಕ್ಕೆ ವಿರುದ್ಧವಾದ ಟ್ರಾಕ್ಟರ್‌ನ್ನು ನೋಡುವುದಾದರೆ, ಇದಕ್ಕೆ ಬೇಕಾದ ಬಿಡಿ ಭಾಗಗಳನ್ನು ತಯಾರಿಸುವವರು, ವಿನ್ಯಾಸಗೊಳಿಸುವವರು, ಅದನ್ನು ಜೋಡಿಸುವವರು ಬೇರೆ ಬೇರೆಯಾಗಿರುತ್ತಾರೆ. ಇವರಿಗೆ ಒಬ್ಬರ ಕೆಲಸ ಇನೊಬ್ಬರಿಗೆ ತಿಳಿದಿರುವುದಿಲ್ಲ. ಇದರಿಂದ ಟ್ರಾಕ್ಟರಿನ ಕುಶಲಕರ್ಮಿ ಯಾರೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಇದಕ್ಕೆ ನಾನಾ ರೀತಿಯ ಆಕರ್ಷಣೆಗೆ ಒಡ್ಡಿ ಜನರನ್ನು ಮೋಸಗೊಳಿಸುತ್ತಾರೆ. ಆ ಸಮಯದಲ್ಲಿ ಅಲ್ಲಿನ ಸಾಂಸ್ಕೃತಿಕ ಪರಿಕರಗಳನ್ನು ಬಳಸಿಕೊಂಡು ಆಕರ್ಷಕ ಜಾಹೀರಾತಿನ ಮೂಲಕ ಜನರ ಮನಸ್ಸನ್ನು ಕೆಡೆಸುವ ಕೆಲಸ ಆರಂಭವಾಗುತ್ತದೆ. ಇದರಿಂದ ಗೃಹ ಕೈಗಾರಿಕೆಗಳು ನಶಿಸುವಂತಾಗಿವೆ. ಇಲ್ಲಿ ಗೃಹ ಕೈಗಾರಿಕೆಗಳು ಕೇವಲ ಮಾರಾಟದ ಸರಕಲ್ಲ. ಅದರ ಹಿಂದೆ ದುಡಿಮೆಯಿದೆ. ಆ ದುಡಿಮೆಯಿಂದ ರೂಪುಗೊಂಡ

ಸಂಸ್ಕೃತಿಯಿದೆ. ಆ ವಸ್ತು ಸಂಸ್ಕೃತಿಯ ಭಾಗವಾಗಿರುವುದರಿಂದ ಅದಕ್ಕೊಂದು ಆಚರಣೆಯಿದೆ. ಕಡಿಮೆ ಮೂಲವಸ್ತು, ಹೆಚ್ಚು ದೈಹಿಕ ಶ್ರಮ, ಸೀಮಿತ ಮಾರುಕಟ್ಟೆ ಇರುವುದರಿಂದ ಬಂಡವಾಳ ಹೂಡಿಕೆ, ಕಡಿಮೆ ವಸ್ತು, ಸ್ಥಳೀಯ ಮೂಲವಸ್ತುವಿನಿಂದ ತಯಾರಾಗಿರುವುದರಿಂದ ಹಾಳಾದರೂ ಪುನಃ ಬೇಡಿಕೆಯಿರುತ್ತದೆ. ಆಗ ಕುಶಲಕರ್ಮಿಗೆ ನಿರಂತರ ಉದ್ಯೋಗ ದೊರಕುತ್ತದೆ. ಅಲ್ಲದೆ ಇಲ್ಲಿನ ಸಮಾಜದಲ್ಲಿ ಕೊಡು ಕೊಳ್ಳುವಿಕೆಯ ಪರಸ್ಪರ ಸಹಕಾರ ಸಂಬಂಧ, ಮಾನವೀಯ ಸಂಬಂಧಗಳು, ವರ್ಣ ವರ್ಗದ ವೈರುಧ್ಯಗಳ ನಡುವೆಯೂ ತುಂಬಾ ಗಾಢವಾಗಿರುತ್ತವೆ. ಯಾವಾಗ ಕುಶಲ ಸಾಮಾನುಗಳ ಮಾರುಕಟ್ಟೆಗೆ ಹಣ ಪ್ರವೇಶಿಸಿತೋ, ಆಗ ಮಾನವೀಯ ಸಂಬಂಧಗಳೂ, ದುಡಿಮೆಯ ಸಂಬಂಧಗಳು ಕ್ಷೀಣಿಸಿದವು. ಆಧುನೀಕರಣ ಸೃಷ್ಟಿ ಮಾಡಿದ ಏಕಸ್ವರೂಪದ ಉದ್ಯೋಗದಿಂದ ಉಳಿದವರು ನಿರುದ್ಯೋಗಿಗಳಾಗುತ್ತಿದ್ದಾರೆ. ಕೈಗಾರಿಕೆಗಳು ಇಂತಹ ಬಹು ವಿಧದ ಉದ್ಯೋಗಗಳನ್ನು ಸೃಷ್ಟಿ ಮಾಡಲು ಸಾಧ್ಯವಿಲ್ಲ.

ಅದರಂತೆಯೇ ಮಾಹಿತಿ ತಂತ್ರಜ್ಞಾನದಿಂದ ಉಂಟಾದ ಬದಲಾವಣೆಯ ಪ್ರಭಾವ, ಶಿಕ್ಷಣ ವ್ಯವಸ್ಥೆಯ ಮೇಲೂ ದಟ್ಟವಾಗಿ ಪಸರಿಸಿದೆ. ಮಾಹಿತಿ ತಂತ್ರಜ್ಞಾನದ ಮಾಯಾ ಬಜಾರ್‌ನಲ್ಲಿ ದೇಶಿ ವಿವೇಕ ಒದ್ದಾಡುತ್ತಾ ಮಲಗಿದೆ. ಮಾಹಿತಿ ತಂತ್ರಜ್ಞಾನದ ಪ್ರಾತಿನಿಧಿಕ ರೂಪವಾದ ಕಂಪ್ಯೂಟರ್ ಬಳಕೆಯನ್ನು ಭ್ರಮಾಧೀನರಂತೆ ಬಳಸಲಾಗುತ್ತದೆ. ಈ ಹೊಸ ತಂತ್ರಜ್ಞಾನ ಬಂದ ಮೇಲೆ ನಿಜಕ್ಕೂ ಅನೇಕ ಸಕರಾತ್ಮಕ ಬದಲಾವಣೆಗಳಾಗಿವೆ. ಮಾಹಿತಿ ಸಂಗ್ರಹದಿಂದ ಹಿಡಿದು, ಆಡಳಿತಾತ್ಮಕ ಪ್ರಕ್ರಿಯೆಯಲ್ಲಿ ಈ ಹೊಸ ತಂತ್ರಜ್ಞಾನದ ಉಪಯುಕ್ತತೆ ಅಪಾರವಾಗಿದೆ. ಆದರೆ ಈ ತಂತ್ರಜ್ಞಾನವು ನಮಗೆ ಪೂರಕವಾಗಿರಬೇಕೆ ಹೊರತು, ಪ್ರಧಾನವಾಗಿರಬಾರದು. ವಿಶೇಷವಾಗಿ ಬೋಧನಾ ವಿಧಾನದಲ್ಲಿ ವಿದ್ಯಾರ್ಥಿ ಮತ್ತು ಶಿಕ್ಷಕರ ನಡುವಿನ ಸಂವಹನ ಕ್ರಿಯೆಯಿಲ್ಲದೆ ಮೂಕವಾಗಿಸಿದೆ. 'ಪವರ್ ಪಾಯಿಂಟ್ ಪ್ರೆಸೆಂಟೇಷನ್' ಹೆಸರಿನಲ್ಲಿ ನೀಡುವ ಪಾಠಗಳು, ಉಪನ್ಯಾಸಗಳು ತಾಂತ್ರಿಕ ಕೌಶಲ್ಯವಾಗಿ ಬಳಕೆಯಾಗುತ್ತಿವೆಯೇ ಹೊರತು, ಮಾನವ ಸಂವೇದನೆಯಾಗುವುದಿಲ್ಲ. ಇತ್ತೀಚೆಗೆ ಉನ್ನತ ಶಿಕ್ಷಣದಲ್ಲಿ ಇ-ಲರ್ನಿಂಗ್, ಇ-ಕಂಟೆಂಟ್ ಯೋಜನೆ ತೀವ್ರ ಚಾಲನೆಗೆ ಬಂದಿದೆ. ಇದರ ಮೂಲಕ ಪಠ್ಯವಸ್ತುವಿಗೆ ಅನುಗುಣವಾಗಿ, ಇ-ಕಂಟೆಂಟ್ ಸಿದ್ಧಪಡಿಸಿ ವೆಬ್ ಮೂಲಕ ವಿದ್ಯಾರ್ಥಿಗಳಿಗೆ ವಿವಿಧ ವಿಷಯವನ್ನು ಲಭ್ಯವಾಗುವಂತೆ ಮಾಡುತ್ತಿದೆ. ಆದರೆ ಈ ಮಾಹಿತಿ ತಲುಪುವುದು ಕೇವಲ ಲ್ಯಾಪ್‌ಟಾಪ್, ಟ್ಯಾಬ್, ಕಂಪ್ಯೂಟರ್ ಬಳಸುತ್ತಿರುವವರಿಗೆ ಮಾತ್ರ. ಇದರಿಂದ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ಸಂಬಂಧವನ್ನು ಸಾಕಷ್ಟು ಅಂತರದಲ್ಲಿ ಉಳಿಯುವಂತೆ ಮಾಡಿದೆ. ತರಗತಿಯ ಬೋಧನೆಗಳನ್ನು ಅಪ್ರಸ್ತುತಗೊಳಿಸಿ ಶಿಕ್ಷಣಕ್ಕೆ ಇರಬೇಕಾದ ಸಂವೇದನಾ ಸಂಬಂಧವನ್ನು ಕಡಿದು ಹಾಕುತ್ತಿದೆ.

ಪ್ರಾಚೀನ ಭಾರತದ ಶಿಕ್ಷಣ ವ್ಯವಸ್ಥೆಯಲ್ಲಿ ಜ್ಞಾನ ಒಂದು ವರ್ಗದ ಸ್ವತ್ತಾಗಿತ್ತು. ಅಂತಹ ವಿದ್ಯಾಭ್ಯಾಸ ಕ್ರಮದ ಭೀಕರ ಪರಿಣಾಮಗಳಿಂದ ಇನ್ನೂ ಸಂಪೂರ್ಣವಾಗಿ ಚೇತರಿಸಿಕೊಂಡಿಲ್ಲ. ಇಂದಿಗೂ ಪ್ರಾಥಮಿಕ ಅಕ್ಷರಜ್ಞಾನವಿಲ್ಲದ ಜನವರ್ಗದ ನಡುವೆ ಈ ಕಂದರ ವಿಸ್ತಾರವಾಗುವುದಂತೂ

ಕಂಡಿತ. ಇದನ್ನರಿತ ಬರಗೂರು ರಾಮಚಂದ್ರಪ್ಪನವರು 'ಕ್ಷಿಪ್ರಗತಿಯಲ್ಲಿ ಪಸರಿಸುತ್ತಿರುವ ಮಾಹಿತಿ ತಂತ್ರಜ್ಞಾನ ಸಮಾಜದ ಕಟ್ಟಕಡೆಯ ಜನಸಮುದಾಯವನ್ನು ತಲುಪದಿದ್ದರೆ, ಅದು ಇನ್ನೊಂದು ಪುರೋಹಿತಶಾಹಿ ವ್ಯವಸ್ಥೆಯಾಗುವ ಅಪಾಯವಿದೆ'[೧೫] ಎಂದು ಹೇಳಿದ್ದಾರೆ.

ಮಾಹಿತಿ ತಂತ್ರಜ್ಞಾನದ ಬೆಳವಣಿಗೆಯನ್ನು ಸಕಾರಾತ್ಮಕವಾಗಿ ಬಳಸಿಕೊಳ್ಳಬೇಕಾದುದು ಅತ್ಯಗತ್ಯ. ಅದರಂತೆ ಕಂಪ್ಯೂಟರ್ ಒಂದು ಸಾಧನವೂ ಹೌದು, ಅಪಾರ ಸಾಧ್ಯತೆಯೂ ಆಗಿದೆ. ಕಂಪ್ಯೂಟರ್ ಅಳವಡಿಕೆಯನ್ನು ಕೆಲವು ಉಪಯುಕ್ತ ಸಂದರ್ಭಗಳಲೆಲ್ಲಾ ವ್ಯಾಪಕವಾಗಿ ಬಳಸಬಹುದು. ಆದರೆ ಕಂಪ್ಯೂಟರ್ ಮೂಲಕ ಶಿಕ್ಷಣ, ಪ್ರಾಥಮಿಕ ಶಿಕ್ಷಣವನ್ನು ಸೇರಿದಂತೆ ಎನ್ನುವ ವಿಷಯದ ಬಗ್ಗೆ ಯೋಚಿಸಬೇಕಾದ ಅವಶ್ಯಕತೆಯಿದೆ. 'ಕಂಪ್ಯೂಟರ್ ಶೈಕ್ಷಣಿಕ ಸಾಮರ್ಥ್ಯವನ್ನು ಉತ್ತೇಜಿಸಲಾರದು. ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಪ್ರೇರಕವಾಗುವ ಬದಲು ಮಾರಕವಾಗಬಹು'[೧೬] ಎಂದು ಕಂಪ್ಯೂಟರ್ ಉದ್ಯಮಿ ಸ್ಟೀವ್ ಜಾಬ್ಸ್ ಹೇಳುತ್ತಾರೆ. ಆದ್ದರಿಂದ ಕಂಪ್ಯೂಟರ್ ಆಧಾರಿತ ಶಿಕ್ಷಣದ ಸಾಧಕ ಬಾಧಕಗಳನ್ನು ಅತ್ಯಂತ ಜಾಗರೂಕತೆಯಿಂದ ಅಧ್ಯಯನ ಮಾಡಬೇಕಿದೆ. ಅದರಲ್ಲೂ ೧೫ ವರ್ಷದೊಳಗಿನ ಮಕ್ಕಳಿಗೆ ಶಿಕ್ಷಣವನ್ನು ನೀಡಲು ಅನುಸರಿಸುವ ಮಾರ್ಗ ಕೃತಕ ಪ್ರೇರಣೆಗಳಿಂದ ಕೆಲಸ ಮಾಡುವ ಜ್ಞಾನಮಾರ್ಗಕ್ಕಿಂತಲೂ, ಸಾಂಪ್ರದಾಯಿಕ ಕಲಿಕೆಯ ಮಾರ್ಗ ಶ್ರೇಷ್ಠವಾದದ್ದು. ಟೆಲಿವಿಷನ್, ವಿಡಿಯೋ, ಕಂಪ್ಯೂಟರ್‌ಗಳಿಂದ ಜನರನ್ನು ವಿದ್ಯಾವಂತರನ್ನಾಗಿ ಮಾಡುತ್ತೇವೆ ಎನ್ನುವ ಭ್ರಮೆಯಿಂದ ಹೊರಬರಬೇಕಾಗಿದೆ. ಮನುಷ್ಯರ ಪರಸ್ಪರ ಸಂಬಂಧವನ್ನು ಕಡಿದು ಹಾಕುವ ತಂತ್ರಜ್ಞಾನಗಳು ಮಾನವೀಯ ವಾತಾವರಣದ ವಿದ್ಯಾಭ್ಯಾಸಕ್ಕೆ ತದ್ವಿರುದ್ಧವಾದವುಗಳಾಗಿವೆ.

ಇಂದಿನ ಶೈಕ್ಷಣಿಕ ವ್ಯವಸ್ಥೆ ಸಮಾಜವನ್ನು ಎರಡು ಹೋಳಾಗಿ ಸೀಳಿದೆ. ಅತ್ಯಾಧುನಿಕ ವಿಶೇಷ ವಿದ್ಯಾಭ್ಯಾಸ ಐಶ್ವರ್ಯವಂತರ ಮಕ್ಕಳಿಗೆ ವೀಸಲಾಗಿದೆ. ಗ್ರಾಮಾಂತರ ಬಡ ಮಕ್ಕಳಿಗೆ ಅಂತಹ ವಿದ್ಯಾಭ್ಯಾಸ ಗಗನ ಕುಸುಮವಾಗಿದೆ. ಬಹುತೇಕ ಖಾಸಗಿ ಶಿಕ್ಷಣ ಸಂಸ್ಥೆಗಳು ಸ್ವಾತಂತ್ರ್ಯಾನಂತರ ತಮ್ಮ ಮೂಲ ಉದ್ದೇಶವನ್ನೇ ಮರೆತು ಸಮಾಜದ ಬಡ ಮಕ್ಕಳಿಗಾಗಿ ಫ್ರೀ ಬೋರ್ಡಿಂಗ್ ಹಾಗೂ ಫ್ರೀ ಎಜ್ಯುಕೇಷನ್ ಎಂಬ ಕಳಕಳಿಯಿಂದ ದೂರ ಸರಿಯತೊಡಗಿದೆ. ಹಿಂದಿನವರು ತ್ಯಾಗ ಮನೋಭಾವದಿಂದ ಸಮಾಜದ, ರಾಷ್ಟ್ರದ ಉನ್ನತಿಗೊಸ್ಕರ ಕಟ್ಟಿದ ಸಂಸ್ಥೆಗಳಲ್ಲಿ, ಕಾಲ ಗತಿಸಿದಂತೆ ಅದರ ವಾರಸುದಾರರು ಈ ವ್ಯವಸ್ಥೆಯನ್ನು 'ಗಳಿಕೆ'ಗಾಗಿ ಬಳಸತೊಡಗಿದ್ದಾರೆ. ಇದರ ಪರಿಣಾಮವಾಗಿ ಶಿಕ್ಷಣ ಸಂಸ್ಥೆಗಳಲ್ಲಿ ಪೈಪೋಟಿ ಸುರುವಾಗಿದೆ. ಇಲ್ಲಿ ಹಣ ಹಾಗೂ ಜಾತಿಗಳು ಪ್ರಮುಖ ಪಾತ್ರ ವಹಿಸಿವೆ. ಜಾಗತೀಕರಣದಲ್ಲಿ ಆರ್ಥಿಕ ಸುಧಾರಣೆಗೆ ಆದ್ಯತೆ ಇರುವುದರಿಂದ ಶಿಕ್ಷಣವು ಒಂದು ಉದ್ಯಮವೆಂದೇ ಪರಿಗಣಿಸಿದ್ದಾರೆ. ಇಂತಹ ನಿಲುವುಗಳ ವಿರುದ್ಧ ಎದ್ದು ನಿಲ್ಲಬೇಕಾಗಿದೆ. ಅಕ್ಷರ ಕಲಿಕೆಗೆ ಮಾತ್ರ ಸೀಮಿತಗೊಳಿಸಿದ ಶಿಕ್ಷಣ ಕ್ರಮವನ್ನು ಬದಲಾಯಿಸಿಕೊಂಡು, ಪ್ರಾಚೀನರಂತೆ ವಿವೇಕವಂತರಾದ, ಶೀಲವಂತರಾದ, ಚಾರಿತ್ರ್ಯವಂತರಾದ ಮಾನವರನ್ನು ಸಿದ್ಧಗೊಳಿಸಬೇಕಾಗಿದೆ.

**ಅಡಿಟಿಪ್ಪಣಿ**

೧. ಹನುಮಂತರೆಡ್ಡಿ; ಶೈಕ್ಷಣಿಕ ತತ್ವಗಳು; ೨೦೦೭; ಪುಟ-೩

೨. ಅಶೋಕ ಜಿ.ಎನ್; ಮಕ್ಕಳ ಶೈಕ್ಷಣಿಕ ಸಮಸ್ಯೆಗಳು; ೨೦೦೯; ಪುಟ-೯

೩. ವಿಜಯಕರ್ನಾಟಕ ಪತ್ರಿಕೆ; ಜನವರಿ-೧೨. ೨೦೧೯ ಶನಿವಾರ

೪. ಅದೇ; ಪುಟ-೯

೫. ಸಿದ್ದಣ್ಣ ಲಂಗೋಟಿ; ಡಾ. ಸರ್ವಪಲ್ಲಿ ರಾಧಕೃಷ್ಣನ್; ೨೦೦೭; ಪುಟ-೪೪

೬. ಮಹಾಬಲೇಶ್ವರರಾವ್; ಶಿಕ್ಷಣದ ತತ್ವಶಾಸ್ತ್ರೀಯ ಮತ್ತು ಸಮಾಜಶಾಸ್ತ್ರೀಯ ಪರಿಪೇಕ್ಷಗಳು; ೨೦೧೨; ಪುಟ-೬೯

೭. ಅದೇ; ಪುಟ-೮೦

೮. ಅದೇ; ಪುಟ-೫೪

೯. ಅದೇ; ಪುಟ-೬೦

೧೦. ಆರ್ಕೆ ಮಣಿಪಾಲ; ಶಿಕ್ಷಣ ಮತ್ತು ವೈಚಾರಿಕತೆ; ೨೦೦೦; ಪುಟ-೫೭

೧೧. ಅದೇ; ಪುಟ-೫೮

೧೨. ಅಶೋಕ ಜಿ.ಎನ್; ಮಕ್ಕಳ ಶೈಕ್ಷಣಿಕ ಸಮಸ್ಯೆಗಳು; ೨೦೦೯; ಪುಟ-೪೦

೧೩. ಪ್ರಜಾವಾಣಿ ಸಾಪ್ತಾಹಿಕ ಪುರವಣಿ ಭಾನುವಾರ-೩; ಅಗಷ್ಟ್-೨೦೧೪

೧೪. ಮಹಾಬಲೇಶ್ವರರಾವ್; ಪ್ರಸಾರ ಮಾಧ್ಯಮ ಮತ್ತು ಶಿಕ್ಷಣ; ೨೦೦೩; ಪುಟ-೩೧

೧೫. ಮಹೇಶನ್.ಮ; ಜಾಗತೀಕರಣ; ೨೦೦೨; ಪುಟ-೭೮

೧೬. ಅದೇ; ಪುಟ-೮೦

ಅಧ್ಯಾಯ ಎಂಟು

# ಸಮಾರೋಪ

ಶಿಕ್ಷಣವೆಂಬುದು ವ್ಯಕ್ತಿಯ ಬದುಕಿನ ಆದಿಯಿಂದ ಅಂತ್ಯದವರೆಗೂ ಬೆಳೆದು ಬರುತ್ತಿರುವ ಪ್ರಕ್ರಿಯೆಯಾಗಿದೆ. ವ್ಯಕ್ತಿಯ ಮುಂದಿನ ಬದುಕಿಗೆ ಅಗತ್ಯವಾದ ಸಿದ್ಧತೆಯನ್ನು ದೊರಕಿಸಿಕೊಡುವುದೇ 'ವಿದ್ಯೆ' ಎಂಬುದು ಸಾಮಾನ್ಯವಾದ ಅಭಿಪ್ರಾಯವಾಗಿದೆ. ಆದರೆ ಕಲಿಕೆ ಮತ್ತು ಬದುಕನ್ನು ಬೇರೆ-ಬೇರೆಯಾಗಿ ಭಾವಿಸುವುದು ತಪ್ಪು ಎಂಬುದು ಎಲ್ಲಾ ದಾರ್ಶನಿಕರಾದಿಯಾಗಿ ಆಧುನಿಕ ತತ್ತ್ವಜ್ಞಾನಿಗಳವರೆಗಿನ ಎಲ್ಲರದೂ ಒಮ್ಮತದ ಅಭಿಪ್ರಾಯವಾಗಿದೆ. ಶಿಕ್ಷಣವೆಂಬುದು ನಿರಂತರವಾದ ಪ್ರಕ್ರಿಯೆ. ಮಗುವಿನ ಜನನದೊಂದಿಗೆ ಇದು ಆರಂಭವಾಗುತ್ತದೆ. ಕುಟುಂಬ, ಪರಿಸರ, ಸಮಾಜದ ಇತರ ವ್ಯಕ್ತಿಗಳ ಒಡನಾಟದಿಂದ ಹೆಚ್ಚಿನ ಜ್ಞಾನ, ಅನುಭವ ದೊರೆಯುತ್ತದೆ. ಈ ಅನುಭವಗಳ ಪುನರ್ರಚನೆಯೊಂದಿಗೆ ಬದುಕನ್ನು ಸಾಗಿಸುವುದೇ ವಿಶಾಲಾರ್ಥದಲ್ಲಿ ಶಿಕ್ಷಣವೆನಿಸಿಕೊಂಡಿದೆ.

ಜ್ಞಾನವೆಂಬುದು ಅನುಭವಗಳ ಸಂಪಾದನೆಯಷ್ಟೆ ಅಲ್ಲ. ಉಪಯುಕ್ತ ಕೌಶಲ್ಯಗಳನ್ನು, ಒಳ್ಳೆಯ ಅಭ್ಯಾಸಗಳನ್ನು ಹಾಗೂ ಆರೋಗ್ಯಕರ ಧೋರಣೆಗಳನ್ನು ಗಳಿಸಿಕೊಳ್ಳಲು ಶಿಕ್ಷಣವು ಅನುವು ಮಾಡಿಕೊಡುತ್ತದೆ. ಅಲ್ಲದೆ ಹಿಂದಿನ ತಲೆಮಾರುಗಳ ಅನುಭವದಿಂದ ರೂಪುಗೊಂಡು, ವ್ಯವಸ್ಥಿತವಾದ ಜ್ಞಾನವನ್ನು ಇಂದಿನ ತಲೆಮಾರಿನವರೆಗೆ ದೊರೆಕಿಸಿಕೊಡುವ ಕಲೆಯಾಗಿದೆ. ಇದನ್ನೇ ಭಾರತೀಯ ಜ್ಞಾನ ಪರಂಪರೆಯಲ್ಲಿ 'ಅಪರಾ ವಿದ್ಯೆ' ಮತ್ತು 'ಪರಾ ವಿದ್ಯೆ' ಎಂದು ವಿಂಗಡಿಸಲಾಗಿದೆ. ಈ ವಿದ್ಯೆಗಳು ಪ್ರತ್ಯಾಕ್ಷಾನುಭವದ ತಳಹದಿಯ ಮೇಲೆ ರೂಪುಗೊಂಡದ್ದಾಗಿದೆ.

ವೇದಗಳ ಕಾಲದಲ್ಲಿ 'ಶಿಕ್ಷೆ' ಮತ್ತು 'ಶಿಕ್ಷಣ' ಎಂಬ ಎರಡು ಪದಗಳು ಬಳಕೆಯಲ್ಲಿತ್ತು. ಶಿಕ್ಷೆ ಎಂದರೆ ಇಲ್ಲಿ ದಂಡನೆಯಲ್ಲ. ತನ್ನನ್ನು ತಾನೇ ತಿದ್ದಿಕೊಳ್ಳಲಿ ಎಂಬುದಾಗಿತ್ತು. ಶಿಕ್ಷಣವೂ ಒಂದು ರೀತಿಯಲ್ಲಿ ವ್ಯಕ್ತಿಯನ್ನು ತಿದ್ದುವ ಪ್ರಕ್ರಿಯೆಯೇ ಆಗಿದೆ. ಸಮಾಜದೊಂದಿಗೆ ವ್ಯಕ್ತಿ ಹೊಂದಿಕೊಂಡು ಬದುಕುತ್ತಾ, ತನ್ನ ಶ್ರೇಯೋಭಿವೃದ್ಧಿಗೆ ಬೇಕಾಗುವ ಸಾಮರ್ಥ್ಯ, ಕೌಶಲವನ್ನು ರೂಢಿಸಿಕೊಳ್ಳಲು ನೆರವಾಗುತ್ತಿತ್ತು. ಅಲ್ಲಿ ಕೈಗಾರಿಕೆ, ಕಸುಬುದಾರರ ಕೌಶಲ್ಯಕ್ಕೆ ಬಹಳ ಮಹತ್ವವಿತ್ತು. ಇಲ್ಲಿ ಕಾಣುವ ದೈಹಿಕ ಶ್ರಮದ ಬಗೆಗಿನ ಶ್ರದ್ಧೆ, ಪ್ರತಿಷ್ಠೆ ಮತ್ತು ಗೌರವವು ಅವರ ಸ್ವಾವಲಂಬಿ ಬದುಕಿಗೆ ಉದಾಹರಣೆಗಳಾಗಿವೆ. ಈ ಜ್ಞಾನವನ್ನು ನಾವು ಇಂದು ಯಾಂತ್ರಿಕ-ತಾಂತ್ರಿಕ ಮಾಧ್ಯಮಗಳಿಂದ ಪಡೆಯುತ್ತಿದ್ದೇವೆ. ಇಂದಿನವರಲ್ಲಿ ಈ ಜ್ಞಾನವನ್ನು ಸಂಪಾದಿಸುವ ಸಾಧನಗಳು, ಮಾರ್ಗಗಳು ಬೇರೆ-ಬೇರೆಯಾಗಿ ಮೇಲ್ನೋಟಕ್ಕೆ ಕಂಡು ಬಂದರೂ, ನಮ್ಮ ಪೂರ್ವಿಕರ ಶ್ರಮ, ಕರಕುಶಲತೆಯ

ತಿಳುವಳಿಕೆಗಳೆಲ್ಲವೂ ಇಂದಿನ ಹಲವಾರು ವಿಚಾರಗಳಿಗೆ ತಳಹದಿಯಾಗಿವೆ. ಇಷ್ಟಿದ್ದರೂ ಪಾರಂಪರಿಕವಾದ ತಿಳುವಳಿಕೆಯ ಮೂಲಗಳು ಬರುಬರುತ್ತಾ ಅವುಗಳ ಸ್ಥಾನ ಇಳಿಮುಖವಾಗಿ, ತುಚ್ಚೀಕರಣಗೊಂಡಂತೆ ಕಾಣುತ್ತದೆ. ಇದರ ಪರಿಣಾಮವಾಗಿಯೇ ಬೌದ್ಧಿಕ ಜ್ಞಾನ ಮತ್ತು ಶಾರೀರಿಕ ಶ್ರಮ(ಕೌಶಲ್ಯ) ಬೇರೆ-ಬೇರೆಯಾಗಿವೆ. ಜ್ಞಾನ ಮತು ಕೌಶಲ್ಯಗಳಲ್ಲುಂಟಾದ ಈ ಬಿರುಕಿನಿಂದ ಅಕ್ಷರವಂಚಿತರಿಗೆ ಕೇವಲ ವೇದಾಭ್ಯಾಸವಷ್ಟೇ ಅಲ್ಲ, ವರ್ಗಭೇದವುಳ್ಳ ಎಲ್ಲಾ ಸಮಾಜ ವ್ಯವಸ್ಥೆಯೊಳಗೂ ಮಾನವನ ಪ್ರಗತಿಗೆ ಅಡ್ಡಿಯಾಗಿರುವುದನ್ನು ಕಾಣುತ್ತೇವೆ. ಇದು ವೈಜ್ಞಾನಿಕ ಪ್ರಗತಿಯನ್ನು ಕುಂಠಿತಗೊಳಿಸಿದೆ.

ಭಾರತೀಯರಲ್ಲಿ ಅರಿವು ಮತ್ತು ಜ್ಞಾನ ಒಂದೇ ಅರ್ಥದಲ್ಲಿ ಬಳಕೆಗೊಂಡಿತ್ತು. ಏಕೆಂದರೆ ಅರಿವು, ಜ್ಞಾನ, ತಿಳುವಳಿಕೆ, ಕೌಶಲ್ಯಗಳೆಲ್ಲವೂ ಅವರ ಬದುಕಿನೊಂದಿಗೆ ಬೆಸೆದುಕೊಂಡು ವಿಶಾಲಾರ್ಥವನ್ನು ಪಡೆದುಕೊಂಡಿತ್ತು. ಕಾಲಾಂತರದಲ್ಲಾದ ಬದಲಾವಣೆ ಅರಿವಿನ ಸ್ವರೂಪವನ್ನು ಭಿನ್ನ ನೆಲೆಯಲ್ಲಿ ವಿಂಗಡಿಸಿದೆ. ವಚನಕಾರರಲ್ಲಿ 'ಅರಿವು' ಎಂಬ ಪದ 'ಜ್ಞಾನ' ಎಂಬ ಪದಕ್ಕಿಂತ ಭಿನ್ನವಾಗಿ ಕಂಡುಬರುತ್ತದೆ. 'ಅರಿವೇ ಗುರು', 'ಅರಿವಿನೊಳಗಿನ ಇರವು' ಇಂತಹ ಅನೇಕ ಮಾತುಗಳು ಅರಿವೆಂಬುದು ಮನುಷ್ಯನ ಮೂಲಭೂತ ಪ್ರಜ್ಞೆಯಾಗಿ ಇದೆ ಎಂಬುದು ತಿಳಿಯುತ್ತದೆ. ಜ್ಞಾನ ಬಹಿರಂಗದ ವಿದ್ಯೆಯಾದರೆ, ಅರಿವು ಅಂತರಂಗದಿಂದ ಹುಟ್ಟುವ ಪ್ರಜ್ಞೆಯಾಗಿದೆ. ಜಾಗೃತಾವಸ್ಥೆಯಾಗಿದೆ. ಈ ಜಾಗೃತಾವಸ್ಥೆ ವ್ಯಕ್ತಿಯ ಒಳಗಿನಿಂದಲೇ ಹುಟ್ಟುವಂತಹದ್ದು ಎಂಬುದು ವಚನಕಾರರ ನಿಲುವು. ಇವರಿಗೆ ಜ್ಞಾನ, ಕ್ರಿಯೆ, ಕೌಶಲ ಒಂದಕ್ಕೊಂದು ಪೂರಕವಾಗಿ ಇರುವಂತಹುಗಳಾಗಿವೆ.

ಉದಾಃ ಚಿನ್ನ ತನ್ನ ಒಳಗಿನ ಹೊಳಪನ್ನು ಬಲ್ಲುದೆ?

ಕಬ್ಬು ತನ್ನೊಳಗಿನ ಸವಿಯನ್ನು ಸವಿಯಬಲ್ಲುದೆ?

ಈ ಪರಿಯಂತೆ ನರರರಿಯುವರೇ

ಕ್ರಿಯಾ ಜ್ಞಾನ ಭೇದವ.

ದಾಸಿಮಯ್ಯ ಹೇಳುವ ಈ ವಚನದಲ್ಲಿ ಕ್ರಿಯೆ ಮತ್ತು ಜ್ಞಾನ ಬೇರೆ-ಬೇರೆ ಅಂತ ಅನ್ನಿಸಿದರೂ, ಅವು ಒಂದಾದಾಗಲೇ ಅವುಗಳಿಗೆ ಅರ್ಥವಿದೆ. ಈ ಎರಡರ ಭೇದವನ್ನರಿತು, ಅದನ್ನು ಒಂದಾಗಿಸುವ ಪಕ್ವತೆ ಮಾತ್ರ ತನ್ನೊಳಗಿನ ಅರಿವನ್ನು ಅರಿಯಬಲ್ಲದು ಎಂದಿದ್ದಾನೆ. ಅಂದರೆ ನಮ್ಮ ಜ್ಞಾನ ಕೃತಿಗೆ ಸಂಬಂಧ ಪಟ್ಟಿದ್ದಲ್ಲ, ನಮ್ಮ ಇರುವಿಕೆಗೆ ಸಂಬಂಧಪಟ್ಟಿದ್ದಾಗಿದೆ.

ಬಹುಸಂಖ್ಯಾತ ವೈಷ್ಣವ ಸಮುದಾಯಗಳು ದಾಸರ ಪದಗಳನ್ನು ಜಾತಿಯ ಸೀಮಿತ ದೃಷ್ಟಿಯಿಂದ ನೋಡದೆ, ಹರಿಭಕ್ತಿ ನೀತಿಗಳ ವಿಶಾಲ ದೃಷ್ಟಿಯಿಂದ ಸ್ವೀಕರಿಸಿದ್ದಾರೆ. ವಿವಿಧ ವರ್ಗಗಳ ಜನರು, ಮಹಿಳೆಯರು, ನಿರಕ್ಷರಸ್ಥರಾಗಿದ್ಧ ಹಳ್ಳಿಗರು, ಸಂಗೀತಗಾರರು ಈ ಪದಗಳನ್ನು ಹಾಡಿ ಇಂದಿಗೂ ನಮಗೆ ಉಳಿಯುವಂತೆ ಮಾಡಿದ್ದಾರೆ. ದಾಸರ ಸಮರ್ಪಣ ಭಾವ(ಭಕ್ತಿ) ವ್ಯಕ್ತಿಯ ವಿಕಾಸದ ನೆಲೆಯಲ್ಲಿ ಅರ್ಥೈಸಲಾಗಿದೆ. 'ಎಚ್ಚರದಲಿ ನಡೆ ಮನವೇ', 'ಉಬ್ಬದಿರು ಉಬ್ಬದಿರು ಎಲೆ ಮಾನವ', 'ಜ್ಞಾನವೊಂದೇ ಸಾಕು ಮುಕ್ತಿಗೆ', 'ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ' ಇಂತಹ ದಾಸರ ಹಾಡುಗಳಲ್ಲಿ ಬದುಕನ್ನು ಗಾಢವಾಗಿ ಪ್ರೀತಿಸುವ ಮತ್ತು ಲೌಕಿಕ ಬದುಕನ್ನು

ಸಹನೀಯವಾಗಿಸಿಕೊಳ್ಳಬೇಕೆಂಬ ಜೀವನ ಪ್ರೇಮ ಮತ್ತು ಚಿಂತನೆಗಳಿರುವುದನ್ನು ಕಾಣುತ್ತೇವೆ. 'ಗುರುವಿನ ಉಪದೇಶವಿಲ್ಲದ ಜ್ಞಾನ ಉರಗನ ಉಪವಾಸದಂತೆ ಕಾಣಿರೊ' ಎಂದು ಗುರುವಿನ ಅನಿವಾರ್ಯತೆ ಮತ್ತು ಅವಶ್ಯಕತೆ ಎಷ್ಟಿದೆ ಎಂದು ಹೇಳುತ್ತಾರೆ. ಗುರುವಿನ ಮಾರ್ಗದರ್ಶನದ ಮೂಲಕ ಸಮರ್ಪಣ ಭಾವದಿಂದ ತನ್ನನ್ನು ತಾನು ತಿದ್ದಿಕೊಳ್ಳುವ ಮತ್ತು ಆತ್ಮವಿಮರ್ಶೆ ಮಾಡಿಕೊಳ್ಳುವ ಅಂತರಂಗದ ಅರಿವಿಗೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಇಲ್ಲಿ 'ಜ್ಞಾನ' ಎನ್ನುವುದು ಪರಿಶುದ್ಧಿಗೆ, ಆತ್ಮಜ್ಞಾನಕ್ಕೆ ಸಂಬಂಧಿಸಿದ್ದಾಗಿದೆ. ಭಕ್ತಿ ಮತ್ತು ಅರಿವನ್ನು ಸ್ವ-ಸಾಧನೆಯ ಮೂಲಕ ಪಡೆಯಬೇಕು. ಈ ಸಾಧನೆಗೆ ಗುರುವಿನ ಅನುಗ್ರಹ ಅತೀ ಮುಖ್ಯ ಆದ್ದರಿಂದಲೇ ಇವರು ಆತ್ಮಜ್ಞಾನದ ಶೋಧಕರಾಗಿದ್ದು, ಆತ್ಮವಿಮರ್ಶೆಯ ಸಾಧಕರಾಗಿದ್ದಾರೆ. ಪ್ರಸ್ತುತದಲ್ಲಿ ನಾವುಗಳು ಜ್ಞಾನ ಶೋಧಕರಾಗುತ್ತಿದೇವೆಯೇ ಹೊರತು, ಆತ್ಮಜ್ಞಾನದ ಸಾಧಕರಾಗುತ್ತಿಲ್ಲ.

ತತ್ತ್ವಪದಕಾರರು ಅನುಭವಕ್ಕಾಗಿ ಬೇಕಾಗುವ ತನ್ಮಯತೆಯನ್ನು ಹೊಂದಲು ಲೌಕಿಕ ಕಟ್ಟುಪಾಡುಗಳನ್ನು ಬದಿಗಿರಿಸಿ, ಲೌಕಿಕವನ್ನು ಮೀರಲು ಗುರುವಿನ ಮಾರ್ಗದರ್ಶನಕ್ಕಾಗಿ ಹಂಬಲಿಸುತ್ತಾರೆ. ವಚನಕಾರರಂತೆ ಪಂಡಿತಮಾನ್ಯ ಜ್ಞಾನ ಮಾದರಿಗಳನ್ನು ಧಿಕ್ಕರಿಸಿ ಅನುಭವಿಕ ಅಥವಾ ಪ್ರಾಯೋಗಿಕ ಜ್ಞಾನಕ್ಕೆ ಹೆಚ್ಚಿನ ಒತ್ತು ನೀಡಿದ್ದಾರೆ. ನಾವು ಓದುವ ಓದು ಜೀವನಕ್ಕೆ ಆದರ್ಶ ವ್ಯಕ್ತಿತ್ವವನ್ನು ತಂದುಕೊಡಬೇಕು. ನಮ್ಮ ತಿಳುವಳಿಕೆ ವ್ಯಕ್ತಿತ್ವ ವಿಕಾಸಗೊಳಿಸಬೇಕೆ ವಿನಹ ವ್ಯರ್ಥ ಚರ್ಚೆಯಾಗ ಬಾರದೆಂದಿದ್ದಾರೆ. ನಮ್ಮ ಸಮಾಜದ ಹೊರಗೆ ನಾವು ಕಲಿತ ವಿದ್ಯೆ ನಮ್ಮ ಬದುಕಿಗೆ ಗುರುವಾಗಬೇಕು. ಅಂದಾಗಲೇ ನಮ್ಮ ಜ್ಞಾನ ನಮ್ಮನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುತ್ತದೆ. ಅಂತರಂಗಕ್ಕೆ ಸಂಬಂಧಪಟ್ಟ, ವ್ಯಕ್ತಿಯ ಬದುಕಿನಾಚೆಗಿನ ನಿರಂತರ ಎಚ್ಚರಕ್ಕೆ ಮತ್ತು ಮನಸ್ಸಿನ ದೃಡತೆ ಎಲ್ಲಾ ಸಾಧನೆಗಳಿಗೆ ಮೂಲವೆಂದಿದ್ದಾರೆ. ಆದರೆ ವಸಾಹತುಶಾಹಿ ಶಿಕ್ಷಣ ಕ್ರಮ ಮತ್ತು ಆಧುನಿಕ ಜೀವನ ಶೈಲಿಯ ಪ್ರಭಾವದಿಂದ ಕುಸಿಯುತ್ತಿರುವ ನಮ್ಮ ಜೀವನ ಮೌಲ್ಯಗಳು , ಯಾಂತ್ರಿಕ ಜೀವನಶೈಲಿ, ಆಡಂಬರದ ಬದುಕು ಇವುಗಳನ್ನು ಒಪ್ಪಿಕೊಳ್ಳದೆ, ಇವೆಲ್ಲವೂ ವ್ಯಕ್ತಿಯ ಸಂಕುಚಿತ ಮನಸ್ಥಿತಿಗೆ ಕಾರಣವಾಗಿವೆಯೆಂದು ಅವುಗಳನ್ನೆಲ್ಲಾ ನಿರಾಕರಿಸಿದ್ದಾರೆ.

ಆಧುನಿಕ ಕಾಲದಲ್ಲಿ ಜ್ಞಾನವೆಂದರೆ ಕೇವಲ ಕಲಿಕೆ, ಬುದ್ಧಿವಂತಿಕೆಯೆಂದೆ ಭಾವಿಸಲಾಗಿದೆ. ಆದರೆ ಜ್ಞಾನ ಕೇವಲ ಬುದ್ಧಿವಂತಿಕೆಯಿಂದ ಗಳಿಸುವುದಲ್ಲ. ಅದು ಪೂರ್ವಿಕರ ಶಿಕ್ಷಣದ(ತಿಳುವಳಿಕೆಯ) ಮೂಲ ತಳಹದಿಯಿಂದ ರೂಪುಗೊಂಡಿದ್ದೆಂಬುದನ್ನು ಒಪ್ಪಿಕೊಳ್ಳಲೇಬೇಕಾದ ಮಾತು. ನಮ್ಮ ಈಗಿನ ಶಿಕ್ಷಣ ಕ್ರಮ ಮಾನವ ಜೀವನವನ್ನು ರೂಪಿಸಿಕೊಳ್ಳಲು ಸಹಾಯಕವಾಗುವಂತೆ ಮಾಡಲು ಔಪಚಾರಿಕ ರೀತಿಯಲ್ಲಿ ನಡೆಯುತ್ತಿರುವ ಕೆಲಸವಾಗಿದೆ.

ಒಂದು ಕಾಲದಲ್ಲಿ ರಾಜ-ಮಹಾರಾಜರುಗಳು ವಿದ್ವತ್ತನ್ನು ಗುರುತಿಸಿ ಮನ್ನಣೆಯಿತ್ತು ಗೌರವಿಸುತ್ತಿದ್ದರು. ಅವರ ಬೆಳವಣಿಗೆಗೆ ಬೇಕಾದ ಎಲ್ಲಾ ಸೌಲಭ್ಯಗಳನ್ನು ಒದಗಿಸಿ ಹೆಚ್ಚಿನ ಕಲಿಕೆಗೆ ಅವಕಾಶ ನೀಡುತ್ತಿದ್ದರು. ಇಂದು ಶಿಕ್ಷಣ ಕ್ಷೇತ್ರ ತುಂಬಾ ವಿಸ್ತೃತಗೊಂಡಿದೆ. ಇದು ಹೊಟ್ಟೆಯ(ಹಸಿವಿನ) ಅಸಹಾಯಕತೆ ಎನ್ನುವುದಕ್ಕಿಂತ, ಅತಿಯಾದ ಆಸೆ ದಿನೇ ದಿನೇ ಹೆಚ್ಚುತ್ತಿದೆ. ವಿಜ್ಞಾನ-ತಂತ್ರಜ್ಞಾನ,

ಮಾಹಿತಿ ತಂತ್ರಜ್ಞಾನ, ಗಣಕಯಂತ್ರಜ್ಞಾನದ ವಿದ್ಯೆಯೇ, ವಿದ್ಯೆ ಎಂಬ ಕಲ್ಪನೆ ಎಲ್ಲರ ಮನದಲ್ಲಿ ಬೇರೂರಿಬಿಟ್ಟಿದೆ. ಇಂತಹ ವಿದ್ಯೆ ನಮಗೆ ಸಹಾಯಕವಾಗುವ ಬದಲು ವಿದೇಶಕ್ಕೆ ವ್ಯಯವಾಗುತ್ತಿದೆ. ಹೆಚ್ಚಿಗೆ ಗಳಿಸಬೇಕೆಂಬ ಅತೀ ಆಸೆ ಮತ್ತು ಜ್ಞಾನವನ್ನು ಗುರುತಿಸಿ ಪ್ರೋತ್ಸಾಹಿಸುವವರ ಕೊರತೆ, ಪ್ರತಿಭಾ ಪಲಾಯನಕ್ಕೆ ಹೆಚ್ಚು-ಹೆಚ್ಚು ಕಾರಣವಾಗುತ್ತಿದೆ.

ಇತ್ತೀಚಿಗೆ ಮಾಹಿತಿಯನ್ನೇ ಜ್ಞಾನವೆಂದು ತಿಳಿಯುತ್ತಿರುವುದು ಒಂದು ಸಮಸ್ಯೆಯಾದರೆ, ಸಿಕ್ಕ ಮಾಹಿತಿಯನ್ನು ಜ್ಞಾನವಾಗಿಸಲು ಬೇಕಾದ ಕುಶಲತೆಯಿಲ್ಲದಿರುವುದು ಕೂಡ ಸಮಸ್ಯೆಯ ಇನ್ನೊಂದು ಮುಖವಾಗಿದೆ. ಮಾಹಿತಿ ಜ್ಞಾನವಾಗಿ ರೂಪಾಂತರ ಪಡೆಯುವುದಕ್ಕಿಂತ ಮುಖ್ಯವಾಗಿ, ಚಿಂತನೆ ಮತ್ತು ಕ್ರಿಯಾಶೀಲತೆ ಪಡೆಯಬೇಕಾಗಿದೆ. ಮಾಹಿತಿ ತಂತ್ರಜ್ಞಾನದ ಮಾರುಕಟ್ಟೆ ನೀತಿಗಳು, ಶಿಕ್ಷಣದ ಆದ್ಯತೆಗಳನ್ನು ಪ್ರಭಾವಿಸಿ ಭಾರತೀಯ ಜ್ಞಾನ, ಸಮಾಜದಿಂದ ವಿಮುಖವಾಗುವಂತೆ ಮಾಡುತ್ತಿದೆ. ಇದು ಆರ್ಥಿಕ ವಲಯದಲ್ಲಿ ಹೆಚ್ಚಿನ ಸಂಬಳಕ್ಕೆ ದುಡಿಯುವ ಜೀತದಾಳುಗಳನ್ನು ನಿರ್ಮಿಸುತ್ತಿದಿಯೇ ವಿನಹ ಪ್ರಜ್ಞಾವಂತರನ್ನು ಸೃಷ್ಟಿಸಿ, ಬೆಳೆಸುವಲ್ಲಿ ಸೋಲುತ್ತಿದೆ.

ಸಂಸ್ಕೃತಿ, ನಾಗರಿಕತೆ, ವಿಜ್ಞಾನ, ತಂತ್ರಜ್ಞಾನಗಳು ಬೆಳೆದಿರುವುದೇ ಜ್ಞಾನವನ್ನು ಪಡೆಯಬೇಕೆಂಬ ಹಂಬಲದಿಂದ. ವಿಜ್ಞಾನಿಗಳ, ಸಂಶೋಧಕರ ಕುತೂಹಲಗಳೇ, ಹೊಸ-ಹೊಸ ಆವಿಸ್ಕಾರಗಳನ್ನು ಮಾಡಲು ಪ್ರೇರೇಪಿಸಿದವು. ಇವುಗಳಿಂದ ಹುಟ್ಟಿದ ತಾಂತ್ರಿಕತೆಯ ಎಲ್ಲಾ ಸೌಲಭ್ಯಗಳನ್ನು ನಾವಿಂದು ಅನುಭವಿಸುತ್ತಿದ್ದೇವೆ. ವಸಾಹತುಶಾಹಿ ಶಿಷ್ಟಜ್ಞಾನ, ಅನಕ್ಷರಸ್ಥರನ್ನು ಹಳ್ಳಿಗರನ್ನು ದಡ್ಡರೆಂದು ತಿಳಿಯುತ್ತಾ, ಅವರನ್ನು ದೂರವೇ ಉಳಿಯುವಂತೆ ನೋಡಿಕೊಂಡಿದೆ. ಅಲ್ಲದೇ ಅವರ ಜ್ಞಾನವನ್ನು ಮರೆಮಾಚುತ್ತಿದೆ. ಜ್ಞಾನ ಮತ್ತು ವಿಜ್ಞಾನಗಳು ಸೃಷ್ಟಿಸಿದ ವಿದ್ಯೆ ಮತ್ತು ಅತಿಯಾದ ಗಳಿಕೆಯನ್ನೇ ಜ್ಞಾನ ಹಾಗೂ ಪ್ರಗತಿಯೆಂದು ಸಾಧಿಸಿ, ದುಡಿಯುವ ಜನ ಹಾಗೂ ಮಹಿಳೆಯರು ಉತ್ಪಾದಿಸುವ ಆತ್ಮಸಂಪತ್ತನ್ನು ನಾಶಮಾಡುತ್ತಿವೆ.

ಹಿಂದಿನಿಂದಲೂ ಹೆಣ್ಣನ್ನು ದೇಹದ ನೆಲೆಯಿಂದ ಮತ್ತು ಪಿತೃ ಸಂಸ್ಕೃತಿಯ ಆಜ್ಞಾಪಾಲಕಳನ್ನಾಗಿ ಪರಿಗಣಿಸಲಾಗಿದೆ. ಹೆಣ್ಣಿಗೆ ಅವಕಾಶಗಳೇ ಇಲ್ಲದಿರುವ ಕಾಲದಲ್ಲಿ ವಚನಸಾಹಿತ್ಯ, ದಾಸಸಾಹಿತ್ಯ ಹೆಣ್ಣಿನ ಧ್ವನಿಯಾಗಿ ಮೂಡಿಬಂದಿದೆ. ಜನಪದ ಹಾಡುಗಳ ರೂಪದಲ್ಲಿ ಅವಳ ಜ್ಞಾನವಲಯ ವಿಸ್ತೃತಗೊಂಡಿದೆ. ಇತೀಚಿಗೆ ಪರಂಪರೆಯು ಹೆಣ್ಣಿನಿಂದ ನಿರೀಕ್ಷಿಸುವ ಎಲ್ಲಾ ಜವಾಬ್ದಾರಿಗಳೊಂದಿಗೆ, ದುಡಿದು ಸಂಪಾದಿಸುವ ಹೊಸ ಜವಾಬ್ದಾರಿಗಳೂ ಸೇರಿಕೊಂಡಿವೆ. ಈ ಸ್ಥಿತಿಯಿಂದಲೇ ಮೂಡಿ ಬರುತ್ತಿರುವ ಸ್ವಪ್ರಜ್ಞೆಯಿಂದ ಹೆಣ್ಣು, ತನ್ನನ್ನು ಕುರಿತ ಗ್ರಹಿಕೆಯನ್ನು ಮತ್ತು ತಾನು ಲೋಕವನ್ನು ಭಿನ್ನವಾಗಿ ನೋಡುತ್ತಿರುವ ಬಗ್ಗೆ ಹೇಳಿಕೊಳ್ಳುತ್ತಾಳೆ. ಶಿಕ್ಷಣ, ಆರ್ಥಿಕ ಸ್ವಾತಂತ್ರ್ಯ, ಉದ್ಯೋಗಕ್ಷೇತ್ರ ಪ್ರವೇಶ ಮುಂತಾದವು ತರುವ ಬದಲಾವಣೆಯು ಮೇಲ್ನೋಟಕ್ಕೆ ಮಹಿಳಾ ಪ್ರಗತಿಯ ಹಾದಿಯಾಗಿದ್ದರೂ, ಬದಲಾಗಿದೆ ಎನ್ನಲಾಗುವ ಹೆಣ್ಣಿನ ಸ್ಥಿತಿಗತಿಗಳು ಕೆಲವೊಮ್ಮೆ ಅವಳಿಗೆ ಅನಿವಾರ್ಯವೂ, ಅಗತ್ಯವೂ ಆಗಿರುತ್ತವೆ. ಹೊರ ವ್ಯವಸ್ಥೆಯಲ್ಲಿ ಮತ್ತು ಒಳವ್ಯಕ್ತಿತ್ವಗಳಲ್ಲಿ ಇಷ್ಟೆಲ್ಲಾ ಬದಲಾವಣೆಗಳಾಗಿದ್ದರೂ ಕೌಟುಂಬಿಕವಾದ ಹೆಣ್ಣಿನ ವ್ಯಕ್ತಿತ್ವ ಮಾತ್ರ ನಮ್ಮಲ್ಲಿ ಬದಲಾಗಲಿಲ್ಲ.

ಹಿಂದಿನಿಂದ ಇವತ್ತಿನವರೆಗೂ ಆಳುವ ವರ್ಗ, ಪಂಡಿತಮಾನ್ಯ ಜ್ಞಾನದ ಆಕರಗಳು ಈ ಜಗತ್ತನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿವೆ. ಪಾರಂಪರಿಕ ದುಡಿಮೆಗಳನ್ನು ನಿರಾಕರಿಸುತ್ತಿರುವ ಜಗತ್ತಿಗೆ 'ಜ್ಞಾನ', 'ಶಿಕ್ಷಣ' ಎಂಬುದು ಮಾರಾಟದ ವಸ್ತುವಾಗಿ ಪರಿಣಮಿಸಿದೆ. ಶಿಕ್ಷಣದ ಖಾಸಗೀಕರಣದಿಂದ ದುಡಿಯುವ ವರ್ಗದ ಮಕ್ಕಳಿಗೆ, ಮಧ್ಯಮ ವರ್ಗದ ಮಕ್ಕಳಿಗೆ ಶಿಕ್ಷಣ ಕೈಗೆ ಎಟುಕುವ ಸ್ಥಿತಿಯಲ್ಲಿಲ್ಲ. ಇದನ್ನು ನಿಯಂತ್ರಿಸುವ ಹೊಸ ಶಿಕ್ಷಣ ವ್ಯವಸ್ಥೆಯೊಂದು ರೂಪುಗೊಳ್ಳಬೇಕಾಗಿದೆ. ಹೊಸ ಶಿಕ್ಷಣವು ಆತ್ಮಾವಲಂಬನೆಗೆ, ಆರೋಗ್ಯಪೂರ್ಣ ಸಮತೋಲನ ಜೀವನಕ್ಕೆ ಪರಿಪೂರ್ಣ ಮಾರ್ಗವನ್ನು ಕಲ್ಪಿಸಬೇಕು. ಜೀವನದ ವಿವಿಧ ಮುಖಗಳೇ ಶಿಕ್ಷಣದ ಮಾಧ್ಯಮವಾಗಬೇಕು. ಈ ಜೀವನಕ್ಕೆ ಅಗತ್ಯವಾದಂತಹ ಜ್ಞಾನವನ್ನು, ತಿಳುವಳಿಕೆಯನ್ನು ಒದಗಿಸುವಂತಾಗಬೇಕು.

**ಅಧ್ಯಯನದ ಫಲಿತಗಳು**

೧. ಆಧುನಿಕ ಭಾರತದಲ್ಲಿರುವ ಅಕ್ಷರ ಶಿಕ್ಷಣ ಪದ್ಧತಿಯನ್ನು ಪಾಶ್ಚಾತ್ಯರು ಹುಟ್ಟು ಹಾಕಿದರು, ಇಲ್ಲಿನವರ ಆಸಕ್ತಿ, ಅವಶ್ಯಕತೆಗಳಿಗನುಗುಣವಾಗಿ ಶಿಕ್ಷಣ ಪದ್ಧತಿಯೊಂದು ಕಾಲಾನುಕ್ರಮದಲ್ಲಿ ಬೆಳೆದುಬಂತು. ಇಲ್ಲಿನ ಶಿಕ್ಷಣ ಪದ್ಧತಿ ಗುರುಕುಲ, ಆಶ್ರಮಗಳಿಂದ ಪ್ರಾರಂಭವಾಗಿ, ಆಧ್ಯಾತ್ಮಿಕ ಬುನಾದಿಯನ್ನು ತೆಳೆದು ಜೈನಧರ್ಮ, ಬೌದ್ಧಧರ್ಮ, ಸಂಘರಾಮ, ಚೈತ್ಯಾಲಯಗಳಲ್ಲಿ ಸಾರ್ವತ್ರಿಕ ಸ್ವರೂಪ ಪಡೆದುಕೊಂಡು ವಿಹಾರ, ಅಗ್ರಹಾರ, ಬಸದಿ, ವಿಶ್ವವಿದ್ಯಾಲಯ ಮುಂತಾದ ಸಂಸ್ಥೆಗಳಿಂದ ಬೆಳೆಯಿತು. ೯, ೧೦ನೇ ಶತಮಾನದ ವೇಳೆಗೆ ದೇವಾಲಯ, ವಿದ್ಯಾಮಂದಿರಗಳಲ್ಲಿ ಸಾಗಿತ್ತು. ೧೩ನೇ ಶತಮಾನದಲ್ಲಿ ಪರಕೀಯರ ದಾಳಿಗೆ ಸಿಕ್ಕು ಅವನತಿಗಿಳಿದರೂ, ೧೮ನೇ ಶತಮಾನದವರೆಗೂ ಅಲ್ಪ-ಸ್ವಲ್ಪ ಉಳಿದುಕೊಂಡಿತು. ೧೯ನೇ ಶತಮಾನದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಇಂಗ್ಲೀಷ್ ಶಿಕ್ಷಣ ಪದ್ಧತಿಗೆ ತನ್ನನ್ನು ತೆರೆದುಕೊಂಡಿತು. ಹೀಗೆ ಶಿಕ್ಷಣವು ಪ್ರಾಚೀನ ಕಾಲದಿಂದ ಆರಂಭವಾಗಿ ನಮ್ಮ ಧರ್ಮ, ಸಾಹಿತ್ಯ, ಸಂಸ್ಕೃತಿಯನ್ನು ಪೋಷಿಸಿಕೊಂಡು ಸಮಗ್ರತೆಯನ್ನು ತಂದುಕೊಟ್ಟಿದೆ.

೨. ಪ್ರಾಚೀನ ಭಾರತದ ಶಿಕ್ಷಣದ ಧ್ಯೇಯ ಮಾನವ ಕುಲದ ಬಹುಮುಖ ಅಭಿವೃದ್ಧಿಗೆ ಸಂಬಂಧಿಸಿದ್ದಾಗಿದೆ. ಅದು ಬದುಕಿನಿಂದ ಪ್ರತ್ಯೇಕವಾಗಿರಲಿಲ್ಲ ಎಂಬುದನ್ನು ಮೇಲಿನ ಅಧ್ಯಾಯಗಳಲ್ಲಿ ಕಂಡುಕೊಳ್ಳಲಾಗಿದೆ. ಭಾರತೀಯ ದರ್ಶನಗಳಲ್ಲಿ ಜ್ಞಾನವು ಇಂದ್ರಿಯಗಳ ಮೂಲಕ ಹಾಗೂ ಮಾನಸಿಕ ಕ್ರಿಯೆಗಳ ಮೂಲಕ ಅನುಭವ ಪಡೆಯುವುದರಿಂದ, ಶರೀರಕ್ಕಿಂತ ಮನಃಶಾಸ್ತ್ರಕ್ಕೆ ಹೆಚ್ಚಿನ ಮಹತ್ವ ನೀಡಲಾಗಿದೆ. ಇಂದ್ರಿಯಗಳ ಮುಖ್ಯ ಕಾರ್ಯ ಅರಿವು ಮತ್ತು ಕ್ರಿಯೆಯಾದ್ದರಿಂದ ಶಿಕ್ಷಣದ ಮೂಲಕ ಜ್ಞಾನೇಂದ್ರಿಯಗಳನ್ನು ತರಬೇತಿಗೊಳಿಸಬೇಕು. ಈ ಇಂದ್ರಿಯಗಳ ಸಂವೇದನೆಯೇ ದುಃಖಕ್ಕೆ ಕಾರಣವಾಗುವುದರಿಂದ ಅವುಗಳನ್ನು ಮೀರುವ ವಿವೇಕವನ್ನು ಶಿಕ್ಷಣವು ಒದಗಿಸಿಕೊಡಬೇಕು ಎನ್ನುವುದು ದಾರ್ಶನಿಕರ ಮುಖ್ಯ ಕಾಳಜಿಯಾಗಿದೆ.

೩. ಪ್ರಾಚೀನ ಶಿಕ್ಷಣ ಕ್ರಮದಲ್ಲಿ ತಾರ್ಕಿಕ ಚಿಂತನೆಗಳಿಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ಮತ್ತು ಪ್ರತ್ಯಕ್ಷ, ಅನುಮಾನ, ಶಬ್ದಪ್ರಮಾಣಗಳಂತಹ ಜ್ಞಾನಮೂಲಗಳನ್ನು ಒಪ್ಪಿದ್ದರಿಂದ, ತರಗತಿಯ ಬೋಧನೆ ಕಲಿಕಾ ಪ್ರಕ್ರಿಯೆಯು ವಿದ್ಯಾರ್ಥಿಯ ಗ್ರಹಣಶಕ್ತಿಗೆ ಮತ್ತು ಉಹಾಶಕ್ತಿ ಬೆಳವಣಿಗೆಗೆ ಪೂರಕವಾಗಿದೆ. ಇದೇ ಮಾದರಿ ಇಂದಿನ ಶಾಲಾ ತರಗತಿಗಳಲ್ಲಿಯೂ ದೃಕ್ ಶ್ರವಣೋಪಕರಣ ಬಳಕೆಯಿಂದ ಸ್ವಯಂ ಕಲಿಕೆಗೆ ಅನುವು ಮಾಡಿಕೊಟ್ಟಿದೆ. ಆತ್ಮಜ್ಞಾನದ ಜೊತೆಗೆ ಪ್ರಯೋಗಾತ್ಮಕ ಜ್ಞಾನದ ಅರಿವು ಮೂಡಿಸಿದೆ.

೪. ಭಾರತೀಯ ಜ್ಞಾನ ಪರಂಪರೆ ಆಧ್ಯಾತ್ಮಿಕ ಹಾಗೂ ನೈತಿಕ ಮೌಲ್ಯಗಳ ಮೇಲೆ ರೂಪುಗೊಂಡಿದೆ. ಪ್ರಾಪಂಚಿಕ ವ್ಯವಹಾರಗಳನ್ನು ನೆಡೆಸಬಲ್ಲ ವಿವೇಚನಾ ಶಕ್ತಿಯನ್ನು, ಬೌದ್ಧಿಕ ಶಿಸ್ತನ್ನು ಬೆಳೆಸುವುದರೊಂದಿಗೆ, ವಿದ್ಯಾರ್ಥಿಗಳಲ್ಲಿ ವಿಮರ್ಶಾತ್ಮಕ ಆಲೋಚನೆ, ಚಿಂತನ-ಮಂಥನದಿಂದ ಮಾಡಿಕೊಳ್ಳುವ ಆಯ್ಕೆ ಮತ್ತು ಕಲಿಯುವವನ ಸ್ವಾತಂತ್ರ್ಯವನ್ನು ಗೌರವಿಸುವಂತಹ ಮೌಲ್ಯಗಳಿಗೆ ಮೊದಲ ಆದ್ಯತೆ ನೀಡುತ್ತದೆ.

೫. ಶರಣರು ಜ್ಞಾನ ಮತ್ತು ಕ್ರಿಯೆಗಳ ಮೂಲಕ ವಿಭಿನ್ನವಾಗಿ ಚಿಂತಿಸಿದರು. ತಮ್ಮ ವಚನಗಳಲ್ಲಿ ಅರಿವು, ಆಚಾರ, ಅನುಭಾವಗಳಿಗೆ ಆದ್ಯತೆ ನೀಡಿದ್ದಾರೆ. ಅಂತರಂಗದ ಅರಿವು ಮತ್ತು ಬಹಿರಂಗದ ಕ್ರಿಯೆ ಪರಸ್ಪರ ಸಮರಸವಾಗಿ ಕೂಡಿರಬೇಕೆಂದಿದ್ದಾರೆ. ಕ್ರಿಯೆ ಇಲ್ಲದ ಜ್ಞಾನ ಅಪೂರ್ಣ, ಜ್ಞಾನವಿಲ್ಲದ ಕ್ರಿಯೆಯೂ ಅಪೂರ್ಣವಾದದ್ದೆ ಆಗಿದೆ. ಇಂತಹ ಅರಿವು ಮೌಢ್ಯತೆಯನ್ನು ಅಳಿಸಿ ಹಾಕಿ, ಜನರ ಮನಸ್ಸನ್ನು ವಿಚಾರ ಮಂಥನದ ಕಡೆ ಪರಿವರ್ತಿಸುವ ಕೆಲಸ ಮಾಡುತ್ತದೆ.

೬. ಹರಿದಾಸರು ಜ್ಞಾನ ಭಕ್ತಿಗಳ ಜೊತೆಗೆ ವೈರಾಗ್ಯವನ್ನು ಬೋಧಿಸಿದ್ದಾರೆ. ಸ್ಮರಣೆ, ಸಮರ್ಪಣೆಗಳ ಮೂಲಕ ಚಿತ್ತಶುದ್ಧಿ ಮಾಡಿಕೊಳ್ಳಬೇಕೆಂದು ಹೇಳಿದ್ದಾರೆ. ಅವರು ಲೌಕಿಕದಲ್ಲಿದ್ದೂ ಇಲ್ಲದಂತೆ ಬಾಳಿದ ರೀತಿ, ನಿರ್ಲಿಪ್ತ ಬದುಕಿನ ಸಂಕೇತವಾಗಿದೆ. ಬದುಕನ್ನು ವಾಸ್ತವವಾಗಿ ಅನುಭವಿಸುತ್ತಲೇ, ಅದರಲ್ಲಿರುವ ಸಮಸ್ಯೆಗಳನ್ನು ಕಂಡುಕೊಂಡು ಅವುಗಳಿಗೆ ಪರಿಹಾರ ಹುಡುಕುವ ಪ್ರಯತ್ನ ಇವರದು. ಬದುಕಿಗೆ ಹೆಚ್ಚಿನ ಮಹತ್ವ ಕೊಟ್ಟ ಇವರು ದಾರಿ ತಪ್ಪಿದವರನ್ನು ಭಕ್ತಿಯ ಮೂಲಕ ಸರಿ ದಾರಿಗೆ ತರುವ ವೈಚಾರಿಕ ನಿಲುವು ಇವರದಾಗಿದೆ. ಇಲ್ಲಿ ಕಲಿಯುವುದಕ್ಕಿಂತ, ಮೀರಿ ನಿಲ್ಲುವ ಪ್ರಕ್ರಿಯೆ ಮುಖ್ಯವಾಗಿದೆ.

೭. ತತ್ವಪದಕಾರರು ತಮ್ಮ ಮಾನಸಿಕ ಪ್ರಜ್ಞೆಯ ವಿಕಾಸ ಮಾರ್ಗದಲ್ಲಿ ಅಡ್ಡಿಯಾಗುವ ಅವಗುಣಗಳನ್ನು, ವ್ಯಕ್ತಿಗಳನ್ನು, ಸನ್ನಿವೇಶಗಳನ್ನು ಬಿಟ್ಟು, ಸಾಧಕನಿಗೆ ಸಹಾಯಕವಾಗುವ ಸಾಧಕರ ಸಂಗವನ್ನು ಪಡೆದು, ಆ ಗುರು ಪರಂಪರೆಯನ್ನು ಮೀರಿ ಬೆಳೆದಿದ್ದಾರೆ. ಇಲ್ಲಿ ಎಲ್ಲಾ ಧರ್ಮದ ಜನರಿದ್ದಾರೆ. ಆದರೂ ಗರ್ಭಗುಡಿ ಸಂಸ್ಕೃತಿಯನ್ನು ನಿರಾಕರಿಸಿ ಜನಸಮುದಾಯದ ನಡುವೆ ಧ್ಯಾನಸ್ಥರಾಗಿದ್ದಾರೆ. ಬದುಕಿಗಂಟಿಕೊಂಡಿದ್ದ ದುಃಖ, ನಿರಾಸೆಗಳನ್ನು ಕಳೆದುಕೊಂಡು, ಬದುಕನ್ನು

ನೆಡೆಸಲು ನಮಗೆ ನೆರವಾಗುವಂತಹ ಜ್ಞಾನಮೂಲವನ್ನು ಗ್ರಹಿಸುವತ್ತ ಮಾನವನ ಪ್ರಯತ್ನ ಸಾಗಬೇಕು. ಆ ಅರಿವು ಒಮ್ಮೆಲೇ ಸಿದ್ಧಿಸುವುದಿಲ್ಲ. ನಿರಂತರ ಸಾಧನೆಯಿಂದ ಕಂಡು ಕೊಳ್ಳುವಂತಹದ್ದಾಗಿದೆ.

೮. ಯಾವ ಸಿದ್ಧಾಂತಗಳು ಶಿಕ್ಷಣದ ಸಮಸ್ಯೆಯನ್ನು ಬಿಡಿಸಲಾರವು. ಶಿಕ್ಷಣ ಉಪಯುಕ್ತ ವಾಗಬೇಕಾದರೆ, ಅದು ಹಿಂದಿನ ಮತ್ತು ಇಂದಿನ ಮೌಲ್ಯಗಳನ್ನು ಸಂಯೋಜಿಸಿ ವ್ಯವಸ್ಥೆ ಗೊಳಿಸುವಂತಿರಬೇಕು. ಗ್ರಂಥಸ್ಥಜ್ಞಾನ ಮತ್ತು ಆತ್ಮಜ್ಞಾನಗಳ ಸೃಜನಶೀಲತೆಯನ್ನು ಉಳಿಸಿಕೊಂಡು ಜ್ಞಾನದ ವಿಸ್ತರಣೆಗೆ ತೆರೆದುಕೊಳ್ಳುವುದು ಅಗತ್ಯವಿದೆ.

೯. ಮೌಲ್ಯಶಿಕ್ಷಣದ ವ್ಯಾಪ್ತಿ ಶಾಲಾ ಶಿಕ್ಷಣದ ಪರಿಧಿಗಷ್ಟೇ ಸೀಮಿತವಾದುದಲ್ಲ. ಅದು ಶಾಲೆಯ ಹೊರಗಿನ ಇನ್ನಿತರ ಮಾಧ್ಯಮಗಳಾದ ಸಿನಿಮಾ, ದೂರದರ್ಶನ, ರೇಡಿಯೋ, ಕುಟುಂಬ, ಸ್ನೇಹಿತರು, ಸಾಮಾಜಿಕ ಸನ್ನಿವೇಶಗಳ ಪ್ರಭಾವ ಇತ್ಯಾದಿಗಳಿಂದ ನಿರ್ಧರಿಸುವಂತಹದ್ದಾಗಿದೆ. ಇಂದಿನ ಪಠ್ಯಕ್ರಮವು ನೈಜ ಜೀವನದಿಂದ ದೂರವಾಗಿದ್ದು, ಕೇವಲ ಬೌದ್ಧಿಕ ವಿಕಾಸಕ್ಕೆ ಮಹತ್ವ ನೀಡುವ ಈ ಪಠ್ಯಗಳು ವ್ಯಕ್ತಿಯ ಇತರ ಶಕ್ತಿ ಸಾಮರ್ಥ್ಯಗಳ ಬೆಳವಣಿಗೆಗಾಗಿ ಗಮನ ನೀಡುತ್ತಿಲ್ಲ. ಬೌದ್ಧಿಕ ವಿಕಾಸದ ಜೊತೆಗೆ ಸಂಗೀತ, ಚಿತ್ರಕಲೆ, ನೃತ್ಯಕಲೆ, ಕರಕುಶಲತೆಗಳನ್ನು ಕಲಿಸುವ ವ್ಯವಸ್ಥೆ ಇಂದಿನ ಪಠ್ಯ ವಸ್ತುವಾಗಿರುವುದು ವಿಶೇಷ ಸಂಗತಿಯಾಗಿದೆ.

೧೦. ಶಿಕ್ಷಣದ ಚಟುವಟಿಕೆಗಳು ವರ್ತಮಾನದಿಂದ ಭವಿಷ್ಯದೆಡೆಗೆ ಸಾಗುವಂತಿರಬೇಕು. ಪಠ್ಯ ವಿಷಯಗಳು ಜೀವನದಿಂದ ಶಾಲೆಗೆ, ಶಾಲೆಯಿಂದ ಜೀವನಕ್ಕೆ ಅನ್ವಯವಾಗುವಂತಿರಬೇಕು. ಭೂತಕಾಲ ಅಡಿಪಾಯವಾಗಿ, ಭವಿಷ್ಯದ ಗುರಿ ಸಾಧಿಸಲು ವರ್ತಮಾನವು ಸಾಧನವಾಗಬೇಕು. ಇಲ್ಲದಿದ್ದರೆ ಇಂತಹ ಶುಷ್ಕ ಜ್ಞಾನ ಮಾದರಿಗಳು ತನ್ನನ್ನು ತಾನು ಅರಿಯಲು ನೆರವಾಗದೆ, ಪ್ರತ್ಯೇಕವಾಗಿ ಉಳಿಯುತ್ತವೆ.

೧೧. ನಿಜವಾದ ಜ್ಞಾನ ಗಳಿಕೆಯ ವಿಧಾನವೆಂದರೆ ವೈಜ್ಞಾನಿಕ ವಿಧಾನ. ಹಾಗಂದ ಮಾತ್ರಕ್ಕೆ ಎಲ್ಲಾ ಸತ್ಯಗಳನ್ನು ವಿಜ್ಞಾನವೊಂದೆ ಕಂಡುಹಿಡಿದಿದೆ ಎಂದಲ್ಲ. ಇನ್ನೂ ಕಂಡು ಹಿಡಿಯದೆ ಇರುವ ಅನೇಕ ಸತ್ಯಗಳಿರಬಹುದು. ಜ್ಞಾನದ ಶೋಧ ವಿಸ್ತರಣೆಗೊಂಡಂತೆ ಬಹಳಷ್ಟು ಆತಂಕಗಳು ನಮ್ಮೆದುರು ತೆರೆದುಕೊಳ್ಳುತ್ತವೆ. ವೇಗವಾಗಿ ಬೆಳೆಯುತ್ತಿರುವ ತಾಂತ್ರಿಕ ಮತ್ತು ವೈಜ್ಞಾನಿಕ ಜ್ಞಾನವನ್ನು ಮಕ್ಕಳಿಗೆ ನೀಡುವಾಗ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಜ್ಞಾನವನ್ನು ಸಮನ್ವಯ ಮಾಡಿ ನೀಡಬೇಕು. ಮಾಧ್ಯಮಿಕ ಮತ್ತು ಉಚ್ಚ ಶಿಕ್ಷಣದಲ್ಲಿ ವೈಜ್ಞಾನಿಕ ಪ್ರವೃತ್ತಿಯನ್ನು ಬೆಳೆಸಬೇಕು. ಆಧುನಿಕ ವೈಜ್ಞಾನಿಕ ಜ್ಞಾನವು ಮಕ್ಕಳನ್ನು ಭೌತಿಕ ಸುಖದೆಡೆಗೆ ಸೆಳೆಯದಂತೆ ಮತ್ತು ಆಧ್ಯಾತ್ಮಿಕತೆಯನ್ನು ಬಿಡದಂತೆ ಪಠ್ಯವನ್ನು ರೂಪಿಸಬೇಕು. ಏಕೆಂದರೆ ಆಧ್ಯಾತ್ಮಿಕ ತಳಹದಿ ಇಲ್ಲದ ವಿಜ್ಞಾನ ಹಾಗೂ ವೈಜ್ಞಾನಿಕ ತಳಹದಿ ಇಲ್ಲದ ಆಧ್ಯಾತ್ಮಿಕತೆ ಎರಡೂ ವ್ಯರ್ಥ. ಇವೆರಡರ ಸಮನ್ವಯ ಅತೀ ಮುಖ್ಯವಾಗಿದೆ.

೧೨. ಜ್ಞಾನ ಪ್ರಸರಣ ಹಾಗೂ ದೃಷ್ಟಿಕೋನದ ಸಂದೇಶವನ್ನು ಆಧುನಿಕ ಸಮೂಹ ಸಂವಹನ ಜಾಲದಷ್ಟು ತ್ವರಿತವಾಗಿ ಮುಟ್ಟಿಸಲು ಬೇರೆ ಯಾವ ಮಾಧ್ಯಮದಿಂದಲೂ ಸಾಧ್ಯವಿಲ್ಲ. ಆಧುನಿಕ ಜ್ಞಾನ ವಿಚಾರಗಳು ಹಾಗೂ ಮಾಹಿತಿಗಳನ್ನು ಜನರಿಗೆ ತಲುಪಿಸುವ ಮೂಲಕ ಅರಿವಿನ ವಿಸ್ತಾರಕ್ಕೆ ಸಹಕಾರಿಯಾಗಿವೆ.

೧೩. ಹೊಸ ಪೀಳಿಗೆಯವರು ಹೊಸದನ್ನು ಸುಲಭವಾಗಿ ತಮ್ಮದಾಗಿಸಿಕೊಳ್ಳುತ್ತಾರೆ. ಈ ಹೊಸ ಜ್ಞಾನ ಮಾರ್ಗಕ್ಕೆ ಅಡ್ಡಿಯೆಂದರೆ, ಹಿರಿಯರು ಪರಂಪರೆಯ ಹೆಸರಿನಲ್ಲಿ ಕೆಲವೊಂದು ಒಳಿತು-ಕೆಡುಕುಗಳನ್ನು ಇಡಲು ತವಕಿಸುತ್ತಿದ್ದಾರೆ. ಅದರಂತೆ ಹೆಣ್ಣು ಗಂಡಿನ ಸಂಬಂಧ ಸ್ವರೂಪವನ್ನು ವಿವರಿಸಿಕೊಟ್ಟಿರುವ ಮಾರ್ಗಗಳು ಇದೇ ಬಗೆಯದ್ದಾಗಿದೆ. ಹೆಣ್ಣಿನ ಮೂಲಕ ಜಗತ್ತನ್ನು ನೋಡುವ, ಕಾಣುವ ವ್ಯವಸ್ಥೆಯನ್ನು ಚರಿತ್ರೆ, ಪುರಾಣಗಳು ಮರೆತಿವೆ. ಗಂಡಿನ ಪುರಾಣ, ಪುಸ್ತಕ, ಜ್ಞಾನದ ವ್ಯಾಖ್ಯಾನಗಳನ್ನು ಪಕ್ಕಕ್ಕಿರಿಸಿ ಲೋಕವನ್ನು ಬೇರೆ ರೀತಿ ನೋಡುವ ಅನೇಕ ಮಾರ್ಗಗಳನ್ನು ಹೆಣ್ಣು ತೋರಿಸಿಕೊಟ್ಟಿದ್ದಾಳೆ. ಬೌದ್ಧಗುರು ಸರಹಪಾದನಿಗೆ ಬಾಣ ಮಾಡುವ ಉದ್ಯೋಗದಲ್ಲಿ ಶಬರ ಕನ್ಯೆ, ಬೌದ್ಧಧರ್ಮದ ಜ್ಞಾನವನ್ನು ಅರಿಯಬಹುದೆಂದು ತೋರಿಸಿಕೊಡುತ್ತಾಳೆ. ನಾಗಲಿಂಗ ಸ್ವಾಮಿಗಳಿಗೆ ಸಮಗಾರ ಭೀಮವ್ವ ಹಾಲೂಣಿಸಿ ಅರಿವನ್ನುಂಟು ಮಾಡುತ್ತಾಳೆ. ಕುಂಬಾರ ಹುಡುಗಿ ಗಡಿಗೆ ಮಾಡುತ್ತಾ ಶರೀಫರಿಗೆ ಲೋಕಸೃಷ್ಟಿ ಮಾಡುವವರು ಯಾರು ಎಂಬುದನ್ನು ತಿಳಿಸಿಕೊಡುತ್ತಾಳೆ. ಇಂತಹ ಅರಿವಿನ ವ್ಯಾಖ್ಯಾನವನ್ನು ಗಂಡಿಗೆ ಬಿಟ್ಟುಕೊಡದೆ, ಹೆಣ್ಣು ತಾನೇ ನಿಭಾಯಿಸಿದಾಗ ಜ್ಞಾನ ಮಾರ್ಗಗಳು ಬೇರೆಯಾಗುತ್ತವೆ.

೧೪. ವಸಾಹತುಶಾಹಿ ಕಾಲದಲ್ಲಿ ಶಿಕ್ಷಣದ ಸಾರ್ವತ್ರಿಕರಣದಿಂದಾಗಿ ಪರಂಪರೆಯಿಂದ ಬಂದ ಮಹಿಳೆಯರ ಶೋಷಣೆಯ ನೆಲೆಗಳು ಸಡಿಲವಾದವು. ಸ್ತ್ರೀಯು ಶಿಕ್ಷಣ ಪಡೆದು ಆರ್ಥಿಕವಾಗಿ ಸ್ವಾವಲಂಬಿಯಾದರೆ ಸಮಾಜದಲ್ಲಿ ಪುರುಷನಂತೆ ಸರಿಸಮಾನ ಸ್ಥಾನಮಾನ ದೊರೆಯುತ್ತವೆಂಬ ವಾದವನ್ನು ಹಲವು ಚಿಂತಕರು ಮಂಡಿಸುತ್ತಾರೆ. ಆದರೆ ವಾಸ್ತವವಾಗಿ ಶಿಕ್ಷಣ ಪಡೆದು ಆರ್ಥಿಕವಾಗಿ ಸ್ವಾವಲಂಬಿಯಾದ ಮಹಿಳೆಯರು ಸಹ ಕೌಟುಂಬಿಕ ದೌರ್ಜನ್ಯಕ್ಕೆ ಒಳಗಾಗುತ್ತಾರೆ. ಶಿಕ್ಷಣ ಮತ್ತು ಆರ್ಥಿಕ ಸ್ವಾವಲಂಬನೆಯ ಜೊತೆಗೆ, ಪುರುಷ ಪ್ರಧಾನ ದೃಷ್ಟಿಕೋನ ಬದಲಾಗಬೇಕಾದ ಅಗತ್ಯವಿದೆ. ಕುಟುಂಬದ ಸದಸ್ಯರ ಮತ್ತು ಸಮಾಜದ ಜನರ ಭಾವನೆಯಲ್ಲಿ ಸ್ತ್ರೀಯರ ಬಗ್ಗೆ ಧನಾತ್ಮಕ ಮನೋಭಾವನೆಗಳು ಮೂಡದಿದ್ದರೆ, ಮಹಿಳೆಯರನ್ನು ಈ ಸಮಸ್ಯೆಗಳಿಂದ ಮುಕ್ತರನ್ನಾಗಿಸಲು ಸಾಧ್ಯವಿಲ್ಲ.

೧೫. ಜ್ಞಾನವೆಂದರೆ ಬೌದ್ಧಿಕ ಕಸರತ್ತು ಅಲ್ಲ. ಅದು ಹೃದಯವನ್ನು ಸಂಸ್ಕಾರಗೊಳಿಸುವಂತದ್ದು. ವೈಯಕ್ತಿಕತೆಗಿಂತ ಸಾಮೂಹಿಕ ಹಿತಕ್ಕೆ ಆದ್ಯತೆ ನೀಡುವಂತಹದ್ದೆಂಬುದನ್ನು ನನ್ನ ಅಧ್ಯಯನದಿಂದ ವಿವಿಧ ನಿದರ್ಶನಗಳ ಮೂಲಕ ಕಂಡುಕೊಂಡಿದ್ದೇನೆ.

# ಅನುಬಂಧಗಳು

ಅ. ಪ್ರಧಾನ ಆಕರಗಳು

ಆ. ಸಹಾಯಕ ಆಕರಗಳು

ಇ. ಲೇಖನಗಳು

ಈ. ಪ್ರಬಂಧಗಳು

ಎಂ.ಫಿಲ್. ಪ್ರಬಂಧಗಳು

ಪಿಎಚ್.ಡಿ. ಪ್ರಬಂಧಗಳು

ಡಿ.ಲಿಟ್. ಪ್ರಬಂಧಗಳು

ಉ. ಪತ್ರಿಕೆಗಳು

## ಪರಾಮರ್ಶನ ಗ್ರಂಥಗಳು

**ಅ. ಪ್ರಧಾನ ಆಕರಗಳು:**

೧. ಅಮರೇಶ ನುಗಡೋಣಿ; ೨೦೧೦; ಅಲ್ಲಮಪ್ರಭು ವಚನಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೨. ಅಮರೇಶ ನುಗಡೋಣಿ; ೨೦೧೦; ಪುರಂದರ ಸಾಹಿತ್ಯ ಅಧ್ಯಯನ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೩. ಆನಂದಮೂರ್ತಿ ಜಿ.ವಿ; ೧೯೯೬; ತತ್ವಪದಕಾರರು; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೪. ಕಾಳೇಗೌಡ ನಾಗವಾರ ಮತ್ತು ಆನಂದಮೂರ್ತಿ ಜಿ.ವಿ; ೨೦೦೦; ಹಲವು ತೋಟದ ಹೂಗಳು; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೫. ಕುಂಬಾರ ಶಂ.ಶಿ; ೨೦೦೮; ಶರಣ ಶಿಶುನಾಳರ ಪದಗಳು; ವಿಜೇತ ಪ್ರಕಾಶನ, ಗದಗ

೬. ಗಿರಡ್ಡಿ ಗೋವಿಂದರಾಜ; ೨೦೧೩; ವಚನ ವಿನ್ಯಾಸ; ಮನೋಹರ ಗ್ರಂಥಮಾಲಾ, ಧಾರವಾಡ

೭. ಚನ್ನವೀರಪ್ಪ ಎಸ್.ಆರ್; ೨೦೦೦; ನಾಗಲಿಂಗಸ್ವಾಮಿ ತತ್ವಪದಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೮. ಚನ್ನವೀರಪ್ಪ ಎಸ್.ಆರ್; ೨೦೦೦; ಸ್ವರವಚನ ತರಂಗ, ಸಂಪುಟ–೨; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೯. ಜವರಯ್ಯ.ಮ.ನ; ೧೯೯೯; ವಚನವಾಹಿನಿ–೧ (ಪೀಠಾರೋಹಣ ರಜತ ಸಂಪುಟ–೧); ವೀರಶೈವ ಅಧ್ಯಯನ ಸಂಸ್ಥೆ ಡಂಬಳ, ಗದಗ

೧೦. ನಾಗಭೂಷಣಸ್ವಾಮಿ.ಓ.ಎಲ್. ಮತ್ತು ಇತರರು; ೨೦೦೦; ತತ್ತ್ವಪದಗಳು; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೧. ನಾಗಭೂಷಣಸ್ವಾಮಿ.ಓ.ಎಲ್; ೨೦೦೪; ವಚನ ಸಾವಿರ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೨. ನಾಗಭೂಷಣಸ್ವಾಮಿ. ಓ.ಎಲ್; ೨೦೧೪; ವಚನ ವಿಚಾರ; ಅಲ್ಲಮ ಪ್ರಕಾಶನ, ಮೈಸೂರು

೧೩. ನಾವಡ.ಎ.ವಿ; ೨೦೦೨; ಈಸಬೇಕು ಇದ್ದು ಜಯಿಸಬೇಕು–ಸಮಾಜಮುಖಿ ಕೀರ್ತನೆಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೪. ಬಸವರಾಜ ಸಬರದ; ೨೦೦೦; ಹೈದರಾಬಾದ ಕರ್ನಾಟಕದ ತತ್ತ್ವಪದಗಳು; ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೧೫. ಮರಿದೇವರು. ಸಿ.ಹೆಚ್; ೨೦೦೯; ಶಿಕ್ಷಣ ತತ್ತ್ವಶಾಸ್ತ್ರ (ಶಿಕ್ಷಣಕ್ಕೆ ತಾತ್ತ್ವಿಕ, ಸಾಮಾಜಿಕ, ಐತಿಹಾಸಿಕ, ಜೈವಿಕ ಬುನಾದಿ ಮತ್ತು ಉದಯೋನ್ಮುಖ ಭಾರತದಲ್ಲಿನ ಶಿಕ್ಷಣ); ಉದಯಭಾನು ಪ್ರಕಾಶನ, ತುಮಕೂರು
೧೬. ಮಲ್ಲಿಕಾರ್ಜುನ ಕಡಕೋಳ; ೨೦೧೪; ಕಡಕೋಳ ಮಡಿವಾಳಪ್ಪನವರ ತತ್ವಪದಗಳು; ಶ್ರೀ ವೀರೇಶ್ವರ ಪ್ರಕಾಶನ, ಕಡಕೋಳ
೧೭. ರಾಜಶೇಖರ ಜಮದಂಡಿ; ೨೦೧೩; ಮೋಳಿಗೆ ಮಾರಯ್ಯನವರ ವಚನಗಳ ದೀಪಿಗೆ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೧೮. ವಿಜಯಶ್ರೀ ಸಬರದ; ೨೦೦೧; ವಚನವಾಹಿನಿ; ಪಲ್ಲವಿ ಪ್ರಕಾಶನ, ಗುಲಬರ್ಗಾ
೧೯. ವೆಂಕಟೇಶಮೂರ್ತಿ.ಎಚ್.ಎಸ್; ೨೦೧೨; ಕೀರ್ತನಕಾರರು; ಸಪ್ನ ಬುಕ್ ಹೌಸ್, ಬೆಂಗಳೂರು
೨೦. ಶಿವಾನಂದ ಗುಬ್ಬಣ್ಣನವರ; ೨೦೦೨; ಶಿಶುನಾಳ ಶರೀಫರ ಗೀತೆಗಳು; ಅಕ್ಷಯ ಪ್ರಕಾಶನ, ಧಾರವಾಡ
೨೧. ಶ್ರೀಧರ.ವೈ.ಎನ್; ೨೦೦೯; ಶಿಕ್ಷಣದ ತಾತ್ವಿಕ ನೆಲೆ; ಅನುರಾಧ ಪ್ರಕಾಶನ, ಬೆಂಗಳೂರು
೨೨. ಜನಪ್ರಿಯ ವಚನ ಸಂಪುಟಗಳು; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
೨೩. ಹರಿದಾಸ ಸಾಹಿತ್ಯ ಸಂಪುಟಗಳು; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

**ಆ. ಸಹಾಯಕ ಆಕರಗಳು**

೧. ಅಂಜನಪ್ಪ ಯಳವಾಡ; ೨೦೦೮; ಧರ್ಮ ಮತ್ತು ಮುಕ್ತ ವಿಚಾರ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೨. ಅಮರೇಶ ನುಗಡೋಣಿ; ೧೯೯೯; ನುಡಿವ ಬೆಡಗು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೩. ಅಮರೇಶ ನುಗಡೋಣಿ; ೨೦೧೦; ಅಲ್ಲಮಪ್ರಭು ವಚನಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೪. ಅಮರೇಶ ನುಗಡೋಣಿ; ೨೦೧೦; ಪುರಂದರ ಸಾಹಿತ್ಯ ಅಧ್ಯಯನ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೫. ಅಮರೇಶ ನುಗಡೋಣಿ; ೨೦೧೩; ಸರ್ವಜ್ಞನ ತ್ರಿಪದಿಗಳು: ಅನುಸಂಧಾನದ ನೆಲೆಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೬. ಅಮರೇಶ ನುಗಡೋಣಿ; ೨೦೧೪; ತತ್ವಪದ ಸಾಹಿತ್ಯ ಅಧ್ಯಯನ; ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೭. ಅಮರೇಶ ನುಗಡೋಣಿ; ೨೦೧೮; ಭಾರತೀಯ ಸಾಹಿತ್ಯ ನಿರ್ಮಾಪಕರು; ಜೇಡರ ದಾಸಿಮಯ್ಯ; ಸಾಹಿತ್ಯ ಅಕಾಡೆಮಿ, ಬೆಂಗಳೂರು
೮. ಅಶ್ವತ್ಥನಾರಾಯಣ.ಜಿ; ೨೦೦೩; ಶ್ರೀ ವಿಜಯದಾಸರ ಕೀರ್ತನೆಗಳು ಮತ್ತು ಉಗಾ ಭೋಗಗಳು(ಸಮಗ್ರ ದಾಸ ಸಾಹಿತ್ಯ ಸಂಪುಟ:೯-ಭಾಗ:೨); ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
೯. ಅಶೋಕ ಜಿ.ಎನ್.; ೨೦೧೦; ಶಿಕ್ಷಣ ಮತ್ತು ಜಾಗತೀಕರಣ; ಮುದ್ದುಕೃಷ್ಣ ಪ್ರಕಾಶನ, ದಾವಣಗೆರೆ
೧೦. ಆನಂದತೀರ್ಥಾಚಾರ್ಯ ಪಿ.ಆರ್. ಮತ್ತು ಅರಳುಮಲ್ಲಿಗೆ ಪಾರ್ಥಸಾರಥಿ; ೨೦೧೩ ದಾಸಸಾಹಿತ್ಯ ವಿಶಿಷ್ಟಕೋಶ; ತಿರುಮಲತಿರುಪತಿ ದೇವಸ್ಥಾನ ತಿರುಪತಿ, ಆಂಧ್ರಪ್ರದೇಶ
೧೧. ಆನಂದಮೂರ್ತಿ ಜಿ.ವಿ; ೧೯೯೬; ತತ್ವಪದಕಾರರು; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೧೨. ಆರ್ಕೆ. ಮಣಿಪಾಲ; ೨೦೦೦; ಶಿಕ್ಷಣ ಮತ್ತು ವೈಚಾರಿಕತೆ(ವೈಚಾರಿಕ ಬರಹಗಳ ಸಂಕಲನ); ಸಂವಾದ ಪ್ರಕಾಶನ, ಮಣಿಪಾಲ
೧೩. ಉಪಾಧ್ಯ ಜಿ.ಎನ್.; ೨೦೧೧; ಅನುಭಾವ ಸಾಹಿತ್ಯದ ವಿಭಿನ್ನ ನೆಲೆಗಳು; ಕನ್ನಡ ವಿಭಾಗ, ಮುಂಬೈ ವಿಶ್ವವಿದ್ಯಾಲಯ
೧೪. ಎಚ್ಚೆಸ್ಕೆ; ೨೦೦೧; ಶಿಕ್ಷಣ-ಸಂಸ್ಕೃತಿ; ಕಮಲ ಪ್ರಕಾಶನ, ಮೈಸೂರು
೧೫. ಓಬಳೇಶಘಟ್ಟಿ.ಆರ್. ; ೨೦೦೭; ಬುದ್ಧನ ಧರ್ಮ ಇತರ ಧರ್ಮಗಳ ಒಂದು ವಿವೇಚನೆ; ಶಿವಗಂಗಾ ಪ್ರಕಾಶನ, ಸಕಲೇಶಪುರ
೧೬. ಕಣವಿ. ಸಿ.ಎಸ್. ;೧೯೭೭; ಸರ್ವಜ್ಞ ಕವಿ ಜೀವನ ಹಾಗೂ ಕಾವ್ಯ {೬ ಉಪನ್ಯಾಸಗಳು} ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೭. ಕಲಬುರ್ಗಿ ಎಂ.ಎಂ.; ೧೯೭೮; ಬಸವ ದರ್ಶನ-೨ (ಪ್ರಬಂಧ ಸಂಕಲನ); ಶರಣ ಬಸವೇಶ್ವರ ಗ್ರಂಥ ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ;
೧೮. ಕಮಲಾಹಂಪನ; ೧೯೮೨; ಅನೇಕಾಂತವಾದ; ವರ್ಧಮಾನ ಪ್ರಕಾಶನ, ಬೆಂಗಳೂರು
೧೯. ಕಲಬುರ್ಗಿ ಎಂ.ಎಂ; ೨೦೦೪; ಮಾರ್ಗ-೪; ಸಪ್ನ ಬುಕ್ ಹೌಸ್, ಬೆಂಗಳೂರು
೨೦. ಕಲಬುರ್ಗಿ ಎಂ.ಎಂ; ೨೦೦೭; ಪರಿಕಲ್ಪನೆ; ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೨೧. ಕೃಷ್ಣಮೂರ್ತಿ.ಮ.ಸು; ೨೦೧೦; ಸಿದ್ಧಸಾಹಿತ್ಯ; ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೨೨. ಕಾಳೆ ಎನ್.ಎಸ್; ೧೯೭೬; ಕಬೀರ ಮತ್ತು ಸರ್ವಜ್ಞ (ಉಪನ್ಯಾಸಮಾಲೆ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೨೩. ಕಾಳೇಗೌಡ ನಾಗವಾರ ಮತ್ತು ಆನಂದಮೂರ್ತಿ ಜಿ.ವಿ; ೨೦೦೦; ಹಲವು ತೋಟದ ಹೂಗಳು; ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೪. ಕೀರ್ತಿನಾಥ ಕುರ್ತಕೋಟಿ; ೨೧೧೨; ಕನ್ನಡ ಸಾಹಿತ್ಯ ಸಂಗಾತಿ; ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ
೨೫. ಕುಂಬಾರ ಶಂ.ಶಿ; ೨೦೦೮; ಶರಣ ಶಿಶುನಾಳರ ಪದಗಳು; ವಿಜೇತ ಪ್ರಕಾಶನ, ಗದಗ
೨೬. ಕೋಟಿ. ಎಸ್.ಜಿ; ೨೦೧೦; ಆರೂಢ ಸಂಪದ; ಶ್ರೀ ಸದ್ಗುರು ಸಿದ್ಧಾರೂಢ ಬೃಹನ್ಮಠ ಮಂಟೂರ, ಬಾಗಲಕೋಟೆ
೨೭. ಕೋಟಿ ಎಸ್.ಜಿ; ೨೦೧೫; ಶರಣ ಸಂಪದ; ಮಹಾಂತ ಚೇತನ ಪ್ರಕಾಶನ, ಬಾಗಲಕೋಟೆ
೨೮. ಗಿರಡ್ಡಿ ಗೋವಿಂದರಾಜ; ೨೦೧೩; ವಚನ ವಿನ್ಯಾಸ; ಮನೋಹರ ಗ್ರಂಥಮಾಲಾ, ಧಾರವಾಡ
೨೯. ಗೀತಾ ವಸಂತ; ೨೦೦೪; ಬೆಳಕಿನ ಬೀಜ; ಸಿವಿಜಿ ಪ್ರಕಾಶನ, ಬೆಂಗಳೂರು
೩೦. ಗುರುಲಿಂಗ ಕಾಪಸೆ; ೨೦೦೪; ಬಸವ ಸಾಹಿತ್ಯ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೩೧. ಗೋಕುಲನಾಥ.ಕೆ; ೨೦೧೪; ಶ್ರೀ ವ್ಯಾಸರಾಯರು; ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೩೨. ಗೌರಮ್ಮ ವೈ.ಎಸ್; ೨೦೧೫; ಭಾರತೀಯ ದರ್ಶನ ಮತ್ತು ಪಾಶ್ಚಾತ್ಯ ಚಿಂತನೆ; ಭಾರತೀ ಪ್ರಕಾಶನ, ಮೈಸೂರು.
೩೩. ಚನ್ನವೀರಪ್ಪ ಎಸ್.ಆರ್; ೨೦೦೦; ನಾಗಲಿಂಗಸ್ವಾಮಿ ತತ್ವಪದಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೩೪. ಚನ್ನವೀರಪ್ಪ ಎಸ್.ಆರ್; ೨೦೦೦; ಸ್ವರವಚನ ತರಂಗ, ಸಂಪುಟ-೨; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೩೫. ಚನ್ನಬಸಪ್ಪ ಗೊ.ರು. ಮತ್ತು ಚಿಕ್ಕರಿಯಪ್ಪ ಜಿ.ವಿ; ೨೦೦೪; ಶರಣತತ್ತ್ವ ಚಿಂತನೆ; ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು
೩೬. ಚನ್ನಬಸಪ್ಪ ಗೋ.ರು.; ೨೦೦೬; ಬಸವಯೋಗಿ; ವಿಶ್ವಗುರು ಬಸವಧರ್ಮ ಪ್ರಚಾರ ಕೇಂದ್ರ, ಹುಲಸೂರು
೩೭. ಚನ್ನಬಸಪ್ಪ ಗೊ.ರು. ಮತ್ತು ಬಸವರಾಜ ಸಾದರ; ೨೦೦೮; ನೂರೊಂದು ಚಿಂತನ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೩೮. ಚಂದ್ರಾ ಜೋಶಿ; ೨೦೧೧; ಕನ್ನಡ ಹರಿದಾಸರ ಹಾಗೂ ಮರಾಠಿ ಸಂತರ ಸಾಮಾಜಿಕ ಚಿಂತನೆಗಳು; ಅಭಿಜಿತ್ ಪ್ರಕಾಶನ, ಮುಂಬೈ
೩೯. ಚಂದ್ರಶೇಖರ.ಎಸ್. ಮತ್ತು ಸುರೇಂದ್ರರಾವ್.ಬಿ; ೨೦೧೬; ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು; ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು
೪೦. ಚಿದಾನಂದಮೂರ್ತಿ ಎಂ; ೨೦೧೨; ವಚನಸಾಹಿತ್ಯ; ಸಪ್ನ ಬುಕ್ ಹೌಸ್, ಬೆಂಗಳೂರು
೪೧. ಚಿದಾನಂದ ಸಾಲಿ; ೨೦೧೭; ಶಿಕ್ಷಣ ಮತ್ತು ಜೀವನ ಶೈಲಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೪೨. ಜವರಯ್ಯ ಮ.ನ; ೧೯೯೯; ವಚನವಾಹಿನಿ-೧ (ಪೀಠಾರೋಹಣ ರಜತ ಸಂಪುಟ-೧); ವೀರಶೈವ ಅಧ್ಯಯನ ಸಂಸ್ಥೆ ಡಂಬಳ, ಗದಗ

೪೩. ಜಯಚಂದ್ರ ಎಂ.ಎ; ೨೦೧೪; ಸವಣಸುತ್ತಮಂ (ಜೈನಧರ್ಮದ ಪ್ರಾತಿನಿಧಿಕ ಗ್ರಂಥ); ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೪೪. ಜಯಶ್ರೀ ದಂಡೆ; ೨೦೦೭; ಹಾಲತೊರೆ; ಬಸವ ಪ್ರಕಾಶನ, ಗುಲಬರ್ಗಾ

೪೫. ಜ್ಯೋತಿ ಶಂಕರ್; ೨೦೧೨; ದಾಸ ಸಾಹಿತ್ಯ(ಚೇತನ ಯುಗಾಂತರ ಕನ್ನಡ ಸಾಹಿತ್ಯ); ಚೇತನ ಬುಕ್ ಹೌಸ್, ಮೈಸೂರು

೪೬. ತಿಪ್ಪೇರುದ್ರಸ್ವಾಮಿ ಎಚ್; ೧೯೬೩; ಶರಣರ ಅನುಭಾವ ಸಾಹಿತ್ಯ; ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೪೭. ತಿಪ್ಪೇರುದ್ರಸ್ವಾಮಿ ಎಚ್; ೧೯೬೩; ಶೂನ್ಯತತ್ತ್ವವಿಕಾಸ ಮತ್ತು ಶೂನ್ಯ ಸಂಪಾದನೆ; ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ಮೈಸೂರು

೪೮. ತಿಪ್ಪೇರುದ್ರಸ್ವಾಮಿ ಎಚ್; ೧೯೮೫; ಶೂನ್ಯ ಸಂಪಾದನೆ ಮತ್ತು ಆಧುನಿಕ ಮೌಲ್ಯಗಳು; ಚಿತ್ತರಗಿ ಶ್ರೀವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಳಿ ಇಳಕಲ್ಲ

೪೯. ತಿಪ್ಪೇರುದ್ರಸ್ವಾಮಿ ಎಚ್; ೧೯೮೭; ವಚನ ಚಳುವಳಿ; ಶರಣ ಬಸವೇಶ್ವರ ಗ್ರಂಥ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

೫೦. ತಿಪ್ಪೇರುದ್ರಸ್ವಾಮಿ ಎಚ್; ೧೯೯೨; ಕರ್ನಾಟಕ ಸಂಸ್ಕೃತಿ ಸಮೀಕ್ಷೆ; ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು

೫೧. ತಿಪ್ಪೇರುದ್ರಸ್ವಾಮಿ ಎಚ್; ೧೯೯೩; ಕುವೆಂಪು ಅವರ ವೈಚಾರಿಕತೆ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೫೨. ತಿಪ್ಪೇರುದ್ರಸ್ವಾಮಿ ಎಚ್; ೨೦೦೪; ವಚನ ಸಾಹಿತ್ಯ ವೈಚಾರಿಕ ಅಧ್ಯಯನ; ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫೩. ತಿಪ್ಪೇರುದ್ರಸ್ವಾಮಿ ಎಚ್; ೨೦೧೧; ವೀರಶೈವ ವೈಚಾರಿಕ ವಿವೇಚನೆ; ಸಂವಹನ ಪ್ರಕಾಶನ, ಮೈಸೂರು

೫೪. ನರಸಿಂಹಮೂರ್ತಿ ಎಚ್.ವಿ; ೨೦೦೮; ಹಿಂದೂ ಧರ್ಮ ಮತ್ತು ಸಂಸ್ಕೃತಿ; ವಿಕಾಸ ಪ್ರಕಾಶನ, ಉಡುಪಿ

೫೫. ನಟರಾಜ ಹುಳಿಯಾರ; ೨೦೧೨; ತೆರೆದ ಪಠ್ಯ(ಕಿ.ರಂ. ನಾಗರಾಜರ ಆಯ್ದ ಬರಹಗಳು); ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೫೬. ನಟರಾಜ ಬೂದಾಳು; ೨೦೧೬; ಕನ್ನಡ ಕಾವ್ಯ ಮೀಮಾಂಸೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ

೫೭. ನಾರಾಯಣ. ಪಿ.ವಿ; ೧೯೮೩; ವಚನ ಸಾಹಿತ್ಯಃ ಒಂದು ಸಾಂಸ್ಕೃತಿಕ ಅಧ್ಯಯನ; ವಸಂತ ಪ್ರಕಾಶನ, ಬೆಂಗಳೂರು
೫೮. ನಾಗಭೂಷಣಸ್ವಾಮಿ. ಓ.ಎಲ್; ೧೯೯೭; ಇಂದಿನ ಹೆಜ್ಜೆ; ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ
೫೯. ನಾಗರಾಜ. ಡಿ.ಆರ್; ೧೯೯೯; ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ; ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ
೬೦. ನಾಗಭೂಷಣಸ್ವಾಮಿ ಓ.ಎಲ್. ಮತ್ತು ಇತರರು; ೨೦೦೦; ತತ್ತ್ವಪದಗಳು; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೬೧. ನಾವಡ.ಎ.ವಿ; ೨೦೦೨; ಈಸಬೇಕು ಇದ್ದು ಜಯಿಸಬೇಕು-ಸಮಾಜಮುಖಿ ಕೀರ್ತನೆಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೬೨. ನಾಗಭೂಷಣಸ್ವಾಮಿ ಓ.ಎಲ್; ೨೦೦೪; ವಚನ ಸಾವಿರ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೬೩. ನಾಗರತ್ನ ಟಿ.ಎನ್; ೨೦೦೪; ಶ್ರೀಪಾದರಾಯರು ಜೀವನ ಮತ್ತು ಕೃತಿಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೬೪. ನಾಗರತ್ನ. ಟಿ.ಎನ್; ೧೯೮೧; ಸಾಹಿತ್ಯ ರೂಪಗಳು, ಕಂ.ಅಂ.ಸಂ. ಕನ್ನಡ ಸಾಹಿತ್ಯ ಚರಿತ್ರೆ-೫; ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
೬೫. ನಾಗರಾಜ ಕಣಜನಹಳ್ಳಿ; ೨೦೦೪; ಅಜ್ಞಾತ ಅವಧೂತರು; ಸಿ.ವಿ.ಜಿ. ಪ್ರಕಾಶನ, ಬೆಂಗಳೂರು
೬೬. ನಾರಾಯಣ ಪಿ.ವಿ; ೨೦೦೭; ಅಧಿಕಾರ ಮೀಮಾಂಸೆ; ವಸಂತ ಪ್ರಕಾಶನ, ಬೆಂಗಳೂರು
೬೭. ನಾಗರಾಜ.ಎಂ; ೨೦೦೭; ವಚನ ಬೆಳಗು; ಸೃಷ್ಟಿ ಪಬ್ಲಿಕೇಷನ್, ಬೆಂಗಳೂರು
೬೮. ನಾಗೇಶ್ ಎಚ್.ವಿ; ೨೦೦೮; ಶರಣ ಸಮಾಜ- ಶರಣ ಸಮಾಜಶಾಸ್ತ್ರದ ಆಯಾಮಗಳು; ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ
೬೯. ನಾಗಭೂಷಣಸ್ವಾಮಿ. ಓ.ಎಲ್; ೨೦೧೩; ನುಡಿಯೊಳಗಾಗಿ; ಅಭಿನವ ಪ್ರಕಾಶನ, ಬೆಂಗಳೂರು
೭೦. ನಾಗಭೂಷಣಸ್ವಾಮಿ. ಓ.ಎಲ್; ೨೦೧೪; ವಚನ ವಿಚಾರ; ಅಲ್ಲಮ ಪ್ರಕಾಶನ, ಮೈಸೂರು
೭೧. ನಾವಡ ಎ.ವಿ; ೨೦೧೪; ಕನಕನ ಕಿಂಡಿ (ಕನಕದಾಸರ ಆಯ್ದ ಕೀರ್ತನೆಗಳಿಗೆ, ಮುಂಡಿಗೆಗಳಿಗೆ ಪ್ರಾಯೋಗಿಕ ವಿಮರ್ಶೆ); ಕನಕದಾಸ ಅಧ್ಯಯನ ಸಂಶೋಧನ ಪೀಠ, ಉಡುಪಿ.
೭೨. ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು; ೧೯೯೨; ಸಮಕಾಲೀನತೆ- ವಚನ- ಸಾಹಿತ್ಯ; ತರಳಬಾಳು ಪ್ರಕಾಶನ ಸಿರಿಗೆರಿ, ಚಿತ್ರದುರ್ಗ
೭೩. ಪ್ರತಾಪಚಂದ್ರ ಶೆಟ್ಟಿ ಹಳ್ನಾಡ್ ಮತ್ತು ಶಿವರಾಮ ಶೆಟ್ಟಿ.ಬಿ; ೨೦೦೭-೦೮; ಕನಕ ಚಿಂತನ; ಕನಕದಾಸ ಸಂಶೋಧನ ಕೇಂದ್ರ, ಮಂಗಳೂರು
೭೪. ಪ್ರಸಾದಸ್ವಾಮಿ.ಎಸ್; ೨೦೦೬; ನಿರ್ವಚನ; ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು

೭೫. ಪ್ರಭುಶಂಕರ; ೨೦೦೭; ಕೃತಿಶೀಲ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೭೬. ಪ್ರಭಾತ್ ಪಟ್ನಾಯಕ್, ರಾಜೇಂದ್ರ ಚೆನ್ನಿ ಮತ್ತು ಸೀತಾರಾಮ್ ಯೆಚುರಿ; ೨೦೧೮; ಉನ್ನತ ಶಿಕ್ಷಣದ ಮೇಲೆ ಗದಾ ಪ್ರಹಾರ; ಕ್ರಿಯಾ ಪುಸ್ತಕ, ಬೆಂಗಳೂರು
೭೭. ಪಾಟೀಲ.ಬಿ.ಎಸ್; ೧೯೯೬; ಶರಣರು ತೋರಿದ ದಾರಿ ಮತ್ತು ಗುರಿ; ಚಿತ್ತರಗಿ ಶ್ರೀವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಳಿ, ಇಳಕಲ್ಲ
೭೮. ಪಾಟೀಲ.ಎಂ.ಎಸ್. ಮತ್ತು ನಾಯಕ.ಡಿ.ಬಿ; ೨೦೦೩; ಕನ್ನಡದಲ್ಲಿ ಅನುಭಾವ ಸಾಹಿತ್ಯ; ಬಂಜಾರ ಪ್ರಕಾಶನ, ಗುಲಬರ್ಗಾ
೭೯. ಪಾಟೀಲ.ಆರ್.ವಿ. ಮತ್ತು ಬಿ.ಬಿ. ಡೆಂಗನವರ; ೨೦೧೪; ವಚನಗಳ ಪ್ರಸ್ತುತತೆ; ಸೌಮ್ಯ ಪ್ರಕಾಶನ, ವಿಜಯಪುರ
೮೦. ಪೋತೆ.ಎಚ್.ಟಿ; ೨೦೦೭; ವಿಚಾರ ಸಾಹಿತ್ಯ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೮೧. ಬಸವರಾಜು.ಎಲ್; ೨೦೦೬; ಅನುಚಿಂತನ; ತೇಜಸ್ವಿನಿ ಪ್ರಕಾಶನ, ಚೆನ್ನಪಟ್ಟಣ
೮೨. ಬಸವರಾಜ ಸಬರದ; ೧೯೯೨; ವಚನ ಚಳುವಳಿ; ಪಲ್ಲವಿ ಪ್ರಕಾಶನ, ಗುಲಬರ್ಗಾ
೮೩. ಬಸವರಾಜ ಸಬರದ; ೧೯೯೩; ಬಸವೇಶ್ವರ ಮತ್ತು ಪುರಂದರದಾಸ; ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ ಸಿರಿಗೆರೆ, ಚಿತ್ರದುರ್ಗ
೮೪. ಬಸವರಾಜ ಪುರಾಣಿಕ; ೧೯೯೯; ಅನುಪಮಚರಿತ ಅಲ್ಲಮಪ್ರಭುದೇವ; ಬಸವ ಸಮಿತಿ, ಬೆಂಗಳೂರು
೮೫. ಬಸವರಾಜ ಸಬರದ; ೨೦೦೦; ಹೈದರಾಬಾದ ಕರ್ನಾಟಕದ ತತ್ತ್ವಪದಗಳು; ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೮೬. ಬಸವರಾಜ ಕಲ್ಗುಡಿ; ೨೦೦೬; ಸುವರ್ಣ ವಿಚಾರ ಸಾಹಿತ್ಯ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು
೮೭. ಬಸುಪಟ್ಟದ.ಎಸ್.ಎಸ್; ೨೦೦೮; ನಿಜಗುಣ ಶಿವಯೋಗಿಗಳು ಜೀವನ- ಸಾಧನೆ; ಕರ್ನಾಟಕ ಸಂಶೋಧನ ಮಂಡಲ, ಧಾರವಾಡ
೮೮. ಬಸವರಾಜ. ವೀ. ಮೋದಿ; ೨೦೦೮; ವಚನಾಂತರಾಳ; ಸ್ನೇಹ ಪ್ರಕಾಶನ, ಬೆಂಗಳೂರು
೮೯. ಬಸವರಾಜ ಕಲ್ಗುಡಿ; ೨೦೧೩; ಅನುಭಾವ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ; ಕೆ.ಬಿ. ಪ್ರಗತಿ ಬರಹ ಪಬ್ಲಿಕೇಷನ್ ಹೌಸ್, ಬೆಂಗಳೂರು
೯೦. ಮಠ.ಕೆ.ಎಸ್; ೧೯೮೯; ಶರಣರು ಕಂಡ ಅನುಭಾವ; ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ ಮೂರುಸಾವಿರ ಮಠ, ಹುಬ್ಬಳ್ಳಿ
೯೧. ಮಧುಮತಿ ದೇಶಪಾಂಡೆ; ೨೦೦೪; ಮೋಹನದಾಸರು ಜೀವನ ಮತ್ತು ಕೃತಿ ದರ್ಶನ; ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ, ಶ್ರೀ ರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ

೯೨. ಮರಿಸ್ವಾಮಿ.ಎಂ; ೨೦೦೫; ಬೆಳಕಿನ ಧಮ್ಮ; ರೂಪ ಪ್ರಕಾಶನ, ಮೈಸೂರು
೯೩. ಮರಿದೇವರು.ಸಿ.ಹೆಚ್; ೨೦೦೯; ಶಿಕ್ಷಣ ತತ್ತ್ವಶಾಸ್ತ್ರ (ಶಿಕ್ಷಣಕ್ಕೆ ತಾತ್ತ್ವಿಕ, ಸಾಮಾಜಿಕ, ಐತಿಹಾಸಿಕ, ಜೈವಿಕ ಬುನಾದಿ ಮತ್ತು ಉದಯೋನ್ಮುಖ ಭಾರತದಲ್ಲಿನ ಶಿಕ್ಷಣ); ಉದಯಭಾನು ಪ್ರಕಾಶನ, ತುಮಕೂರು
೯೪. ಮಹೇಶನ್. ಮ; ೨೦೦೨; ಜಾಗತೀಕರಣ; ನವಕರ್ನಾಟಕ ಪ್ರಕಾಶನ, ಬೆಂಗಳೂರು
೯೫. ಮಲ್ಲಿಕಾರ್ಜುನ ಕಡಕೋಳ; ೨೦೧೪; ಕಡಕೋಳ ಮಡಿವಾಳಪ್ಪನವರ ತತ್ವಪದಗಳು; ಶ್ರೀ ವೀರೇಶ್ವರ ಪ್ರಕಾಶನ, ಕಡಕೋಳ
೯೬. ಮಹಾದೇವಯ್ಯ.ಪಿ; ೨೦೧೪; ಸರ್ವಜ್ಞ ತೌಲನಿಕ ಅಧ್ಯಯನಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೯೭. ಮೀನಾಕ್ಷಿ ಬಾಳಿ; ೨೦೧೦; ಮನದ ಸೂತಕ ಹಿಂಗಿದೊಡೆ(ಮಹಿಳಾಪರ ಹುಡುಕಾಟ); ಚಿಂತನ ಪುಸ್ತಕ, ಬೆಂಗಳೂರು
೯೮. ಮೊಗಳ್ಳಿ ಗಣೇಶ; ೨೦೦೮; ನಡುಗಾಲದ ಕನ್ನಡ ನಾಡು(ಏಕೀಕರಣೋತ್ತರ ಕನ್ನಡ ಸಾಹಿತ್ಯ ಸಂಸ್ಕೃತಿ ಕಥನ); ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೯೯. ರಹಮತ್ ತರೀಕೆರೆ; ೨೦೦೬; ಕರ್ನಾಟಕದ ನಾಥಪಂಥ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೧೦೦. ರಹಮತ್ ತರೀಕೆರೆ; ೨೦೦೬; ಕತ್ತಿಯಂಚಿನ ದಾರಿ; ಅಭಿನವ ಪ್ರಕಾಶನ ವಿಜಯನಗರ, ಬೆಂಗಳೂರು
೧೦೧. ರಹಮತ್ ತರೀಕೆರೆ; ೨೦೦೮; ಕರ್ನಾಟಕದ ಸೂಫಿಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೧೦೨. ರಮೇಶ.ಬೆ.ಗೋ; ೨೦೧೦; ಸರ್ವಜ್ಞನ ಸಾವಿರ ವಚನಗಳು; ತನುಮನು ಪ್ರಕಾಶನ, ಮೈಸೂರು
೧೦೩. ರಂಜಾನ್ ದರ್ಗಾ; ೨೦೧೦; ನಡೆ–ನುಡಿ ಸಿದ್ಧಾಂತ; ಲೋಹಿಯಾ ಪ್ರಕಾಶನ, ಬಳ್ಳಾರಿ.
೧೦೪. ರಂಜಾನ್ ದರ್ಗಾ; ೨೦೧೩; ಜಾತಿ ವ್ಯವಸ್ಥೆಗೆ ಸವಾಲಾದ ಶರಣರು; ಲೋಹಿಯಾ ಪ್ರಕಾಶನ, ಬಳ್ಳಾರಿ
೧೦೫. ರಂಜಾನ್ ದರ್ಗಾ; ೨೦೧೪; ವಚನ ಬೆಳಕು; ಗಂಗ ಪ್ರಕಾಶನ, ಬೆಂಗಳೂರು
೧೦೬. ರಾಜಗೋಪಾಲಾಚಾರ್ಯ.ಎಸ್. ಮತ್ತು ಜಯಲಕ್ಷ್ಮಿ ಮಂಗಳಮೂರ್ತಿ; ೨೦೦೪; ಹೈದರಾಬಾದ್ ಕರ್ನಾಟಕ ಆಧುನಿಕ ದಾಸಸಾಹಿತ್ಯ; ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ, ಶ್ರೀ ರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ
೧೦೭. ರಾಜಪುರೋಹಿತ. ಬಿ.ಬಿ; ೨೦೧೦; ಶೈಲಿ ವಿಜ್ಞಾನ ಮತ್ತು ಜ್ಞಾನಶಾಸ್ತ್ರ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೦೮. ರಾಜಶೇಖರ ಜಮದಂಡಿ; ೨೦೧೩; ಮೋಳಿಗೆ ಮಾರಯ್ಯನವರ ವಚನಗಳ ದೀಪಿಗೆ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೧೦೯. ರಾಮಶೇಷನ್. ಎನ್.ಕೆ; ೧೯೯೧; ಹರಿದಾಸ ಆಂದೋಲನಃ ಒಂದು ಅಧ್ಯಯನ; ಮಿತ್ರ ಪ್ರಕಾಶನ, ವಿದ್ಯಾರಣ್ಯಪುರಂ ಮೈಸೂರು
೧೧೦. ರಾಮಚಂದ್ರರಾವ್. ಸಾ.ಕೃ; ೨೦೦೩; ದಾಸ ಸಾಹಿತ್ಯ ಮತ್ತು ಸಂಸ್ಕೃತಿ; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
೧೧೧. ರಾ.ಗೌ. ೨೦೧೩; ಸರ್ವಜ್ಞನ ಸಮಗ್ರ ತ್ರಿಪದಿಗಳು; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೧೧೨. ರುದ್ರಾರಾಧ್ಯ. ಆರ್; ೨೦೦೯; ಉದಯೋನ್ಮುಖ ಭಾರತದಲ್ಲಿ ಶಿಕ್ಷಣದ ಮೂಲತತ್ವಗಳು; ಶ್ರೀರಕ್ಷ ಪ್ರಕಾಶನ, ತುಮಕೂರು
೧೧೩. ಲಕ್ಕಪ್ಪಗೌಡ. ಎಚ್.ಜೆ; ೨೦೦೪; ಕನಕ ಮುಖಗಳು; ವಿದ್ಯಾನಿಧಿ ಪ್ರಕಾಶನ, ಗದಗ
೧೧೪. ಲಕ್ಕಪ್ಪಗೌಡ. ಎಚ್.ಜೆ; ೨೦೦೭; ಸಾಹಿತ್ಯ ಶೋಧನ (ಹೊನ್ನಾರು ಮಾಲೆ); ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೧೧೫. ಲಿಂಗದೇವರು ಹಳೆಮನೆ; ೨೦೦೯; ಹಿಂದಣ ಅನಂತ; ನಿರಂತರ ಪ್ರಕಾಶನ, ಮೈಸೂರು
೧೧೬. ವಸಂತ ಕುಷ್ಟಗಿ; ೨೦೦೩; ಪುರಂದರದಾಸರ ಉಗಾಭೋಗಗಳು ಮತ್ತು ಸುಳಾದಿಗಳು (ಸಮಗ್ರ ದಾಸಸಾಹಿತ್ಯ-೪); ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
೧೧೭. ವಿಜಯಶ್ರೀ ಸಬರದ; ೨೦೦೧; ವಚನವಾಹಿನಿ; ಪಲ್ಲವಿ ಪ್ರಕಾಶನ, ಗುಲಬರ್ಗಾ
೧೧೮. ವಿಜಯಾದೇವಿ; ೨೦೦೪; ಭಕ್ತಿ ಪರಂಪರೆ ಮತ್ತು ಸಾಹಿತ್ಯ; ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು
೧೧೯. ವಿದ್ಯಾಶಂಕರ.ಎಸ್; ೨೦೦೮; ಶಬ್ದ ಸಂಪುಟ (ವೀರಶೈವ ಧರ್ಮ-ಸಮಾಜ ಸಂಸ್ಕೃತಿ ಕುರಿತ ಚಿಂತನೆಗಳು); ಅಮೂಲ್ಯ ಕಾರ್ತಿಕ ಪ್ರಕಾಶನ ಹಂಪಿನಗರ, ವಿಜಯನಗರ, ಬೆಂಗಳೂರು
೧೨೦. ವಿದ್ಯಾರತ್ನ ಶ್ರೀ ರಾ.ಸ್ವಾಪಂಚಮುಖಿ; ೨೦೦೭-೦೮; ಕರ್ನಾಟಕದ ಹರಿದಾಸ ಸಾಹಿತ್ಯ; ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ
೧೨೧. ವಿಜಯಕುಮಾರ್.ಎಂ.ಬೋರಟ್ಟಿ; ೨೦೧೧; ಹಿರಿಯರ ಹಿರಿತನ ಹಿಂದೇನಾಯಿತು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೧೨೨. ವೀರೇಂದ್ರ ಹೆಗ್ಗಡೆ.ಡಿ; ೧೯೯೮; ಧರ್ಮ ಮತ್ತು ಸಮಾಜ; ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ
೧೨೩. ವೀಣಾ ಬನ್ನಂಜೆ; ೨೦೦೭; ಅಕ್ಕಮಹಾದೇವಿಯ ದ್ವೈತ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೨೪. ವೀರೇಶ ಬಡಿಗೇರ; ೨೦೧೩; ಸರ್ವಜ್ಞನ ಸಾಹಿತ್ಯ ಕುರಿತ ಅಧ್ಯಯನಗಳು; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೨೫. ವೀರಣ್ಣ.ಸಿ; ೧೯೯೯; ಕನ್ನಡ ಕಾವ್ಯ ಕಂಡ ಹೆಣ್ಣು; ನವ ಕರ್ನಾಟಕ ಪ್ರಕಾಶನ, ಬೆಂಗಳೂರು

೧೨೬. ವೀರಣ್ಣ ದಂಡೆ; ೨೦೧೪; ಕನ್ನಡ ಕಾವ್ಯ ಮೀಮಾಂಸೆ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೨೭. ವೀರಣ್ಣ.ಸಿ; ೨೦೧೫; ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ-೧ ಮತ್ತು ೨; ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು

೧೨೮. ವೆಂಕಪ್ಪ ರಾಮಪ್ಪ ಮೋರೆ ಮತ್ತು ನಾಗಪ್ಪ.ಪ. ಶಹಪೂರು; ೨೦೧೧; ತಾತ್ತ್ವಿಕ ಮತ್ತು ಸಾಮಾಜಿಕ ತಳಹದಿಯ ಮೇಲೆ ಶಿಕ್ಷಣ;

೧೨೯. ವೆಂಕಟೇಶಮೂರ್ತಿ.ಎಚ್.ಎಸ್; ೨೦೧೨; ಕೀರ್ತನಕಾರರು; ಸಪ್ನ ಬುಕ್ ಹೌಸ್, ಬೆಂಗಳೂರು

೧೩೦. ಶಾಂತರಸ ಹೆಂಬೇರಾಳು; ೨೦೦೭; ಉಲಿವಮರ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೩೧. ಶಾಂತಕುಮಾರ.ಕೆ.ಎನ್; ೨೦೧೪; ವಚನ ಸಾಹಿತ್ಯ ಸಂವಾದ; ಪ್ರಜಾವಾಣಿ ಪ್ರಕಾಶನ, ಬೆಂಗಳೂರು

೧೩೨. ಶಿವರುದ್ರಪ್ಪ. ಜಿ.ಎಸ್; ೧೯೮೨; ವಿಮರ್ಶೆಯ ದಾರಿ-೧; ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೧೩೩. ಶಿವಾನಂದ ಗುಬ್ಬಣ್ಣನವರ; ೨೦೦೨; ಶಿಶುನಾಳ ಶರೀಫರ ಗೀತೆಗಳು; ಅಕ್ಷಯ ಪ್ರಕಾಶನ, ಧಾರವಾಡ

೧೩೪. ಶಿವಕುಮಾರಸ್ವಾಮಿ ಎಂ; ೧೯೯೮; ಶರಣ ಜಗತ್ತು (ಅಭಿನಂದನ ಗ್ರಂಥ); ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು, ಮೈಸೂರು

೧೩೫. ಶಿವರುದ್ರಪ್ಪ ಎ.ಎಲ್; ೧೯೯೮; ಶರಣ ಧರ್ಮದಲ್ಲಿ ವಿಶ್ವತತ್ತ್ವದ ಮೌಲ್ಯಗಳು; ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೩೬. ಶಿವಾನಂದ ಎಸ್. ವಿರಕ್ತಮಠ; ೨೦೦೫; ಅಮರ ಕಲ್ಯಾಣ; ನುಡಿ ಪ್ರಕಾಶನ; ಹೊಸಪೇಟೆ

೧೩೭. ಶ್ರೀನಿವಾಸ ಹಾವನೂರು; ೨೦೦೬; ಮಧ್ಯಕಾಲೀನ ಕರ್ನಾಟಕ; ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮಾನಸಗಂಗೋತ್ರಿ, ಮೈಸೂರು

೧೩೮. ಶ್ರೀನಿವಾಸಮೂರ್ತಿ ಎಂ.ಆರ್; ೨೦೦೩; ವಚನ ಧರ್ಮಸಾರ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೩೯. ಶ್ರೀನಿವಾಸ ಹಾವನೂರ ಮತ್ತು ಅರಳುಮಲ್ಲಿಗೆ ಪಾರ್ಥಸಾರಥಿ; ೨೦೦೩; ಶ್ರೀ ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಯರ ಕೀರ್ತನೆಗಳು; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೧೪೦. ಶ್ರೀಧರ. ವೈ.ಎಸ್; ೨೦೦೯; ಶಿಕ್ಷಣದ ತಾತ್ವಿಕ ನೆಲೆ; ಅನುರಾಧ ಪ್ರಕಾಶನ, ಬೆಂಗಳೂರು
೧೪೧. ಶೇಖರ ಎಂ.ಎಸ್; ೨೦೦೬; ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮಾನವಪರ ಧೋರಣೆಗಳು; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೧೪೨. ಶೇಷ ನವರತ್ನ; ೧೯೯೮; ಜಾಗತಿಕ ಧರ್ಮಗಳು; ಸಮಾಜ ಪುಸ್ತಕಾಲಯ, ಧಾರವಾಡ
೧೪೩. ಸರದೇಸಾಯಿ ಎಸ್.ಜಿ.(ಮರಾಠಿ ಮೂಲ) ಮತ್ತು ಗೌರೀಶ್ ಕಾಯ್ಕಿಣಿ(ಕನ್ನಡ ಅನುವಾದ); ೧೯೯೪; ಭಾರತೀಯ ತತ್ತ್ವಜ್ಞಾನ: ವೈಚಾರಿಕ ಮತ್ತು ಸಾಮಾಜಿಕ ಸಂಘರ್ಷ; ನವ ಕರ್ನಾಟಕ ಪ್ರಕಾಶನ, ಬೆಂಗಳೂರು
೧೪೪. ಸರದೇಸಾಯಿ ಎಸ್.ಜಿ; ೨೦೦೨; ಪ್ರಾಚೀನ ಭಾರತದಲ್ಲಿ ದಾರ್ಶನಿಕ ಸಂಘರ್ಷ ಮತ್ತು ಅದರ ಸಾಮಾಜಿಕ ಮಹತ್ವ; ನವ ಕರ್ನಾಟಕ ಪ್ರಕಾಶನ, ಬೆಂಗಳೂರು
೧೪೫. ಸಿದ್ಧಲಿಂಗಯ್ಯ ಜಿ.ಎಸ್; ೧೯೯೭; ವಚನ ವಾಙ್ಮಯ ಮತ್ತು ಭಾಷೆ; ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು
೧೪೬. ಸಿದ್ಧಲಿಂಗ ದಬ್ಬಾ; ೨೦೧೩; ನುಡಿಗಡಣ; ಪ್ರಾಂಜಲ ಪ್ರಕಾಶನ, ಗುಲ್ಬರ್ಗಾ
೧೪೭. ಸಿದ್ಧರಾಮಯ್ಯ ಎಸ್.ಜಿ; ೨೦೧೩; ವಚನ ಸಂಸ್ಕೃತಿ–ಸಾಹಿತ್ಯ ಸಂಗತಿ; ಸಪ್ನ ಬುಕ್ ಹೌಸ್, ಬೆಂಗಳೂರು
೧೪೮. ಸಿದ್ಧಣ್ಣ. ಎಫ್. ಜಕಬಾಳ; ೨೦೧೫; ಕನಕದಾಸರು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೧೪೯. ಸಿದ್ಧಯ್ಯ ಪುರಾಣಿಕ; ಶರಣ ಸರಣಿ; ಶ್ರೀತರಳಬಾಳು ಜಗದ್ಗುರು ಬೃಹನ್ಮಠ ಸಿರಿಗೇರಿ, ಚಿತ್ರದುರ್ಗ
೧೫೦. ಸೀತಾರಾಮಯ್ಯ ವಿ. ಮತ್ತು ವೆಂಕಟಸುಬ್ಬಯ್ಯ; ೨೦೧೨; ದಾಸ ಸಾಹಿತ್ಯ; ಸಪ್ನ ಬುಕ್ ಹೌಸ್, ಬೆಂಗಳೂರು
೧೫೧. ಸುಧಾಕರ; ೨೦೦೩; ಕನಕದಾಸರ ಕೀರ್ತನೆಗಳು ಭಾಗ–೨(ಸಮಗ್ರ ದಾಸಸಾಹಿತ್ಯ ಸಂ.೫ ಭಾಗ–೨); ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
೧೫೨. ಸುಪ್ರಿಯಾ ನಾಗರಹಳ್ಳಿ; ೨೦೧೭; ಪುರಂದರದಾಸರ ಪ್ರತಿಮಾಲೋಕ(ಪ್ರಕಟಿತ ಮಹಾ ಪ್ರಬಂಧ); ರಾಷ್ಟ್ರೀಯ ವೇದವಿಜ್ಞಾನ ಸಂಸ್ಥೆ, ಬೆಂಗಳೂರು
೧೫೩. ಹಳ್ಳಿಕೇರಿ ಎಫ್.ಟಿ; ೨೦೦೬; ಚಿದಾನಂದಾವಧೂತ ಚಾರಿತ್ರ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೧೫೪. ಹಿರೇಮಠ ಆರ್.ಸಿ; ೧೯೭೩; ಅಮೃತ ಬಿಂದುಗಳು; ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೫೫. ಹೀರೆಮಠ.ಎಸ್.ಎಸ್; ೨೦೦೫; ಸಮಾಜ ಸಂಸ್ಕೃತಿ ಸಂಘರ್ಷ(ವೈಚಾರಿಕ ಲೇಖನಗಳು ಸಂಪುಟ–೧); ಸಿವಿಜಿ ಪ್ರಕಾಶನ, ಬೆಂಗಳೂರು

೧೫೬. ಹಿರೇಮಠ.ಬಿ.ಕೆ; ೨೦೧೪; ಉಲುಹಿನ ವೃಕ್ಷದ ನೆರಳು (ಶ್ರೀ ನಿರುಪಾಧೀಶ ವಚನ ಸಮಗ್ರ); ಅನಿಮಿಷ ಪ್ರಕಾಶನ, ಬಾಗಲಕೋಟೆ
೧೫೭. ಹುಲ್ಲೋಳಿ. ಎಂ.ಎಸ್; ೧೯೮೪; ಧರ್ಮ ಮತ್ತು ವಿಜ್ಞಾನ; ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ ಮೂರು ಸಾವಿರ ಮಠ ಹುಬ್ಬಳ್ಳಿ

## ಇ. ಲೇಖನಗಳು

೧. ಆನಂದ ಝುಂಜರವಾಡ; ೨೦೦೬; ಮಾಧ್ವ ತತ್ವಜ್ಞಾನಃ ಅನುಸಂಧಾನ ಆಧುನಿಕ ಸಮಸ್ಯೆಗಳು, (ಪುಟ–೭೩); ನಾವಡ. ಎ.ವಿ. (ಸಂ); ಕನ್ನಡ ಅಧ್ಯಯನ, ಸಂಪುಟ–೧೨, ಸಂಚಿಕೆ–೧,ಜನವರಿ–ಜೂನ್–೨೦೦೬; ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೨. ಆಶಾದೇವಿ. ಎಂ.ಎಸ್; ಭಾನುವಾರ ೧೨, ಅಕ್ಟೋಬರ್–೨೦೧೪; ಕವಡೆ ಮತ್ತು ಕೌಶಲ; ಪ್ರಜಾವಾಣಿ ಸಾಪ್ತಾಹಿಕ ಪುರವಣಿ
೩. ಆಶಾದೇವಿ. ಎಂ.ಎಸ್; ಭಾನುವಾರ ೧೬, ನವೆಂಬರ್–೨೦೧೪; ಹರುಷದ ಧೈರ್ಯವುಳ್ಳ ಹೆಣ್ಣು; ಪ್ರಜಾವಾಣಿ ಸಾಪ್ತಾಹಿಕ ಪುರವಣಿ
೪. ಆಶಾದೇವಿ. ಎಂ.ಎಸ್; ೨೦೧೬; ಸ್ತ್ರೀವಾದ: ಜ್ಞಾನಮೀಮಾಂಸೆಯಿಂದ ಲೋಕಮೀಮಾಂಸೆಯ ಕಡೆಗೆ(ಲೇಖನ), ಬೆಳಕಿಗಿಂತ ಬೆಳ್ಳಗೆ(ಪುಸ್ತಕ); ಸಾಹಿತ್ಯ ಅಕಾಡೆಮಿ, ಬೆಂಗಳೂರು
೫. ಉಮೇಶ. ಎಚ್.ಎಸ್; ೨೦೦೮; ಜ್ಞಾನವುದಿಸಿದ ಮಹಾತ್ಮನು ಕನ್ನಡಿಯಂತೆ ಸರ್ವಜ್ಞ(ಲೇಖನ); ಕುರುಹು ತೋರಿದ ಗುರು(ಪುಸ್ತಕ); ವಿಸ್ಮಯ ಪ್ರಕಾಶನ, ಮೈಸೂರು
೬. ಉಷಾ ಎಸ್. ಗದ್ದಗಿಮಠ; ೨೦೧೪; ಡಾ. ಗದ್ದಗಿಮಠರ ದೃಷ್ಠಿಯಲ್ಲಿ ಮಠಗಳು ಮತ್ತು ‘ಕಾಯಕ ಶಿಕ್ಷಣ’ (ಪು–೨೪೧); ವೀರೇಶ ಬಡಿಗೇರ(ಸಂ); ಹಸ್ತಪ್ರತಿ ವ್ಯಾಸಂಗ–೧೩; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ
೭. ಗೀತಾವಸಂತ ಇಜಿಮಾನ್; ೨೦೧೮; ತಂತ್ರಜ್ಞಾನ ಹಾಗೂ ನಮ್ಮತನದ ಹುಡುಕಾಟ; ಪ್ರಜಾವಾಣಿ ಪತ್ರಿಕೆ
೮. ಗುಂಡೂರ.ಎನ್.ಎಸ್; ಬುಧವಾರ ಅಕ್ಟೋಬರ್ ೨೪, ೨೦೧೮; ಉನ್ನತ ಶಿಕ್ಷಣದಲ್ಲಿ ‘ಉನ್ನತ’ ಹಾಗೂ ‘ಜ್ಞಾನ’ ಎಂದರೇನು?; ಪ್ರಜಾವಾಣಿ ಪತ್ರಿಕೆ
೯. ಗೋವಿಂದರಾವ್. ಜಿ.ಕೆ; ೨೦೦೫; ಜ್ಞಾನ, ಅನುಭವ ಮತ್ತು ಸಾಹಿತ್ಯ; ರಾಘವೇಂದ್ರರಾವ್. ಎಚ್.ಎಸ್.(ಸಂ); ಹೊಸತು ವಾಚಿಕೆ; ಸಾಹಿತ್ಯ ಸಂವಾದ; ನವ ಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು
೧೦. ಗೋಕುಲನಾಥ.ಕೆ; ೨೦೦೭; ಕೀರ್ತನಕಾರರ ಸಾಹಿತ್ಯ ಮೀಮಾಂಸೆ; ಸಬಿಹಾ ಭೂಮಿಗೌಡ(ಸಂ); ಕನ್ನಡ ಸಾಹಿತ್ಯ ಮೀಮಾಂಸೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೧. ಚಂದ್ರಶೇಖರ ನಂಗಲಿ; ೧೯೯೮; ತತ್ವಪದಗಳ ಭಾಷೆ ಮತ್ತು ಬಂಧ; ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್ ಬೆಂಗಳೂರು

೧೨. ಚಂದ್ರಶೇಖರ ನಂಗಲಿ; ೧೯೯೮; ಕಾಯಕದ ವಚನಗಳನ್ನು ಕುರಿತು; ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್ ಬೆಂಗಳೂರು

೧೩. ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು(ಸಂ); ೧೯೯೨; ಜೀವನ ಶಿಕ್ಷಣ(ಲೇಖನ); ಸಮಕಾಲೀನತೆ-ವಚನ ಸಾಹಿತ್ಯ(ಪುಸ್ತಕ); ತರಳಬಾಳು ಪ್ರಕಾಶನ, ಚಿತ್ರದುರ್ಗ

೧೪. ಪ್ರಶಾಂತ್.ಎಚ್.ಡಿ; ಅಗಸ್ಟ್-೨೦೧೫, ಸಂವಾದ ಸಂಪುಟ-೧೩, ಸಂಚಿಕೆ-೧೦; ಶಾಲಾ ಶಿಕ್ಷಣ ಮತ್ತು ಭಾಷೆ(ಲೇಖನ), ಮಾರುಕಟ್ಟೆ ಆರ್ಥಿಕ ವಿಜ್ಞಾನ(ಮಾಸಪತ್ರಿಕೆ)

೧೫. ಬಸವರಾಜ ಮಲಶೆಟ್ಟಿ; ೧೯೯೯; ಸ್ವರವಚನ ಸಾಹಿತ್ಯ: ಒಂದು ಮರುವಿಚಾರ; ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು

೧೬. ಬಸವರಾಜ ಬಲ್ಲೂರು; ೨೦೦೬; ಅನುಭವ ಮಂಟಪ ಮತ್ತು ಶಿಕ್ಷಣ; ಗೊ.ರು. ಚನ್ನಬಸಪ್ಪ ಮತ್ತು ಗುರುಲಿಂಗಪ್ಪ ದಬಾಲೆ(ಸಂ); ವಿಶ್ವಗುರು ಬಸವಧರ್ಮ ಪ್ರಚಾರ ಕೇಂದ್ರ ಹುಲಸೂರು

೧೭. ಮಲ್ಲಿಕಾರ್ಜುನ ವಣೇನೂರ; ೧೯೯೯; ತತ್ತ್ವಪದಕಾರ ಶೀಲವೇರಿ ಶಿವಪ್ಪ(ಪುಟ-೨೪); ರಹಮತ್ ತರೀಕೆರೆ(ಸಂ); ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೮. ರಹಮತ್ ತರೀಕೆರೆ; ೨೦೦೪; ಶಿವಶರಣರು, ಸೂಫಿ ಸಂತರು; ಚನ್ನಬಸಪ್ಪ. ಗೊ.ರು. ಮತ್ತು ಚಿಕ್ಕರಿಯಪ್ಪ.ಜಿ.ಪಿ(ಸಂ); ಶರಣರ ತತ್ತ್ವಚಿಂತನೆ; ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

೧೯. ರಹಮತ್ ತರೀಕೆರೆ; ೨೦೦೬; ಮುಸ್ಲಿಂ ತತ್ತ್ವಪದಕಾರರುಃ ಹೀಗೆನ್ನುವುದು ಯಾಕೆ ಕಷ್ಟ(ಲೇಖನ); ಕತ್ತಿಯಂಚಿನ ದಾರಿ(ಪುಸ್ತಕ); ಅಭಿನವ ಪ್ರಕಾಶನ, ವಿಜಯನಗರ ಬೆಂಗಳೂರು

೨೦. ವಿನಯಾ ವಕ್ಕುಂದ; ೨೦೦೭; ವಚನಕಾರರ ಸಾಹಿತ್ಯ ಮೀಮಾಂಸೆ; ಸಬಿಹಾ ಭೂಮಿಗೌಡ(ಸಂ); ಕನ್ನಡ ಸಾಹಿತ್ಯ ಮೀಮಾಂಸೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೧. ವೀರೇಶ ಬಡಿಗೇರ; ಮಾರ್ಚ್-೨೦೦೯; ತತ್ವಪದಕಾರರಲ್ಲಿ ವಿದ್ಯೆಯ ಸಂಕಥನ(ಲೇಖನ); ರಾಮಕೃಷ್ಣ. ಜಿ(ಸಂ); ಹೊಸತು ವಾಚಿಕೆ; ನವಕರ್ನಾಟಕ ಪ್ರಕಾಶನ, ಬೆಂಗಳೂರು

೨೨. ಮುರಳೀಧರ. ಎಚ್.ಎನ್; ೨೦೧೦; ಈ ಪರಿಯ ಸೊಬಗು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

೨೩. ಸುರೇಶ್ ನಾಗಲಮಡಿಕೆ; ೨೦೦೮; ಕನಕದಾಸರ ಒಂದು ಕೀರ್ತನೆಯಲ್ಲಿ ಅನುಭಾವದ ನೆಲೆ(ಪುಟ-೧೨೫); ಅಮರೇಶ ನುಗಡೋಣಿ(ಸಂ); ಕನ್ನಡ ಅಧ್ಯಯನ ಸಂಪುಟ-೧೪, ಸಂಚಿಕೆ-೧೧, ಜನವರಿ-ಜೂನ್-೨೦೦೮; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

ಈ. ಪ್ರಬಂಧಗಳು

ಎಂ.ಫಿಲ್. ಪ್ರಬಂಧಗಳು

೧. ಉಮಾ ಮಹೇಶ್ವರಿ; ೨೦೦೮; ಅಂಬಿಗರ ಚೌಡಯ್ಯನ ವಚನಗಳಲ್ಲಿ ಸಾಹಿತ್ಯಿಕ ಅಧ್ಯಯನ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೨. ದೇವಕಿ ಪ್ರಸನ್ನ.ಜಿ.ಎಸ್; ೨೦೦೮; ಅಕ್ಕಮಹಾದೇವಿ ಮತ್ತು ಮೀರಾಬಾಯಿ ಒಂದು ತೌಲನಿಕ ಅಧ್ಯಯನ; ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ, ಬೆಂಗಳೂರು

೩. ನಂದಿನಿ.ಎನ್; ೨೦೧೦; ಕಿರು ವಚನಕಾರ್ತಿಯರುಃ ಒಂದು ಅಧ್ಯಯನ; ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರು

೪. ನಾಗರತ್ನ. ಎಸ್; ೨೦೦೭; ಅಲ್ಲಮನ ವಚನಗಳಲ್ಲಿ ಆಚರಣೆಗಳ ನಿರಾಕರಣೆಯ ನೆಲೆಗಳ ಶೋಧ; ಕಾವ್ಯ ಮಂಡಲ, ಬೆಂಗಳೂರು

೫. ನಾಗೇಶ. ಸಿ.ಎಸ್; ೨೦೦೮-೦೯; ಸರ್ವಜ್ಞನ ವಚನಗಳ ಸಾಮಾಜಿಕ ವಿಶ್ಲೇಷಣೆ; ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನ ಕೇಂದ್ರ, ಕರ್ನಾಟಕ ಸಂಘ, ಮಂಡ್ಯ

೬. ನಾಗೇಶ.ಆರ್; ೨೦೧೨; ಬಸವಣ್ಣನವರ ವಚನಗಳಲ್ಲಿ ನೈತಿಕ ಪ್ರಜ್ಞೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೭. ಪುಷ್ಪಲತಾ.ಕೆ.ಪಿ; ೨೦೦೮; ವಚನಕಾರ್ತಿಯರು ಮತ್ತು ಅವರ ವೃತ್ತಿ ವೈವಿಧ್ಯ; ಕಾವ್ಯ ಮಂಡಲ, ಬೆಂಗಳೂರು

೮. ಪ್ರತಿಮಾ.ಎಂ.ಸಿ; ೨೦೦೬; ವಚನಕಾರ್ತಿಯರಲ್ಲಿ ಪ್ರತಿಭಟನೆಯ ನೆಲೆಗಳು; ಕಾವ್ಯ ಮಂಡಲ, ಬೆಂಗಳೂರು

೯. ಮಲ್ಲಿಕಾ.ಎಂ.ಆರ್; ೨೦೦೭-೦೮; ಅಲ್ಲಮನ ವಚನಗಳಲ್ಲಿ ಅರಿವಿನ ಸಂಕಥನ; ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ, ಬಲ್ಮಠ ಮಂಗಳೂರು

೧೦. ರಾಜ.ಬಿ.ಎಂ. ೨೦೦೭; ದೇವರ ದಾಸಿಮಯ್ಯನ ವಚನಗಳು ಒಂದು ಮರು ಚಿಂತನೆ; ಕಾವ್ಯ ಮಂಡಲ, ಬೆಂಗಳೂರು

೧೧. ರೂಪ.ಎಚ್.ಸಿ; ೨೦೦೭; ಅಕ್ಕಮಹಾದೇವಿಯ ವಚನಗಳಲ್ಲಿ ಸಂವೇದನೆಯ ಸ್ವರೂಪ; ಕರ್ನಾಟಕ ಸಂಘ, ಮಂಡ್ಯ

೧೨. ರೇಖಾ. ಎಚ್.ಎಂ; ೨೦೧೨-೧೩; ಪುರಂದರದಾಸ ಮತ್ತು ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ವಿಡಂಬನೆ: ಒಂದು ಅಧ್ಯಯನ; ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಜಯಲಕ್ಷ್ಮಿಪುರಂ, ಮೈಸೂರು

೧೩. ವಾಗೀಶ. ಎನ್. ಶಾಸ್ತ್ರೀ; ೨೦೦೮; ಸಂತ ಶಿಶುನಾಳ ಶರೀಫರ ತತ್ವಪದಗಳಲ್ಲಿ ಆಧ್ಯಾತ್ಮ; ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ

೧೪. ವಿಜಯಕುಮಾರ.ಹ.ನಂ; ೧೯೯೫; ವಚನಕಾರರ ಆಂದೋಲನ, ವಿಶ್ವ ಆಂದೋಲನಗಳ ಹಿನ್ನೆಲೆಯಲ್ಲಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೫. ವಿನೋದಮ್ಮ; ೨೦೦೮; ಆಯ್ದ ವಚನಕಾರ್ತಿಯರ ಚಿಂತನೆಯ ವಿಭಿನ್ನ ನೆಲೆಗಳು; ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು

೧೬. ಸವಿತಾ ಕುಲಕರ್ಣಿ; ೧೯೯೫; ವಚನಗಳಲ್ಲಿ ಕನ್ನಡ ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೭. ಸಂಪದಾ ಸಿ. ಕೆರೆಮನೆ; ೨೦೦೮; ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳ ಪದಗಳು; ಎಂ.ವಿ.ಸಿ. ಸ್ನಾತಕೋತ್ತರ ಸಂಶೋಧನಾ ಕೇಂದ್ರ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೧೮. ಸುಧಾ. ಬಿ.ಎಸ್; ೨೦೦೭; ಅಕ್ಕನ ವಚನಗಳಲ್ಲಿ ಪ್ರತಿಭಟನೆಯ ನೆಲೆಗಳು; ಕಾವ್ಯ ಮಂಡಲ, ಬೆಂಗಳೂರು

**ಪಿಎಚ್.ಡಿ. ಪ್ರಬಂಧಗಳು**

೧. ಅಕ್ಕಮಹಾದೇವಿ ಆರ್.ಸರಗಣಾಚಾರಿ; ೨೦೦೧; ಅಲಕ್ಷಿತ ವಚನಕಾರ್ತಿಯರ ವಚನಗಳ ಆಶಯ ಮತ್ತು ಅಭಿವ್ಯಕ್ತಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೨. ಚಂದ್ರಕಾಂತ ಆರ್.ಬಿ; ೨೦೦೮; ಶರಣರನ್ನು ಕುರಿತ ಪ್ರಾತಿನಿಧಿಕ ನಾಟಕಗಳ ಅಧ್ಯಯನ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೩. ಜಗದೀಶ ಕೆರೆನಳ್ಳಿ; ೨೦೧೦; ತತ್ವಪದ ಅಧ್ಯಯನಗಳು ವಿಮರ್ಶಾತ್ಮಕ ಸಮೀಕ್ಷೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೪. ನಟರಾಜ.ಎಸ್; ೨೦೦೫; ಬೌದ್ಧ ಧರ್ಮ ಮತ್ತು ಅಲ್ಲಮಪ್ರಭುವಿನಲ್ಲಿ ಶೂನ್ಯತೆಯ ಪರಿಕಲ್ಪನೆ: ಒಂದು ತೌಲನಿಕ ಅಧ್ಯಯನ; ಕನ್ನಡ ಭಾಷಾಧ್ಯಯನ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೫. ನಾಗಭೂಷಣ.ಕೆ; ೨೦೦೩; ವಚನಕಾರರ ಶಬ್ಧ ಮತ್ತು ಅರ್ಥ ಮೀಮಾಂಸೆ; ದ್ರಾವಿಡ ಅಧ್ಯಯನ ವಿಭಾಗ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೬. ರುಕ್ಮಿಣಿ.ಕೆ.ಜಿ; ೨೦೦೮; ಭಕ್ತಿ ಮಾರ್ಗದಲ್ಲಿ ಮಹಿಳಾ ಕೀರ್ತನಕಾರರು; ಜಾನಪದ ಅಧ್ಯಯನ ವಿಭಾಗ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೭. ವಿಪ್ಲವಿ; ೨೦೧೧; ತತ್ವಪದ ಸಾಹಿತ್ಯದ ಭಾಷೆ: ಒಂದು ಅಧ್ಯಯನ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೮. ವಾಸುದೇವಮೂರ್ತಿ.ಟಿ.ಎನ್; ೨೦೦೮; ಅಲ್ಲಮಪ್ರಭುವಿನ ವಚನಗಳ ದಾರ್ಶನಿಕ ಮರು ಚಿಂತನೆಯ ವಿಭಿನ್ನ ಸ್ವರೂಪ; ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳ್ಳಿ

೯. ಸರ್ವಮಂಗಳ ಸಕ್ರಿ; ೨೦೦೮; ರಾಯಚೂರು ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೧೦. ಸುರೇಶ.ಎನ್; ೨೦೦೮; ಕನಕದಾಸ: ಒಂದು ಸಾಂಸ್ಕೃತಿಕ ಅಧ್ಯಯನ; ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು

**ಡಿ.ಲಿಟ್. ಪ್ರಬಂಧಗಳು:**

೧. ಸಿದ್ಧಣ್ಣ ಬಿ.ಉತ್ನಾಳ; ೨೦೧೨; ಅನುಭಾವ ಸಾಹಿತ್ಯ ಚಿಂತನ (ಪ್ರಾತಿನಿಧಿಕ ಶೋಧ ಲೇಖನಗಳ ಸಂಕಲನ); ರಾಣಿಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ

**ಉ. ಪತ್ರಿಕೆಗಳು**

೧. ಪ್ರಜಾವಾಣಿ
೨. ವಿಜಯ ಕರ್ನಾಟಕ
೩. ಹೊಸತು ಮಾಸಪತ್ರಿಕೆ

